ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ


# ಕಸ್ತೂರಿ


ಮೇ ೧೯೯೫

ಬೆಲೆ: ರೂ. ೬-೦೦


ಕುರುಡುತನಕ್ಕೆ ಕಾರಣವಾಗುವ ಕಾಯಿಲೆಗಳು

ಆರೋಗ್ಯದಂಗಳ



ದೇವನೊಲಿದ ಜೀವ



ಪ್ರತಿಬಿಂಬ

'ಕಸ್ತೂರಿಯ ಸಂಗ್ರಹದಿಂದ'



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
**ಕೆ. ಶಾಮರಾವ್**

ಸಂಪಾದಕ:
**ಎಸ್.ವಿ. ಜೋಶಿ**

ಸಹಸಂಪಾದಕ:
**ವೆಂಕಟನಾರಾಯಣ**

ನಿರ್ವಹಣೆ:
**ಗೋಪಾಲ ವಾಜಪೇಯಿ**
**ಶ್ರೀಕಾಂತ ಮಳಗಿ**

ಕಲೆ:
**ಪಿ.ಆರ್. ಪಾಟೀಲ**
**ಎಂ.ಎಸ್. ಶಶಿಧರ**

ಮುಖಪುಟ:

'ಕಸ್ತೂರಿ'ಯ
ಸಂಗ್ರಹದಿಂದ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ಕಣ್ಣಮುಂದೆಲ್ಲ ಕನಸುಗಳ ಲೋಕ! ಕಣ್ತೆರೆದು ಕೂತುಬಿಟ್ಟರಾಯಿತು, ಬಣ್ಣ ಬಣ್ಣದ ಕನಸುಗಳು ಕುಣಿದಾಡತೊಡಗುತ್ತವೆ. ಹಸಿವೆ-ನೀರಡಿಕೆ-ನಿದ್ರೆಗಳನ್ನೆಲ್ಲ ಮರೆಸಿಬಿಡುವ ಕನಸುಗಳು! ಹರಿಯತೊಡಗುತ್ತದೆ ಮೋಡಿಯ ಕೋಡಿ. ಯೋಚನೆ-ವಿವೇಚನೆಗೆ ಅವಕಾಶವೇ ಇಲ್ಲದ ಹಾಗೆ ಭೋರ್ಗರೆಯುವ ನಿರಂತರ ಪ್ರವಾಹ. ಈಗಿರುವುದು ಸಾಲದೆಂಬಂತೆ ಮತ್ತಷ್ಟು ಹೊಸ ಆಕರ್ಷಣೆಗಳ ಬಾಣಗಳನ್ನು ತನ್ನ ಬತ್ತಳಿಕೆಯಲ್ಲಿ ತುಂಬಿಕೊಂಡು ಸಿದ್ಧವಾಗಿ ನಿಂತಿದೆ ನಮ್ಮ 'ದೂರದರ್ಶನ.' ನಿಮ್ಮ ಚಿಂತೆಗಳನ್ನೆಲ್ಲ ಮರೆಯಿಸಲು, ನಿಮಗೆ ಸದಾ ಮನರಂಜನೆ ನೀಡಲು ಕಟಿಬದ್ಧವಾಗಿದೆಯಂತೆ ಅದು. ಇನ್ನು ಮುಂದೆ ವಾರಕ್ಕೆ ಒಟ್ಟು ೩೫ಕ್ಕೂ ಹೆಚ್ಚು ಸಿನಿಮಾಗಳು ನಮ್ಮ ದೇಶೀಯ ಕಿರುತೆರೆಯ ಮೇಲೆ ಮೂಡಿಬರಲಿವೆಯಂತೆ.

ಸಂತಸದ ಸಂಗತಿಯೆ?

ಖಂಡಿತ ಅಲ್ಲ. ಈಗಾಗಲೇ ಎಡೆಬಿಡದೇ ನಡೆದಿರುವ ವಿದೇಶೀ ಚಾನಲ್ಲುಗಳ ಜತೆ ಪೈಪೋಟಿಗೆ ತೊಡಗಿರುವ ನಮ್ಮ 'ದೂರದರ್ಶನ' ತನ್ನ ಗಲ್ಲೆ ತುಂಬಿಕೊಳ್ಳುವುದು ದಿಟವಾದರೂ ಜನಮನದ ಮೇಲೆ ಆಗುವ ದುಷ್ಪರಿಣಾಮದ ಕುರಿತು, ಬೆಳೆಯಬೇಕಾದ ವಿದ್ಯಾರ್ಥಿಗಳ ಬೌದ್ಧಿಕ ಸಾಮರ್ಥ್ಯಕ್ಕೆ ಒದಗುವ ಅಡ್ಡಿಗಳ ಕುರಿತು, ಹಗಲುಗನಸುಗಳ ಹಂಬಲದಿಂದ ಕೈಲಿರುವ ಕೆಲಸ ಬಿಟ್ಟು ಸಿನಿಮಾ ನೋಡುತ್ತ ಕೂಡುವ ಸೌಕರಸ್ಥರ ಕುರಿತು, ಇವೆಲ್ಲಕ್ಕಿಂತ ಹೆಚ್ಚಾಗಿ ಒಟ್ಟಾರೆ ದೇಶದ ಸಾಂಸ್ಕೃತಿಕ ಲೋಕದ ಮೇಲೆ ಆಗುವ ಪ್ರಹಾರದ ಕುರಿತು ಅದು ಆಲೋಚಿಸಿದೆಯೆ? ದೂರದರ್ಶನ ದೇಶಕ್ಕೆಲ್ಲ ಕಾಣತೊಡಗಿದ ಮೇಲೆ ವಿದ್ಯಾರ್ಥಿಗಳು ಅಭ್ಯಾಸದಲ್ಲಿ ಹಿಂದುಳಿಯುತ್ತಿದ್ದಾರೆ. ಓದುವ ಸಮಯದಲ್ಲಿ, ಪರೀಕ್ಷಾ ತಯಾರಿಯಲ್ಲಿ ತೊಡಗಿಕೊಂಡಿರಬೇಕಾದ ಸಮಯದಲ್ಲಿ ಕ್ರಿಕೆಟ್ ಆಟದ ನೇರ ಪ್ರಸಾರಗಳ ಕಾಟ. ಜತೆಗೆ ಶುಕ್ರವಾರ ರಾತ್ರಿಯ ಸಿನಿಮಾ, ಎರಡನೆಯ ಚಾನಲ್ಲು, ಉಪಗ್ರಹ ಪ್ರಾದೇಶಿಕ ಪ್ರಸಾರದ ಮೂಲಕ ತೂರಿ ಬರುವ ಕಾರ್ಯಕ್ರಮಗಳು ಇವೆಲ್ಲವುಗಳಿಂದ ನಮ್ಮ ಮಕ್ಕಳಿಗೆ ಓದುವುದಕ್ಕೆ ಸಮಯವೇ ಸಿಗುತ್ತಿಲ್ಲ. ಅವರಿಗೆ ನಮ್ಮ ಕಲೆ, ಸಾಹಿತ್ಯ, ಸಂಸ್ಕೃತಿ ವಿಷಯವಾದ ಆಸಕ್ತಿಯೇ ಕಡಿಮೆಯಾಗಿ ಅವರ ಮನಸ್ಸೆಲ್ಲ ಕೇವಲ ಸಿನಿಮಾಮಯವಾಗಿಬಿಟ್ಟಿದೆ. ಯು.ಜಿ.ಸಿ. ಕಾರ್ಯಕ್ರಮಗಳಂಥ, ಶೈಕ್ಷಣಿಕ ಪ್ರಸಾರಗಳನ್ನು ನೋಡುವ ವಿದ್ಯಾರ್ಥಿಗಳೆಷ್ಟು? ಅಂಥ ಕಾರ್ಯಕ್ರಮ ಇರುವುದೂ ಎಷ್ಟೋ ವಿದ್ಯಾರ್ಥಿಗಳಿಗೆ ಗೊತ್ತಿಲ್ಲ!

'ದೂರದರ್ಶನ'ದ ಈ ಕ್ರಮ ಜನರನ್ನು ಅಪ್ರತ್ಯಕ್ಷ ಗೃಹಬಂಧನದಲ್ಲಿಡುವಲ್ಲಿ, ವ್ಯಕ್ತಿ-ವ್ಯಕ್ತಿಗಳ ಸಂಬಂಧದ ಕೊಂಡಿ ಕಳಚುವಲ್ಲಿ ಮಾತ್ರ ಸಫಲವಾಗಿದೆ.

ಆದರೆ ಇದು ಅಪೇಕ್ಷಣೀಯವೆ?

• ವ್ಯವಸ್ಥಾಪಕ ಸಂಪಾದಕ



# ಸಹಚಿಂತನ

## ನಿದ್ರಾಲೋಕದ ಆಂತರ್ಯ

ಎಪ್ರಿಲ್ ಸಂಚಿಕೆಯಲ್ಲಿನ ಡಾ. ಕೊಣ್ಣೂರರ ನಿದ್ರೆಯ ಕುರಿತಾದ ಲೇಖನ 'ಆರೋಗ್ಯದಂಗಳ'ದಲ್ಲಿ ಮೂಡಿ ಬಂದಿದ್ದು ನಿದ್ರಾಲೋಕದ ಆಂತರ್ಯವನ್ನು ಸುಸ್ಪಷ್ಟವಾಗಿ ವಿಶದೀಕರಿಸಿದೆ.

ನಿದ್ರೆಯ ಬಗೆಗಿನ ಸಂಶೋಧನೆ, ಲಘು, ದೀರ್ಘ ನಿದ್ರೆಗಳ ವಿಧಗಳು, ಅವುಗಳಿಂದಾಗುವ ಪರಿಣಾಮ, ಉಪಪರಿಣಾಮಗಳು, ಮುಖ್ಯ ಲಕ್ಷಣಗಳು ಅಲ್ಲದೆ ಮಾನಸಿಕ, ದೈಹಿಕ ಆರೋಗ್ಯ ಕಾಯ್ದುಕೊಳ್ಳುವಲ್ಲಿ ನಿದ್ರೆಯ ಪಾತ್ರವನ್ನು ವಿವರಿಸಿದ್ದೂ ಅಷ್ಟೇ ಮಹತ್ವದ್ದು.

ಗೋಕಾಕ — ಅಶೋಕ ದಡ್ಡೀಕರ

ಬೆಳಗಾವಿ — ಶ್ರೀದೇವಿ ಮರಿಗೇರಿ

'ನಿದ್ರೆ ಮತ್ತು ಕನಸುಗಳು' ಈ ಕುರಿತು ಡಾ. ಕೊಣ್ಣೂರ ಅವರು ಉತ್ತಮವಾಗಿ ವಿವರಿಸಿದ್ದಾರೆ.

ನಿದ್ರೆ ಬಾರದೆಂದು ನಿದ್ರೆಯ ಮಾತ್ರೆಗಳನ್ನು ತೆಗೆದುಕೊಳ್ಳುವವರಿಗೆ ಹಾಗೂ ನಿದ್ರೆ ಬಂದೀತೆಂದು ಗಾಂಜಾ, ಸಿಗರೇಟನ್ನು ಸೇದುವವರಿಗೆ ಈ ಲೇಖನ ಉತ್ತಮ ತಿಳಿವಳಿಕೆ ನೀಡುತ್ತದೆ.

ಅನವಾಲ — ಶ್ರೀಪಾದ ವಿ. ಜೋಶಿ

ಎಪ್ರಿಲ್ ಸಂಚಿಕೆಯ 'ಆರೋಗ್ಯದಂಗಳ'ದಲ್ಲಿ ಬಂದ 'ನಿದ್ರೆ ಮತ್ತು ಕನಸುಗಳು' ಎಂಬ ಲೇಖನ ಬರೆದ ಡಾ. ಪ್ರಕಾಶ ಕೊಣ್ಣೂರ ಅವರಿಗೆ ಧನ್ಯವಾದಗಳು. ಆದರೆ ಲೇಖನದಲ್ಲಿ ಕನಸುಗಳ ಬಗ್ಗೆ ಯಾವುದೇ ಸಂಪೂರ್ಣ ಮಾಹಿತಿ ಇಲ್ಲದೆ ಅಪೂರ್ಣವಾಗಿರುವಂತೆ ಲೇಖನ ಭಾಸವಾಯಿತು.

ಮಳ್ಳಿ — ದೇವು ಶಹಾಪೂರ

(ಸ್ಥಳಾಭಾವದಿಂದಾಗಿ ಎಲ್ಲ ವಿಷಯಗಳನ್ನೂ ವಿವರಿಸುವುದು ಕಷ್ಟ. ಇಷ್ಟಕ್ಕೂ ಕನಸುಗಳ ಬಗೆಗೆ ಪ್ರಸ್ತುತದಲ್ಲಿ ನಡೆಯುತ್ತಿರುವ ಸಂಶೋಧನೆಗಳನ್ನೂ ಒಳಗೊಂಡಂತೆ ಈಗಾಗಲೇ ಒಂದು ಲೇಖನವನ್ನು ಪ್ರಕಟಿಸಿದ್ದೇವಲ್ಲ? - ಸಂ.)

'ನಿದ್ರೆ ಮತ್ತು ಕನಸುಗಳು' 'ಆರೋಗ್ಯದಂಗಳ'ದಲ್ಲಿ ಬಂದಿರುವ ಆಸಕ್ತಿದಾಯಕ ವೈದ್ಯಕೀಯ ಲೇಖನ ಹಾಗೂ ಈ 'ಆರೋಗ್ಯದಂಗಳ' ಸಂಗ್ರಹಕ್ಕೆ ಯೋಗ್ಯವಾದದ್ದು.

ನೀತಿಗೆರೆ — ಗೌರಿ-ರಾಗರತಿ

## ರ್‍ವಾಂಡಾ

'ಮಧುರ' ಅವರ 'ರ್‍ವಾಂಡಾ ನರಮೇಧದ ನಂತರ....' ಲೇಖನ ಓದುತ್ತಿದ್ದ ಹಾಗೆ ನರಮೇಧದ ದೃಶ್ಯಗಳೆಲ್ಲ ಕಣ್ಣಿಗೆ ಕಟ್ಟಿದಂತಾಗಿ ನಿಜವಾಗಿ ಈ ವರ್ಗ ಸಂಘರ್ಷಕ್ಕೆ ಕೊನೆಯೇ ಇಲ್ಲವೆ? ಎನಿಸದಿರಲಿಲ್ಲ.

ಬೆಂಗಳೂರು — ಅಕ್ಕಿರಾಂಪುರ ನಟರಾಜ

## ಸಾಕ್ಷಿ

'ಪುಸ್ತಕ ವಿಭಾಗ'ದಲ್ಲಿ ಪ್ರಕಟವಾದ ಖ್ಯಾತ ಕಾದಂಬರಿಗಾರ್ತಿ 'ಗಂಗಾ' ಪಾದೇಕಲ್ ಅವರು ಬರೆದ ಕಿರುಕಾದಂಬರಿ 'ಸಾಕ್ಷಿ' ನಮ್ಮನ್ನು ತುಂಬಾ ಆಳದವರೆಗೆ ಕೊಂಡೊಯ್ಯುತ್ತದೆ. ಒಬ್ಬ ನಿರುದ್ಯೋಗಿ ಪದವೀಧರ ನಿರಾಶ್ರಿತನ ಬಾಳಿಗೆ ಬೆಳಕಾಗಲು ಜನ ಸಹಾಯ ಮಾಡುವುದಿಲ್ಲ. ದಿನವೂ ಹೀಗೆಯೇ ಎಷ್ಟು ಸಸಿಗಳು ಮುರುಟ ಹೋಗುತ್ತವೆಯೋ?

ಶೆಟಗೇರಿ — ಸಂತೋಷ ನಾಯಕ

## ಮೊರಾರ್ಜಿ

ಶತಾಯುಷಿ ಮೊರಾರ್ಜಿ ದೇಸಾಯಿ ಅವರ ಬದುಕಿನ ಅನುಭವಗಳನ್ನು ಓದಿದಾಗ ಇದ್ದವರಲ್ಲಿ ಶುದ್ಧಹಸ್ತರಾದ ಮೊರಾರ್ಜಿಯವರೇ ಮೇಲು ಎನಿಸಿತು. ಈಗಿನ ರಾಜಕಾರಣಿಗಳನ್ನು ಇವರಿಗೆ ಹೋಲಿಸಿದರೆ ಕಾಗೆ-ಕೋಗಿಲೆ ನೆನಪಾಗುತ್ತದೆ. ಕೋಗಿಲೆ ಎಲ್ಲಿದ್ದರೂ ಕೋಗಿಲೆಯೇ;

ನೀತಿಗೆರೆ — ಗೌರಿಪ್ರಿಯ

ಎಪ್ರಿಲ್ ೯೫ರ ಸಂಚಿಕೆಯಲ್ಲಿ ಮೂಡಿ ಬಂದ 'ವಾಸುಕಿ'ಯವರ 'ಇಪ್ಪತ್ತೈದು ಹುಟ್ಟುಹಬ್ಬಗಳ ಶತಾಯುಷಿ ಮೊರಾರ್ಜಿ ದೇಸಾಯಿ'ಯವರ ಬಗೆಗಿನ ಬರೆದ ಲೇಖನ ಅವರ ಜೀವನ ಕ್ರಮವನ್ನು ಚೆನ್ನಾಗಿ ಪರಿಚಯ ಮಾಡಿಕೊಟ್ಟಿತು. 'ಭಾರತಕ್ಕೆ ಒಳ್ಳೆಯ ದಿನಗಳು ಬರಲಿವೆ' ಎಂಬ ಅವರ ನಂಬಿಕೆಯನ್ನು ನಿಜ ಮಾಡಿ ತೋರಿಸಲು ನಮ್ಮ ರಾಜಕಾರಣಿಗಳು ಅವರಂತೆ ತಮ್ಮ ಕೆಲಸದಲ್ಲಿ ಶ್ರದ್ಧೆ, ಶಿಸ್ತು ಮುಂತಾದ ಗುಣಗಳನ್ನು ಬೆಳೆಸಿಕೊಳ್ಳಬೇಕು.

ಹೂಲಿಹಳ್ಳಿ — ಎಚ್.ಎಂ. ಬಸವರಾಜ

ಅತ್ಯುತ್ತಮ ಆರೋಗ್ಯ ಲೇಖನ ಸಹಿತ ಪ್ರಬಂಧಗಳನ್ನೊಳಗೊಂಡ ಎಪ್ರಿಲ್ ಸಂಚಿಕೆ ಜ್ಞಾನದ ಖಜಾನೆಯೇ ಸರಿ. ಮೊರಾರ್ಜಿಯವರ ವ್ಯಕ್ತಿತ್ವವನ್ನು ಎಳೆಎಳೆಯಾಗಿ ನಿರೂಪಿಸಿದ್ದಕ್ಕೆ ಕೃತಜ್ಞತೆಗಳು. ಅವರ ಸ್ವಯಂಶಿಸ್ತು, ಸಾಧನೆ ನಮ್ಮಂಥ ಯುವಕರಿಗೆ ಅನುಕರಣೀಯ.

ನಿಲೋಗಲ್ — ಶಿವರಾಜ ಕರಡ್ಡಿ

## ಕಡಲ ದೈತ್ಯ

ದೈತ್ಯಜೀವಿ ತಿಮಿಂಗಿಲದ ಬಗೆಗಿನ ಲೇಖನ ಓದಿದಾಗ ಮೈಯೆಲ್ಲ ರೋಮಾಂಚನವಾಯಿತು. ಇಂತಹ ಅಮಾಯಕ ಜೀವಿಗಳ ಹತ್ಯೆ ಶೋಚನೀಯ. ಇದರ ಉಳಿವಿಗೆ ಎಲ್ಲರೂ ಹೋರಾಡುವುದು ಮುಖ್ಯ ಎನಿಸಿತು.

ಭದ್ರಾವತಿ — ಎಚ್.ಸಿ. ಚಂದ್ರಿಕಾ

## ಲೇಖ ನೆನಪಿಸಿದ ಕಾಫಿ ಸ್ತೋತ್ರ

ಮಾರ್ಚ್ ೯೫ರ 'ಕಸ್ತೂರಿ'ಯಲ್ಲಿ ಎಂ.ಕೆ. ಇಂದಿರಾರ 'ಕಾಫಿಯ ಕಥೆ' ಕುರಿತು ಈ ಪತ್ರ.

ಮಲೆನಾಡ ಪರಿಸರದಲ್ಲಿ ಬೆಳೆದು ಬಂದ ನಮಗೆ ಕಾಫಿಯ ಬಗೆಗಿನ ಈ ಪ್ರಾತಃಸ್ಮರಣೀಯ ಶ್ಲೋಕವು ಚಿರಪರಿಚಿತ.

**(ತಿರುಪತಿ ತಿಮ್ಮಪ್ಪನ ಕ್ಷಮೆ ಕೋರಿ)**

*ಉಪ್ಪಿಟ್ಟುಪ್ಪಿಟ್ಟು ಗೋವಿಂದಾ*
*ರೊಟ್ಟಿಯೇ ಗರುಡಧ್ವಜ*
*ಕಾಫಿಯೇ ಕಮಲಾಕಾಂತ*
*ತಂಗಳನ್ನಂ ಮಂಗಳಂ ಕುರು.*

ಬೆಂಗಳೂರು — ಎಚ್.ವಿ. ರಂಗನಾಥ

## ಕೈಕೊಟ್ಟ ಕಿರುಬರಹ

೧೯೯೫ರ ಮಾರ್ಚ್ ತಿಂಗಳ ಸಂಚಿಕೆಯಲ್ಲಿ ೭೯ನೆ ಪುಟದಲ್ಲಿ ಪ್ರಕಟಿಸಿರುವಂತೆ, ಬ್ಯಾಟರಿ ಶೆಲ್ಲುಗಳ ಆಯುಷ್ಯ ಹೆಚ್ಚಿಸಲು ಹೋಗಿ ಶೆಲ್ಲಿನಲ್ಲಿ ಮೊದಲೇ ಇದ್ದ ಶಕ್ತಿಯೂ ಕುಂದಿಹೋಗಿದೆ. ನಿಮ್ಮ 'ಕಸ್ತೂರಿ' ಒಳ್ಳೆಯ ಮಾಸಿಕವೆಂದು ಆರು ರೂಪಾಯಿ ಕೊಟ್ಟು ಕೊಂಡ ತಪ್ಪಿಗೆ ಎರಡು ದಿನದ ಅಡುಗೆಗಾಗುವ ಉಪ್ಪು ಮತ್ತು ಒಂದು ತಿಂಗಳು ಬಳಕೆಯಾಗುವಷ್ಟು ಶೆಲ್ಲಿನ ಸಾಮರ್ಥ್ಯ ನಷ್ಟವಾಗಿದೆ. ಏಕಿಂಥ ಕೆಲಸಕ್ಕೆ ಬಾರದ ನಷ್ಟ ವಿದ್ಯೆಗಳನ್ನು ಪ್ರಕಟಿಸುತ್ತೀರಿ ಸ್ವಾಮಿ? ಇಂಥ ಬರಹಗಳನ್ನು ಪ್ರಕಟಿಸುವ ಮೊದಲು ನೀವು ಪ್ರಯೋಗ ನಡೆಸಿ ನೋಡಿ.

ಬೆಂಗಳೂರು — ಕೆ. ರಾಜೇಶ

**(ಖಚಿತಪಡಿಸಿಕೊಂಡೇ ಲೇಖನಗಳನ್ನು ಪ್ರಕಟಿಸುವುದು 'ಕಸ್ತೂರಿ'ಯು ಆರಂಭದಿಂದಲೂ ಹಾಕಿಕೊಂಡು ಬಂದಿರುವ ಸಂಪ್ರದಾಯ. ಆದರೆ ಪ್ರಯೋಗಗಳ ಮೂಲಕ ಖಚಿತಪಡಿಸಿಕೊಂಡೇ ಲೇಖನಗಳನ್ನು ಪ್ರಕಟಿಸುವುದು ವ್ಯಾವಹಾರಿಕವಾಗಿ ಸಾಧ್ಯವಿಲ್ಲದ ಮಾತು. ಹೆಚ್ಚಿನ ಪ್ರಸಂಗಗಳಲ್ಲಿ ನಂಬಲರ್ಹವೆನಿಸಿದ ಆಧಾರ ಗ್ರಂಥಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ನೀವು ಸೂಚಿಸಿದ ವಿಷಯಕ್ಕಾಗಿ ನಾವು ಬಳಸಿಕೊಂಡದ್ದು ಅಮೆರಿಕದ ಮಯಾಮಿ, ಫ್ಲಾರಿಡಾದ ಪಿ.ಎಸ್.ಐ. ಅಸೋಶಿಯೇಟ್ಸ್‌ದವರು ಪ್ರಕಟಿಸಿದ 'ಹಿಂಟ್ಸ್ ಆ್ಯಂಡ್ ಹೆಲ್ಪ್ಸ್' ಹೌಸ್‌ಹೋಲ್ಡ್ ಡಿಕ್ಷನರಿಯ ೧೮೮ರ ಆವೃತ್ತಿ, ಪುಟ ೧೨೩. -ಸಂ.)**

## ಗಳಗನಾಥರ ಸ್ಮರಣೆ

ಮಾರ್ಚ್ ೧೯೯೫ರ 'ಕಸ್ತೂರಿ'ಯಲ್ಲಿ ಗಳಗನಾಥರು ಹಾಗೂ ಆರೋಗ್ಯದಂಗಳದ 'ಪವಿತ್ರ ಸ್ನಾನದ ಪರಮ ಸಂಕಟಗಳು' ಲೇಖನಗಳು ಚಿತ್ರಗಳನ್ನೊಳಗೊಂಡಂತೆ ಸೊಗಸಾಗಿ ಮೂಡಿ ಬಂದಿವೆ. "ಹಳೆಯ ಸಾಲ ತೀರಿಸುವುದಕ್ಕೆಂದು ಹೊಸ ಸಾಲ ಮಾಡಿ, ನನ್ನ ಎಲ್ಲ ಗ್ರಂಥಗಳನ್ನೂ ಅಚ್ಚು ಹಾಕಿಸಿದ್ದೇನೆ. ಅವುಗಳನ್ನು ಹೊತ್ತುಕೊಂಡು ಮನೆ ಮನೆಗೆ ಹೋಗಿ ಮಾರಾಟ ಮಾಡುತ್ತಲಿದ್ದೇನೆ." ಸರಸ್ವತಿ ಪುತ್ರರೆನಿಸಿದ ಗಳಗನಾಥರ ಈ ಮಾತುಗಳು ಓದುಗನ ಮನಮಿಡಿಯುವಂತಿವೆ. ಇಂಥ ಪುಸ್ತಕ ದಾಸರು (ಭಕ್ತರು) ಈಗ ಯಾರಿದ್ದಾರೆ?

ಮಂಡ್ಯ — ಪಿ. ಜಮಾಯಿಗೌಡ

ಗಳಗನಾಥ ಹಾಗೂ ಅಲಂಕಾರಭೂಷಿತ ಹೆಣ್ಣಿನ ಆಕರ್ಷಕ ಮುಖಪುಟವನ್ನು ಹೊತ್ತು ತಂದ ಮಾರ್ಚ್ ೯೫ರ ಕಸ್ತೂರಿ ಮಾಸ ಪತ್ರಿಕೆ ಸಂಗ್ರಹಯೋಗ್ಯ ಸಂಚಿಕೆ.

ಬೆಂಗಳೂರು — ಅಕ್ಕಿರಾಂಪುರ ನಟರಾಜ್

ಮಾರ್ಚ್ ೯೫ 'ಕಸ್ತೂರಿ' ಸಂಚಿಕೆಯಲ್ಲಿ ಡಾ. ಕೃಷ್ಣಮೂರ್ತಿ ಕಿತ್ತೂರ ಹಾಗೂ ಇತರ ಬರಹಗಾರರು ಬರೆದ "ಗಳಗನಾಥ"ರ ಕುರಿತಾದ ಲೇಖನಗಳು ತುಂಬಾ ಮೌಲಿಕವಾಗಿದ್ದವು.

ಕಮ್ಮತ್ತಹಳ್ಳಿ — ಪ್ರೊ. ಶಿವಕುಮಾರ ಕಲ್ಲೂರ

"ಪವಿತ್ರ ಸ್ನಾನದ ಪರಮ ಸಂಕಟಗಳು" ಎಂಬ ಲೇಖನ ಜನ ಸಾಮಾನ್ಯರಲ್ಲಿ ವೈಜ್ಞಾನಿಕ ಅರಿವನ್ನು ಮೂಡಿಸುವಲ್ಲಿ ತುಂಬಾ ಉಪಯುಕ್ತವಾಗಿದೆ.

ಮೂಢ ನಂಬಿಕೆಯಿಂದ ಸ್ವಚ್ಛತೆಯತ್ತ ಗಮನಕೊಡದೆ ನಾವೇ ಸೃಷ್ಟಿಸಿದ ಮಲಿನ ಕೊಳದಲ್ಲಿ ಮಿಂದು ಪುಣ್ಯವನ್ನು ಅಪೇಕ್ಷಿಸಿದರೆ ಸಿಗುತ್ತದೆಯೇ?

ಸ್ವಚ್ಛವಾದ ನೀರಿನಲ್ಲಿ ಸ್ನಾನ ಮಾಡಿ ದೇಹವನ್ನು ಸ್ವಚ್ಛವಾಗಿಸಿ ಒಳ್ಳೆಯ ಭಾವನೆಗಳಿಂದ ಮನಸ್ಸನ್ನು ಸ್ವಚ್ಛವಾಗಿಟ್ಟುಕೊಂಡರೆ ಸಾಲದೆ?

ಶಿವಮೊಗ್ಗ — ಎಸ್. ಜಯದೇವಸ್ವಾಮಿ

---

(ಆರನೆ ಪುಟಕ್ಕೆ)






ಅಂತರಂಗ



# ಚಿಳಕಿಂಡಿ

ತಾನು ಎಲ್ಲವನ್ನೂ ಬಲ್ಲೆನೆಂದು ತಿಳಿಯುವವನೆ ಮಹಾ ಮೂರ್ಖ

- ಮಹಾಭಾರತ

ಸೂರ್ಯ ಮುಳುಗಿದನೆಂದು ಅಳುತ್ತಾ ಕುಳಿತರೆ ನಕ್ಷತ್ರಗಳನ್ನು ನೋಡುವ ಭಾಗ್ಯವನ್ನು ಕಳೆದುಕೊಳ್ಳುತ್ತೀ.

- ವಿವೇಕಾನಂದ

ಹೊಸ ಕುದುರೆಯನ್ನು ನಾಳೆ ಬೆಳಿಗ್ಗೆ ಹೊಗಳು, ಹೊಸ ಹೆಂಡತಿಯನ್ನು ಎರಡನೇ ವರ್ಷ ಹೊಗಳು, ಭಾವನನ್ನು ಮೂರನೇ ವರ್ಷ ಹೊಗಳು, ಆದರೆ ನಿನ್ನನ್ನು ಹೊಗಳಿಕೊಳ್ಳುವ ಹುಚ್ಚತನವನ್ನು ಮಾತ್ರ ಎಂದಿಗೂ ಮಾಡಬೇಡ.

- ಐರ್ಲೆಂಡಿನ ಗಾದೆ

ಸಂಸ್ಕೃತಿ ಇಲ್ಲದ, ಸಂಸ್ಕೃತಿಗಾಗಿ ಅಲ್ಲದ ವಿರಾಮ ವಿನಾಶಕ್ಕೆ ದಾರಿ.

- ಕುವೆಂಪು

ಚಟವನ್ನು ಬಿಡುವುದು ಬಲು ಕಷ್ಟ. ಊಟವಾದ ನಂತರ ಮಾತ್ರ ಒಂದು ಸಿಗರೇಟನ್ನು ಸೇದಬೇಕೆಂದು ನೀವು ನಿರ್ಧರಿಸಿದಿರೋ ದಿನಕ್ಕೆ ಎರಡಲ್ಲ, ಹನ್ನೆರಡು ಸಲ ಊಟ ಮಾಡಲು ಪ್ರಾರಂಭಿಸುತ್ತೀರಿ.

- ಎಂ.ಆರ್.ಎಸ್.

## ಸ್ಥಿರ ಶೀರ್ಷಿಕೆಗಳು

### (ಮೂರನೆ ಪುಟದಿಂದ)

ಮಾರ್ಚ್ ತಿಂಗಳ 'ಕಸ್ತೂರಿ'ಯಲ್ಲಿ ಡಾ. ಬಿ.ಬಿ. ಪಾಟೀಲರ 'ಪವಿತ್ರ ಸ್ನಾನದ ಪರಮ ಸಂಕಟಗಳು' ಲೇಖನ ಪರಿಪೂರ್ಣವಾಗಿತ್ತು. 'ರ್ಹಿನೋಸ್ಪೊರಿಡಿಯಾಸಿಸ್' ಎಂಬ ಕಲ್ಪನೆಗೂ ಮೀರಿದ ರೋಗದ ಪರಿಚಯ ಮಾಡಿ ಕೊಟ್ಟಿದ್ದಕ್ಕೆ ಧನ್ಯವಾದಗಳು. ಹೋಮಿಯೋಪಥಿಯಿಂದ ನಮಗೆ ಸಮಗ್ರ ಚಿಕಿತ್ಸೆ ದೊರೆಯುವುದು ಖಂಡಿತ ಎಂದು ನನ್ನ ಭಾವನೆ.

**ಹುಬ್ಬಳ್ಳಿ ಶ್ರೀಮತಿ ಅನುರಾಧಾ ಅ. ಚಂದಾವರಕರ**

ಪುಸ್ತಕ ವಿಭಾಗದಲ್ಲಿ ಪ್ರಕಟವಾದ "ವಿದ್ಯಾರ್ಥಿಗಳೇ ಯಶಸ್ಸು ಕನಸಲ್ಲ" ಎಂಬ ಲೇಖನ ನಿಜಕ್ಕೂ ವಿದ್ಯಾರ್ಥಿಗಳ ಬಾಳಿಗೆ ಜ್ಯೋತಿಯಂತೆ ಬೆಳಕು ಚೆಲ್ಲಿದೆ. ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ ಬರೆದ ಲೇಖಕರಿಗೆ ಮತ್ತು ಪ್ರಕಟಿಸಿದ ಪತ್ರಿಕೆಗೆ ನನ್ನ ಹೃದಯ ಪೂರ್ವಕ ವಂದನೆಗಳು.

**ಗನ್ನಾಯ್ಯನಹಳ್ಳಿ ವಿ. ನಿರ್ಮಲಾ ಪ್ರಭಾಕರ್**

ಮಾರ್ಚ್ ೧೯೮೫ರ ಸಂಚಿಕೆಯಲ್ಲಿ ಎಂ.ಕೆ. ಇಂದಿರಾರವರ ಕಾಫಿಯ ಕಥೆ, ಆ್ಯಂಬ್ರೋಜ್ ಬೀಯರ್ಸ್‌ನ ಕಟು ಹಾಸ್ಯ ಕಥೆಗಳು ಮನಕ್ಕೆ ಮುದನೀಡಿತು. ಅಲ್ಲದೇ ಇತರ ಲೇಖನಗಳೂ ಉಪಯುಕ್ತವಾಗಿದ್ದವು. ಕಸ್ತೂರಿಯ ಪ್ರತಿ ಸಂಚಿಕೆಯು ಸಂಗ್ರಹ ಯೋಗ್ಯವಾಗಿರುತ್ತದೆ.

**ಹಳೇಹಳ್ಳಿ ಎಚ್.ಎನ್. ಕಿರಣಕುಮಾರ್**

ಮಾರ್ಚ್ ೧೯೮೫ರ ಸಂಚಿಕೆಯ ಪುಸ್ತಕ ವಿಭಾಗದಲ್ಲಿ ಪ್ರಕಟಿಸಿದ "ವಿದ್ಯಾರ್ಥಿಗಳೇ ಯಶಸ್ಸು ಕನಸಲ್ಲ" ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾಗಿದೆ.

**ನರೇಗಲ್ ಟ.ಡಿ. ಹೂಗಾರ**

ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾಗಿರುವ ಕಟು ಹಾಸ್ಯ ಕಥೆಗಳು ರಂಜಿಸಿದರೆ, ಪುಸ್ತಕ ವಿಭಾಗದ 'ವಿದ್ಯಾರ್ಥಿಗಳೇ ಯಶಸ್ಸು ಕನಸಲ್ಲ' ಅಮೂಲ್ಯ ಕೊಡುಗೆ

**ಬೆಂಗಳೂರು ಕೆ.ವಿ. ರಾಜಲಕ್ಷ್ಮಿ**

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೫ ಮೇ ೧೯೯೫ ಸಂಚಿಕೆ: ೯

## ಇಟ್ಟಿಗೆ...

ಇಟ್ಟಿಗೆ ಭಟ್ಟಿಗೆ ಅವರಿಬ್ಬರು
ಒಟ್ಟೊಟ್ಟಿಗೆ ಬಂದರು.
ಒಟ್ಟಿದ ರಾಶಿಗಳೊಂದೊಂದನೆ
ತಟ್ಟಿದರು, ಮುಟ್ಟಿದರು.
''ಕಟ್ಟಿಗೆಯೂ ನಾಚಬೇಕು, ಅಷ್ಟು
ಗಟ್ಟಿ ಇಟ್ಟಿಗೆ....
ತುಟ್ಟಿ-ಗಿಟ್ಟಿ ತಕರಾರು
ಬಿಟ್ಟೊಬಿಯ್ರಿ" ಎಂದನವ.
''ಹೇರಿಬಿಡು ಗಾಡಿಗೆ, ನಾವ್ ಮತ್ತೆ
ಭೆಟ್ಟಿಯಾಗುವಾ."

* * *

ಒಂದು ರಾಶಿಗೆ ಅಳುಕು ಅಂಜಿಕೆ.
''ಬಂದೆನಲ್ಲ ನದಿಯ ದಡಕೆ....
ನೀರಿನಲ್ಲಿ ನಿಲ್ಲಬೇಕು, ಬಿಸಿಲು
ಮಳೆಯ ಗೆಲ್ಲುವೆನೆ?
ಸೇತುವೆಯಾಗಿಸುವರೆನ್ನ
ಅಯ್ಯೋ, ನೋವ ತಾಳೆನು...."

ಇನ್ನೊಂದಕೆ ಬಲು ಮುದವು
ಬಂದಿಳಿಯಿತು ಭವ್ಯ ಸ್ಥಳಕೆ.....
''ಭವನದಲ್ಲಿ ಅಡ್ಡಗೋಡೆ!
ನಿಲ್ಲಲಿಲ್ಲಿ ಅಡ್ಡಿಯಿಲ್ಲ.
ಮೇಲೆ ನೆರಳು, ಕೆಳಗೆ ತಂಪು.
ಬಿಸಿಲು-ಮಳೆಯ ಬಾಧೆಯಿಲ್ಲ."

* * *

ಪೂಲು ಜನರ ಹೃದಯಗಳನು
ಒಟ್ಟೊಟ್ಟಿಗೆ ಬೆಸೆಯಿತು.
ಹೂವು-ಗಂಧ ಮಕರಂದದ
ಮಾಲೆಯನ್ನೇ ಹೊಸೆಯಿತು.

* * *

ಅಡ್ಡಗೋಡೆ ಮನಸುಗಳನು
ಕೆಡಿಸಿ ಮುದವ ಕಸಿಯಿತು.
ತಕರಾರಿನ ತಲವಾರನು
ಒಳಗೊಳಗೇ ಮಸೆಯಿತು.

• ವೃಷಭೇಂದ್ರಯ್ಯ

# ಮೈಸೂರಿನ ರೇಲ್ವೆ ಮ್ಯೂಸಿಯಂ

ಚಿತ್ರ-ಲೇಖನ:
**ಟಿ.ಎಸ್. ಲಲಿತಾ**

ರಾಜಮಹಾರಾಜರು ಆಳಿ, ಇತಿಹಾಸದ ಪುಟಗಳಿಗೆ ಸೇರಿಹೋದ ಕರ್ನಾಟಕದ ಚರಿತ್ರೆ ರೋಮಾಂಚನಗೊಳಿಸುವಂಥದ್ದು, ರಂಜನೀಯವಾದದ್ದು. ಈ ರಾಜರ ಆಶ್ರಯದಲ್ಲಿ ನಾಡು ಬೆಳೆದು ಪ್ರಗತಿಪಥದತ್ತ ಸಾಗಿತು. ಈ ಚೆಲುವ ಕನ್ನಡ ನಾಡಿನ ಸಸ್ಯ ಸಂಪತ್ತು, ಜಲಸಂಪತ್ತು ಅಪಾರ. ಶಿಲ್ಪ, ಸಾಹಿತ್ಯ, ಸಂಗೀತ, ಕಲೆ, ಎಲ್ಲ ವರ್ಗಗಳಲ್ಲಿನ ತನ್ನ ಹಿರಿಮೆಯಿಂದಾಗಿ ಭೂಪಟದಲ್ಲೇ ಒಂದು ವಿಶಿಷ್ಟ ಸ್ಥಾನ ಗಳಿಸಿದೆ ಕರ್ನಾಟಕ. ನಾಡಿನ ಒಂದೊಂದು ಊರು, ನಗರವೂ ಪ್ರೇಕ್ಷಣೀಯ. ದೇವಾಲಯಗಳಿವೆ, ಐತಿಹಾಸಿಕ ಕೋಟೆ ಕೊತ್ತಲಗಳಿವೆ, ಇನ್ನಿತರ ಭೇಟಿ ಕೊಡಲೇ ಬೇಕಾದ, ಕಂಡು ತಣಿಯಬೇಕಾದ, ಅಡ್ಡಾಡಿ ಅರಿಯಬೇಕಾದ, ಅನೇಕ ಸ್ಥಳಗಳಿವೆ. ಇವುಗಳಲ್ಲಿ ಮೈಸೂರು ಮುಖ್ಯವಾದದ್ದು. ಯಾಕೆಂದರೆ ಚೆಂದದ ಊರಿದು ಮೈಸೂರು.




• ಚಾಮುಂಡಿ ಗ್ಯಾಲರಿ



• ಈ ರೈಲು ಸವಾರಿ ಪುಟಾಣಿಗಳಿಗಷ್ಟೇ ಅಲ್ಲ, ಹಿರಿಯರಿಗೂ ಮಜ ನೀಡುತ್ತದೆ.

• ಒಂದು ಹಳೆಯ ರೈಲು ಇಂಜನ್ನಿನ ಮಾದರಿ



**ಇದೊಂದು ವಿಶಿಷ್ಟ ಸಂಗ್ರಹಾಲಯ ಬಹು ಜನರ ಲಕ್ಷ್ಯಕ್ಕೆ ಬಾರದಿದ್ದರೂ ನಮ್ಮ ರೇಲ್ವೆಯು ನಡೆದು ಬಂದ ದಾರಿಯನ್ನು ಕಣ್ಣೆದುರು ನಿಲ್ಲಿಸುತ್ತದೆ.**

ಪ್ರವಾಸಿಗರನ್ನು ಕೈಬೀಸಿ ಕರೆದು ಕಣ್ಮನ ತಣಿಸುತ್ತಿರುವ, ಒಮ್ಮೆ ರಾಜಧಾನಿಯಾಗಿ ಮೆರೆದ ಮೈಸೂರಿನಲ್ಲಿ ಸಂದರ್ಶಿಸಬೇಕಾದ ಸ್ಥಳಗಳನೇಕ. ಅವುಗಳಲ್ಲಿ ನಗರದ ನಡುವಿರುವ 'ರೇಲ್ವೇ ಮ್ಯೂಸಿಯಂ' ಕೂಡ ಒಂದು.

'ಕೇಂದ್ರ ಆಹಾರ ಸಂಶೋಧನಾಲಯ'ದ ಎದುರು ಸಿಟಿ ರೇಲ್ವೆ ಸ್ಟೇಷನ್ ಹಿಂಬದಿಗೆ ಇರುವ ವಿಶಾಲ ಬಯಲು ಪ್ರದೇಶದಲ್ಲಿ ಬಹಳಷ್ಟು ಮಂದಿಯ ಉತ್ಸಾಹ ಕಲ್ಪನಾಶಕ್ತಿಗಳ, ಸಾಕಾರವಾಗಿ ರೂಪುಗೊಂಡಂತಿದೆ ಈ ಮ್ಯೂಸಿಯಂ. 'ಕಸದಿಂದ ರಸ' ಎನ್ನುವಂತೆ, ಬೇಡವೆಂದು ಕೈ ಬಿಟ್ಟು ಕಳೆದುಳಿದ ನಿಷ್ಪ್ರಯೋಜಕವೆನಿಸಿದ, ಯಾವುದೋ ಗುಜರಿ, ಕುಲುಮೆಮನೆ ಸೇರಬೇಕಾಗಿದ್ದ ವಸ್ತುಗಳಿಂದ ಮುಂದುವೆಚ್ಚವಿಲ್ಲದೆ, ಸುಂದರ ಸ್ವಾರಸ್ಯಕರವಾದ ಮ್ಯೂಸಿಯಂ ಒಂದು ಮೈದಳೆದಿದೆ.

೧೮೫೩ರ ಏಪ್ರಿಲ್ ೧೬ರಂದು ಬೋರಿಬಂದರ್ ಹಾಗೂ ಠಾಣಾದ ನಡುವೆ ಓಡಿದ ಮೊಟ್ಟಮೊದಲ ಭಾರತೀಯ ರೈಲಿನ ಭವ್ಯ ಪರಂಪರೆಯನ್ನು ಕಾದಿಡುವ ಸಲುವಾಗಿ ದೆಹಲಿಯಲ್ಲಿ 'ನ್ಯಾಷನಲ್ ರೇಲ್ವೇ ಮ್ಯೂಸಿಯಂ' ಅನ್ನು ಸ್ಥಾಪಿಸಲು ರೇಲ್ವೇ ಆಡಳಿತ ಮಂಡಳಿ ನಿರ್ಧರಿಸಿತು. ೧೯೭೧ರ ಅಕ್ಟೋಬರ್ ೭ರಂದು ಅಂದಿನ ರಾಷ್ಟ್ರಪತಿ ವಿ.ವಿ. ಗಿರಿಯವರು ತಳಹದಿ ಹಾಕಿದ ಈ ಮ್ಯೂಸಿಯಂ, ೧೯೭೭ರ ಫೆಬ್ರುವರಿ ಒಂದರಂದು, ಅಂದಿನ ರೇಲ್ವೇ ಮಂತ್ರಿ ಶ್ರೀ ಕಮಲಾಪತಿ ತ್ರಿಪಾಠಿಯವರಿಂದ ಉದ್ಘಾಟನೆಗೊಂಡಿತು. ದೆಹಲಿಯಿಂದ ದೂರವಿರುವ ಲಕ್ಷಾಂತರ ಜನಕ್ಕೆ ಇದರ ನೋಟ ಅಲಭ್ಯ. ಆದ್ದರಿಂದ ಅಂದಿನ 'ಮೈಸೂರು ಸ್ಟೇಟ್ ರೇಲ್ವೇಸ್'ನ ಪ್ರಧಾನ ಕಛೇರಿ ಇದ್ದ ಮೈಸೂರಿನಲ್ಲಿ ಭಾರತೀಯ ರೈಲು ಬೆಳೆದು ಬಂದ ಬಗೆಯನ್ನು ತಿಳಿಸಲು, ಭಾರತದಲ್ಲೇ ಮೊದಲನೆಯದಾದ ಏಕೈಕ 'ರೀಜನಲ್ ಮ್ಯೂಸಿಯಂ' ಎನಿಸಿದ ಮೈಸೂರು ರೇಲ್ವೇ ಮ್ಯೂಸಿಯಂ ಪ್ರಾರಂಭವಾಯ್ತು.

೧೨-೧೨-೭೮ರಂದು ದಕ್ಷಿಣ ರೇಲ್ವೆಯ ಜನರಲ್ ಮ್ಯಾನೇಜರ್ ಆಗಿದ್ದ ಆರ್.ಎಮ್. ಸಾಂಬವಮೂರ್ತಿ ಅವರಿಂದ ಅಡಿಗಲ್ಲು ಹಾಕಲ್ಪಟ್ಟ ಕೇವಲ ಆರು ತಿಂಗಳ ನಂತರ ೨-೬-೭೯ರಂದು ಮೈಸೂರು ಅರಸು ಮನೆತನದ ಶ್ರೀಕಂಠದತ್ತ ನರಸಿಂಹರಾಜ ಒಡೆಯರ ಅವರಿಂದ ಸ್ಥಳೀಯ ಕೌಶಲದಿಂದ ಸಿದ್ಧವಾದ ಈ ಮ್ಯೂಸಿಯಂ ಉದ್ಘಾಟಿಸಲ್ಪಟ್ಟಿತು.

ಪ್ರವೇಶ ದ್ವಾರದ ಎಡಕ್ಕೆ ನಿಂತಿರುವ, ೧೯೨೫ರಲ್ಲಿ ಇಂಗ್ಲೆಂಡಿನ ಸ್ಟೇಬಲ್ ಫೋರ್ಡ್ (Stable Ford) ಕಂಪನಿ ತಯಾರಿಸಿರುವ ೪ ಚಕ್ರಗಳ 'ಗೂಡ್ಸ್ ಬ್ರೇಕ್ ವ್ಯಾನ್' ಅನ್ನು ಮೆಟ್ಟಿಲುಗಳನ್ನಳವಡಿಸಿ, ಟಿಕೆಟ್ ಕೌಂಟರ್ ಆಗಿ ಪರಿವರ್ತಿಸಲಾಗಿದೆ. ವಯಸ್ಕರಿಗೆ ೨ ರೂ. ಮಕ್ಕಳಿಗೆ ೧ ರೂ. ನ ಟಿಕೆಟ್ ಪಡೆದು ಬಂದಾಗ ಬಲಗಡೆ ಇರುವುದೇ 'ಚಾಮುಂಡಿ ಗ್ಯಾಲರಿ'. ವೃತ್ತಾಕಾರದ ಗ್ಯಾಲರಿಯ ಸುತ್ತಲೂ ಇರುವ 'ರೇಲ್ವೇ ಸಿಗ್ನಲ್' ಬೆಳೆದು ಬಂದ ಹಂತಗಳನ್ನು ವಿವರಿಸುವ ಚಿತ್ರಗಳು ಸ್ವಾರಸ್ಯಕರವಾದವು. ಹಿಂದೆ ರೇಲ್ವೆಯಲ್ಲೂ 'ಡಬ್ಬಲ್ ಡೆಕ್ಕರ್' ಕೋಚ್‌ಗಳಿದ್ದುವೆನ್ನುವ ವಿಷಯ ಬಹುಶಃ ಬಹಳಷ್ಟು ಮಂದಿಗೆ ತಿಳಿದಿರಲಿಕ್ಕಿಲ್ಲ, ಸಚಿತ್ರವಾಗಿ ಇದನ್ನು ತಿಳಿಸುವ ಹಿರಿಮೆ ಈ ಗ್ಯಾಲರಿಯದಾಗಿದೆ.

ಹೊರಗೆ ನಡೆದಾಗ ಕಾಣುವುದೇ 'ಶ್ರೀರಂಗ ಪೆವಿಲಿಯನ್'. ಮೈಸೂರಿನ ಅರಸರಿಗೆ ಸೇರಿದ್ದ

ಎರಡು ರೈಲುಗಳನ್ನು ಇಲ್ಲಿಡಲಾಗಿದೆ. ೧೮೯೭ರ ಮೈಸೂರರಸು ಕುವರಿಯ ಮದುವೆಯ ಸಂದರ್ಭದಲ್ಲಿ ಬೆಂಕಿಯಿಂದ ಸುಟ್ಟು ಹೋದ, ಮೈಸೂರ ಅರಮನೆಗೆ ಸೇರಿದ್ದೆಂದು ಹೇಳಲಾದ, ಮರದ ಸುಂದರ ಕೆತ್ತನೆ ಕೆಲಸ ಮಾಡಿದ ಕಂಭಗಳು ಬಾಗಿಲುಗಳು ಹಾಗೂ ಕಟಾಂಜನವನ್ನು ಪೆವಿಲಿಯನ್‌ಗೆ ಅಳವಡಿಸಲಾಗಿದೆ. ಮೈಸೂರು ಮಹಾಪ್ರಭುಗಳು ಉಪಯೋಗಿಸುತ್ತಿದ್ದ ರೇಲ್ವೇಗಾಡಿ ಈಗ ದೆಹಲಿಯ ರೇಲ್ವೇ ಮ್ಯೂಸಿಯಂನ ಸ್ವತ್ತಾಗಿದೆ. ಮೈಸೂರಲ್ಲಿರುವುದು ಎಲ್ಲರನ್ನೂ ಆಕರ್ಷಿಸುವ 'ಮಹಾರಾಣಿ'ಸೆಲೂನ್'. ಈ ಗಾಡಿ ೧೮೯೯ರಲ್ಲಿ ೨೯,೫೦೮ ರೂ.ಗಳ ವೆಚ್ಚದಲ್ಲಿ ಹರ್ಸ್ಟ್ ಆ್ಯಂಡ್ ನೆಲ್ಸನ್ ರೂಪುಗೊಳಿಸಿ, ಮೈಸೂರಿನ ರೇಲ್ವೇ ವರ್ಕ್‌ಶಾಪ್‌ನಲ್ಲಿ ತಯಾರಿಸಿದುದಾಗಿದೆ. ಹಿತ್ತಾಳೆಯ ಕಂಬಿಗಳು, ಶಯನ ಗೃಹ, ಸ್ನಾನ ಗೃಹ, ಶೌಚಗೃಹ, ಉಗ್ರಾಣ, ಸೇವಕರ ಕೊಠಡಿಗಳನ್ನಿದು ಹೊಂದಿದೆ. ಅಡಿಗೆ ಹಾಗೂ ಊಟದ ಕೋಣೆಯ ಕೋಚ್ ಅನ್ನು, ೧೯೧೪ರಲ್ಲಿ ಬರ್ನ್ ಆ್ಯಂಡ್ ಕಂಪನಿ ರೂಪಿಸಿ, ಮೈಸೂರಿನ ರೇಲ್ವೇ ವರ್ಕ್‌ಶಾಪ್‌ನಲ್ಲಿ ೪೯,೧೯೪ ರೂ.ಗಳ ವೆಚ್ಚದೊಂದಿಗೆ ನಿರ್ಮಿಸಲಾಗಿದೆ. ಅಡಿಗೆಯವರ ಕೊಠಡಿ, ಉಗ್ರಾಣ, ಬಾಯಿಲರ್ ರೂಂ, ಅಡಿಗೆ, ಊಟ, ಸ್ನಾನ ಹಾಗೂ ದೇವರ ಕೊಠಡಿಗಳು ಇದರಲ್ಲಿವೆ. ದಂತದ ಬಣ್ಣದ ಈ ಕೋಚು ಅತ್ಯಂತ ದೃಢವಾಗಿಯೂ ಸುಂದರ ನಕಾಶೆಯ ಹಿಡಿಕೆಗಳುಳ್ಳದ್ದೂ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್‌ಗಳೆರಡಕ್ಕೂ ಅಳವಡಿಸಲು ಸಾಧ್ಯವಾಗುವಂಥದೂ ಆಗಿದೆ. ಈ ಎಲ್ಲವೂ ಆಳಿದ ಅರಸರ ವೈಭವಕ್ಕೆ ಸಾಕ್ಷಿಯಂತಿದೆ.

ಮೈಸೂರು ಸ್ಟೇಟ್ ರೇಲ್ವೇಗೆ ಸಂಬಂಧಪಟ್ಟ ವಸ್ತುಗಳನ್ನೂ ಮಾದರಿಗಳನ್ನೂ ಶ್ರೀರಂಗ ಪೆವಿಲಿಯನ್‌ನಲ್ಲಿ ಕಾಣಬಹುದು. ಅವುಗಳಲ್ಲಿ ಮುಖ್ಯವಾದುವು ಇವು:

೧) ದೊಡ್ಡಜಾಲ ಹಾಗೂ ದೇವನ ಹಳ್ಳಿಯ ಸ್ಟೇಷನ್ ನಡುವೆ ೧೮೨೯ರಲ್ಲಿ ಉಪಯೋಗಿಸಿದ ಥಿಯೋಬಾಲ್ಡ್ ಬ್ಲಾಕ್ ಇನ್ಸ್‌ಟ್ರುಮೆಂಟ್.

೨) ಮೈಸೂರು ಮಹಾರಾಜರಿಂದ ೧೯೩೦ರಲ್ಲಿ ಬಳಸಲ್ಪಟ್ಟ ಟೆಲಿಫೋನ್.

೩) ನ್ಯೂಯಾರ್ಕ್‌ನಲ್ಲಿ ೧೮೮೧ರಲ್ಲಿ ತಯಾರಾದ ಸ್ಟೇಟ್ ರೇಲ್ವೆಯ ಗಡಿಯಾರ.

೪) ಲಂಡನ್‌ನಲ್ಲಿ ೧೮೭೮ರಲ್ಲಿ ನಿರ್ಮಿಸಲ್ಪಟ್ಟ ವಿದ್ಯುತ್ ವೈದ್ಯಕೀಯ ಉಪಕರಣ.

೫) ಜಂಕರ್‍ಸ್ ಕ್ಲೋರೋಪಾಕಂ ಇನ್‌ಹೇಲರ್.

೬) ೧೭ ಕಮಾನುಗಳ ಕೊಚ್ಚೆಯ ರೈಲು-ರಸ್ತೆ ಸೇತುವೆಯ ಮಾದರಿ.

೭) ೧೨ ಕಮಾನಿನ ಹಾಸನ-ಮಂಗಳೂರು ಮಾರ್ಗದ ಅತಿ ಉದ್ದದ ಸೇತುವೆಯ ಮಾದರಿ.

೮) ಪೈವುಡ್ ಬ್ಲೇಡ್‌ಗಳನ್ನು ಹೊಂದಿದ ಅತಿ ಹಳೆಯ ಫ್ಯಾನ್.

೯) ಸ್ಟೀಮ್ ಎಂಜಿನ್‌ನ ಕಾರ್ಯದ ಮಾದರಿ.

ಹೊರಬಯಲಿನಲ್ಲಿ ಉಗಿಬಂಡೆಗಳು, ಕೋಚ್‌ಗಳು, ರೇಲ್ವೇ ಮೋಟಾರ್‌ಕಾರ್, ಸಿಗ್ನಲ್ ಲಿವರ್ ಫ್ರೇಮ್‌ಗಳು, ಇನ್ಸ್‌ಪೆಕ್ಷನ್ ಕೋಚ್, ಎಂಜಿನ್‌ಗೆ ನೀರು ತುಂಬುವ ಪಂಪ್ (೧೯೩೨ರಲ್ಲಿ ಮೆರ್ರಿ ವೆದರ್‌ಲಂಡನ್ ಅವರು ತಯಾರಿಸಿದ್ದು), ಹಾಗೂ ಪುಟಾಣಿ ರೈಲು ಪ್ರದರ್ಶಿಸಲ್ಪಟ್ಟಿವೆ.

ಮಿನಿ ಟ್ರೈನ್: ೧೯೮೦ರಲ್ಲಿ ಮ್ಯೂಸಿಯಂಗೆ ಸೇರಿಸಿದ, ಭಾರತದಲ್ಲೇ ಮೊದಲನೆಯದಾದ, ವಿದ್ಯುತ್ ಬ್ಯಾಟರಿಯ ಸಹಾಯದಿಂದ ಓಡುವ, ಮಕ್ಕಳ ರೈಲಿನ ಕೋಚ್‌ಗಳನ್ನು ಉಳಿದ ಚೂರುಗಳಿಂದ ತುಂಬಿ ಮೈಸೂರು ರೇಲ್ವೇ ವರ್ಕ್‌ಶಾಪ್‌ನಲ್ಲೇ ಇದನ್ನು ತಯಾರಿಸಲಾಗಿದೆ. ೩೦ ಮಕ್ಕಳನ್ನು ಹಿಡಿಯುವ ಈ ರೈಲು ಮಕ್ಕಳ ಆಕರ್ಷಣೆಯ ಕೇಂದ್ರವೆನಿಸಿದೆ. ವೃತ್ತಾಕಾರವಾಗಿ ಹಾಕಿರುವ ಹಳಿಗಳ ಮೇಲೆ ಸುತ್ತಿಸಾಗುವ ಈ ರೈಲಿನೊಳಗೆ ಕುಳಿತು ಹೋಗುವುದು ಮಕ್ಕಳಿಗೇಕೆ, ಹಿರಿಯರಿಗೂ ಒಂದು ಸಂತಸದ ಅನುಭವ. ಸಂದರ್ಭ ಒದಗಿದಾಗ ಗುರುತಿಸಲ್ಪಟ್ಟ ಇನ್ನೂ ಅನೇಕ ವಸ್ತುಗಳನ್ನು ಮ್ಯೂಸಿಯಂಗೆ ಸೇರಿಸುವ ಪ್ರಯತ್ನ ನಡೆದಿದೆ.

ಪ್ರತಿದಿನ ನೂರಾರು ವೀಕ್ಷಕರು, ಅದರಲ್ಲೂ



ರೇಲ್ವೆ ಮ್ಯೂಸಿಯಮ್ಮಿನ ಪ್ರವೇಶದ್ವಾರ

ದಸರೆಯ ಸಂದರ್ಭದಲ್ಲಿ ಸಾವಿರಾರು ವೀಕ್ಷಕರು, ಮೈಸೂರಿನ ಸಂದರ್ಶನಕ್ಕೆ ಬರುವುದನ್ನು ಗಮನಿಸಿದಾಗ, ಈ ರೇಲ್ವೇ ಮ್ಯೂಸಿಯಂಗೆ ಭೇಟಿ ಕೊಡುವವರ ಪ್ರಮಾಣ ಕಡಿಮೆ ಎನ್ನಬಹುದು. ಸಂದರ್ಶಕರನ್ನು ಹೆಚ್ಚಾಗಿ ಆಕರ್ಷಿಸಲು ಯಾವ ಪ್ರಚಾರ ಕಾರ್ಯಗಳೂ ನಡೆದಿಲ್ಲ. ಮೂಸಿಯಂನ ಸ್ಥಿತಿಗತಿಯ ಬಗ್ಗೆ ಇನ್ನೂ ಹೆಚ್ಚಿನ ಕಾಳಜಿ ಅನಿವಾರ್ಯ. ಭಾರತೀಯ ರೈಲಿನ ಭವ್ಯ ಪರಂಪರೆ ಸಂದರ್ಶಕರು ಕಣ್ಣುಟ್ಟ ಕಂಡಾಗಷ್ಟೇ ಮನದಟ್ಟಾಗುವಂಥದು. ●

# "ಬೇಂದ್ರೆ ಮೋಡಿ.... ಸೊಲ್ಲಾಪುರಕ್ಕೆ ಓಡಿ...."

• ಡಾ. ಬಿ. ಆರ್. ನಾಡಗೌಡ

೧೯೫೦ನೇ ಇಸ್ವಿಯಲ್ಲಿ ನಾನು ಅದೇ ವಿಜಾಪುರದ ಪಿ.ಡಿ.ಜೆ. ಹೈಸ್ಕೂಲ್ ಕಟ್ಟೆಯನ್ನು ಏರಿದ್ದೆ. ಒಂದು ದಿನ ನಮ್ಮ ಹಿರಿಯ ಅಣ್ಣ ಮತ್ತು ಅವನ ಮಿತ್ರ ಮನೆಯಲ್ಲಿ ಮಾತನಾಡುತ್ತ ಕುಳಿತಾಗ ದರ್ಬಾರ್ ಹೈಸ್ಕೂಲಿಗೆ ಅವತ್ತೇ ದ.ರಾ. ಬೇಂದ್ರೆಯವರು ಬರುವವರಿದ್ದಾರೆಂದು ಪ್ರಸ್ತಾಪಿಸಿದರು. ನನಗೆ ಕುತೂಹಲವಾಯಿತು.

ನಾನು ದರ್ಬಾರ್ ಹೈಸ್ಕೂಲಿಗೆ ಓಡಿದೆ. ಮೇಲಿನ ಅಟ್ಟ ಕಿಕ್ಕಿರಿದು ತುಂಬಿತ್ತು. ನಾನು ಆ ಗದ್ದಲದ ಮಧ್ಯದಲ್ಲಿಯೇ ಅವರನ್ನು ನೋಡಲು ಪ್ರಯಾಸಪಟ್ಟೆ. ಅವರ ಉಪನ್ಯಾಸ ಆದೇ ಮುಗಿದಿತ್ತೆಂದು ಕಾಣುತ್ತದೆ. "ಈಗ ಒಂದೆರಡು ಪದ್ಯ ಓದಿ ತೋರಿಸ್ತೀನಿ ಕೇಳ್ರಿ," ಎಂದು ಬೇಂದ್ರೆಯವರು ಹೇಳಿದಾಗ ಎಲ್ಲರೂ ಉತ್ಸಾಹದಿಂದ ಚಪ್ಪಾಳೆ ತಟ್ಟಿದರು. ನಾನು ಆಗ ವಯಸ್ಸಿನಿಂದ ಚಿಕ್ಕವ, ಶರೀರದಿಂದಲೂ ಸಣಕಲಾಗಿದ್ದೆ. ಅದು ಹೇಗೋ ಗದ್ದಲದಲ್ಲಿ ನುಸುಳಿಕೊಂಡು ಮುಂದೆ ಜರುಗಿ ಅವರು ಕಾಣುವಂತೆ ಸ್ಥಳ ಮಾಡಿಕೊಂಡು ನಿಂತೆ. ಅವರು ಖಾದಿಯ ಚೆಕ್ಕಿನ ಕೋಟು ಧರಿಸಿದ್ದರು. ಕರಿಯ ರಟ್ಟಿನ ಟೊಪ್ಪಿಗೆ ಇತ್ತು. ಎಡಗೈಯಲ್ಲಿ ಪುಸ್ತಕ ಎತ್ತಿ ಹಿಡಿದು, ಬಲಗೈಯನ್ನು ಭಾವಕ್ಕೆ ತಕ್ಕಂತೆ ಚಲಿಸುತ್ತ, "ಇಕೋ ನೆಲ ಅಕೋ ಜಲ" ಎಂಬ ಪದ್ಯವನ್ನು ಓದಿದರು. ನಂತರ "ಪಾತರಗಿತ್ತಿ ಪಕ್ಕಾ ನೋಡಿದೇನಕ್ಕಾ" ಎಂದು ಹಾಡುವಾಗ ಹೆಬ್ಬಟ್ಟು-ತೋರ್ಬೆರಳನ್ನು ಜೋಡಿಸಿ ಪದ್ಯದ ಭಾವ ಮತ್ತು ಲಯಕ್ಕೆ ತಕ್ಕಂತೆ ಕೈಯನ್ನು ಆಡಿಸುತ್ತ, ಪಾತರಗಿತ್ತಿ ಹಾರಾಡುತ್ತಿರುವ ದೃಶ್ಯವನ್ನು ಕಣ್ಣಿಗೆ ಕಟ್ಟಿದರು. ಆಮೇಲೆ "ಕುಣಿಯೋಣು ಬಾರ.... ಕುಣಿಯೋಣು ಬಾ..." ಕವಿತಾ ವಾಚನದ ಮೋಡಿ ಅದ್ಭುತ-ರಮ್ಯವಾಗಿತ್ತು. ನಾನು ಈಗ ಆ ಗಾರುಡಿಗನ ಮೋಡಿಗೆ ಸಂಪೂರ್ಣವಾಗಿ ಮೈಮರೆತಿದ್ದೆ. ತುಂಬಿಕೊಂಡ ಆ ದುಂಡು ಮುಖ, ಸ್ಫುಟವಾದ ಶಬ್ದೋಚ್ಚಾರಣೆ, ಮಿಂಚುಗಣ್ಣಿಳ ನೋಟ ಹಾಡಿನ ಭಾವಕ್ಕೆ ತಕ್ಕಂತೆ ಅವರ ಕೈಯ ಚಲನವಲನ- ಇವು ನನ್ನನ್ನು ಬಲವಾಗಿ ಆಕರ್ಷಿಸಿದವು. ನನ್ನ ಇಡೀ ಭಾವ ಬೇಂದ್ರೆಮಯ





ವಾಗಿತ್ತು. ನಾನು ಮನೆಗೆ ಬಂದಾಗ ರಾತ್ರಿಯಾಗಿತ್ತು. ನನ್ನಲ್ಲಿದ್ದ ಕೆಲವು ಪುಸ್ತಕಗಳನ್ನು (ನನ್ನ-ನಮ್ಮ ಅಣ್ಣಂದಿರ ಪಠ್ಯಪುಸ್ತಕಗಳು) ತೆಗೆದು ಅವುಗಳಲ್ಲಿದ್ದ ಬೇಂದ್ರೆಯವರ ಕವನಗಳನ್ನು ಆಯ್ದು ಅವರಂತೇ ಹಾಡಲು ಪ್ರಯತ್ನಿಸಿದೆ.

ಅಷ್ಟು ಹೊತ್ತಿಗೆ ನಾನು ಕಥೆ, ಚಿಕ್ಕ ಪ್ರಬಂಧಗಳನ್ನು ಬರೆದಿದ್ದೆ. ರವೀಂದ್ರನಾಥ ಟಾಗೋರರ ರೇಖಾಚಿತ್ರವನ್ನೂ ಬಿಡಿಸಿದ್ದೆ. ಅವುಗಳನ್ನು ಅವರಿಗೆ ತೋರಿಸಿಕೊಂಡು ಬರಲು ಸೊಲ್ಲಾಪುರಕ್ಕೆ ಹೋಗುವುದೆಂದು ನಿರ್ಧರಿಸಿ, ಯಾರಿಗೂ ಹೇಳದೆ-ಕೇಳದೆ, ಸೊಲ್ಲಾಪುರ ಟ್ರೇನ್ ಹತ್ತಿದೆ. ಟ್ರೇನಿನಲ್ಲಿ ವಿಪರೀತ ದಟ್ಟಣೆ. ಸೊಲ್ಲಾಪುರ ಸ್ಟೇಶನ್ ಬರುತ್ತಲೇ ಎದ್ದು ಕೈಚೀಲ ನೋಡುತ್ತೇನೆ, ಅದು ಮಾಯವಾಗಿತ್ತು. ನಾನು ಯಾವ ಉದ್ದೇಶದಿಂದ ಸೊಲ್ಲಾಪುರಕ್ಕೆ ಬಂದು ತಲುಪಿದ್ದೆನೋ ಆ ಉದ್ದೇಶವೇ ಚೀಲದ ಜೊತೆ ನಷ್ಟವಾದಂತಾಯಿತು. ಅತ್ಯಂತ ದುಃಖವಾಯಿತು. ಆದರೂ ಬೇಂದ್ರೆಯವರನ್ನು ಕಾಣುವ ಚಪಲ ಕುಂದಲಿಲ್ಲ. ಯಾರೋ ಶಾಲೆ ಕಾಲೇಜು ವಿದ್ಯಾರ್ಥಿಗಳಂತೆ ಕಾಣುವವರನ್ನು ವಿಚಾರಿಸುತ್ತ- 'ಕಾಡಾದಿ' ಚಾಳ್ ಇರಬಹುದು ಅಲ್ಲಿ ಬಂದು ಮುಟ್ಟಿದಾಗ ಮಧ್ಯಾಹ್ನವಾಗಿತ್ತು. ಮನೆ ಸಿಕ್ಕಿದ್ದು ನನಗೆ ಸಂಭ್ರಮವೋ ಸಂಭ್ರಮ. ಮನೆಯ ಮುಂದೇ ಕುಳಿತ ಶ್ರೀಮತಿ ಬೇಂದ್ರೆಯವರು, ಕಾಲೇಜದಿಂದ ಬಂದು ಹೊರಗೆ ಹೋಗಿರುವರೆಂದೂ ಯಾವಾಗ ಬರುವರೋ ಗೊತ್ತಿಲ್ಲವೆಂದೂ ಹೇಳಿದರು. ನನಗೆ ಭಾರೀ ನಿರಾಶೆಯಾಯಿತು. ಜೊತೆಗೆ ಊರಕಡೆಗೆ ನೆನೆದು ಏನೇನು ಕಾದಿದೆಯೋ ಎನ್ನುವ ದಿಗಿಲು ಪ್ರಾರಂಭವಾಯಿತು. ಅಂದು ನನ್ನ ಮಿತ್ರನ ಮನೆಯಲ್ಲೇ ಉಳಿದೆ. ಮರುದಿನ ನಮ್ಮ ತಂದೆಯವರು ನನ್ನನ್ನು ಹುಡುಕುವದಕ್ಕೋಸ್ಕರ ಅಲ್ಲಿಗೆ ಬಂದರು. ನಾನು ಬಹಳೇ ಗಾಬರಿಯಾಗಿದ್ದೆ. ತಂದೆಯವರು ಬಹಳೇ ಸಿಟ್ಟಿನವರು. ಅವರು ಸಿಟ್ಟಿನಲ್ಲಿ ಏನು ಬೇಕಾದರೂ ಮಾಡಬಹುದು ಎಂದು ನನಗೆ

ಗೊತ್ತಿತ್ತು. ಆದರೆ ಅವರು ಏನೂ ಮಾತನಾಡದೇ ಮಧ್ಯಾಹ್ನ ಟ್ರೇನಿಗೇ ನನ್ನನ್ನು ಕರೆದುಕೊಂಡು ನಡೆದರು. "ಶಾಲೆಯಿಂದ ನಿನ್ನ ಹೆಸರನ್ನು ತೆಗೆದು ಹಾಕಲು ಹೆಡ್‌ಮಾಸ್ತರರಿಗೆ ಹೇಳಿದ್ದು, ವಿಜಾಪುರಕ್ಕೆ ಹೋಗಿ ಊರಿಗೆ ಹೋಗೋಣ"ವೆಂದು ಹೇಳಿದರು. ನಾನು ಏನು ಮಾತನಾಡದಿದ್ದರೂ ಮನಸ್ಸಿಗೆ ಬೇಜಾರು-ನೋವು ಎಲ್ಲ ತುಂಬಿಕೊಂಡಿತ್ತು.

* * *

೧೯೩೨ನೇ ಡಿಸೆಂಬರ್ ತಿಂಗಳಲ್ಲಿ ಇರಬಹುದು. ಬೇಂದ್ರೆಯವರು ವಿಜಾಪುರ ಪಿ.ಡಿ.ಜೆ ಹೈಸ್ಕೂಲಿಗೆ ಅತಿಥಿಯಾಗಿ ಬಂದರು. ಆಗ ನಾನು ಇಂಗ್ಲೀಷ್ ಹತ್ತನೇ ಕ್ಲಾಸಿನಲ್ಲಿದ್ದೆ. ನನಗೆ ಮತ್ತೊಮ್ಮೆ ಉತ್ಸಾಹದ ಗರಿಗೆದರಿತು. ಸಾಯಂಕಾಲ ಸುಮಾರು ಒಂದು-ಒಂದೂವರೆ ಗಂಟೆ ಉಪನ್ಯಾಸವಾಯಿತು. ಬ್ಲಾಕ್ ಬೋರ್ಡ್ ಮೇಲೆ ಕೆಲವು ಅಂಕಿ ಸಂಖ್ಯೆಗಳ ಗುರುತು ಹಾಕಿ ಮಾತನಾಡಿದರು. ಅವರ ಉಪನ್ಯಾಸ ತಿಳಿಯಲೇ ಇಲ್ಲ. ಅಂದು ಅವರು ಭಾವಗೀತೆಗಳನ್ನು ಹಾಡಲಿಲ್ಲ. ಮರುದಿನ ಮುಂಜಾನೆ ಎಸ್.ಎಸ್.ಸಿ ವಿದ್ಯಾರ್ಥಿಗಳಿಗಾಗಿ ಪಠ್ಯಪುಸ್ತಕದಲ್ಲಿಯ "ಗಂಗಾವತರಣ" ಹೇಳುವದಾಗಿ ತಿಳಿಸಿದರು. (ಇದನ್ನು ತಿಳಿಸಿದವರು ಜಿ.ಜಿ. ಕುಲಕರ್ಣಿ ಮಾಸ್ತರರು) ಬೆಳಗಿನ ಆ ಪಾಠಕ್ಕೆ ನಾನೂ ಹೋಗಿ ಹಿಂದಿನ ಬೆಂಚಿನ ಮೇಲೆ ಕುಳಿತೆ. ಬೇಂದ್ರೆಯವರು ಪುಸ್ತಕ ಹಾಗೂ ಕೊಡೆಯನ್ನು ಹಿಡಿದುಕೊಂಡು ಕ್ಲಾಸು ಪ್ರವೇಶಿಸಿದರು. ಕೊಡೆಯನ್ನು ಖುರ್ಚಿಯ ಬೆನ್ನಿಗೆ ಹಾಕಿ ಪುಸ್ತಕ ತೆರೆದರು. ಅವರು ವಿದ್ಯಾರ್ಥಿಗಳ ಮಧ್ಯ ಅಡ್ಡಾಡುತ್ತ "ಮೊದಲು ಪದ್ಯ ಓದ್ತಿನಿ, ಆಮ್ಯಾಲೆ ಮತ್ತೊಮ್ಮೆ ಓದ್ತಿನಿ.... ಆಮ್ಯಾಲ.... ಅರ್ಥ ಹೇಳ್ತೀನಿ" ಎನ್ನುತ್ತ ನನ್ನ ಬಳಿ ಬಂದಾಗ ನನ್ನನ್ನು ನೋಡುತ್ತ, "ಯಾವ ಕ್ಲಾಸು ನಿಂದು?" ಎಂದು ಕೇಳಿದರು. ನಾನು "ಟೆನ್ಥ್"ಎಂದೆ.

"ಇಲ್ಯಾಕ ಬಂದಿ?" ಅವರ ಮರು ಪ್ರಶ್ನೆ...."

"ನೀವು ಪಾಠ ಹೇಳ್ತೀರಿ.... ಕೇಳ್ಲಿಕ್ಕೆ ಬಂದೆ..."

" 'ಮಂದಾರ' ಅಂದ್ರೆನು?" ಮತ್ತೊಂದು ಪ್ರಶ್ನೆ.

"ಅದು ಹೂವಿನ ಹೆಸರು, ದೇವಲೋಕದ ಹೂ ಅಂತೆ."

"ನಿನ್ನ ಹೆಸರೇನು?"

"ಬಿ. ಆರ್. ನಾಡಗೌಡ."

"ನಿನ್ನ ಹೆಸರೇನು?" ಮತ್ತೊಮ್ಮೆ ಜೋರಾಗಿ ಕೇಳಿದರು.

"ಬಾಪು."

"ಭಾಪು.... ಭಾಪು" ಎನ್ನುತ್ತ ಗಂಗಾವತರಣ ಕವನ ವಾಚನ ಮಾಡಿದರು. ಅದನ್ನು ಮತ್ತೊಮ್ಮೆ ಅವರು ಓದಲು ಪ್ರಾರಂಭಿಸಿದರು. 'ಧುಮ್ ಧುಮ್ ಎಂದು ದುಡುಕಿ ಬಾ" ಇತ್ಯಾದಿಯಾಗಿ ವಾಚಿಸುವಾಗಿನ ಅವರ ಅಭಿನಯ ಹಾವ ಭಾವ, ಕೈಯ ಚಲನೆ, ಕಣ್ಣ ಮಿಂಚು, ಮತ್ತಷ್ಟು ಸಮೀಪ ನೋಡಿದಾಗ ಆ ಗಾರುಡಿಗನ ಅದ್ಭುತ ಮೋಡಿ ಮತ್ತೊಮ್ಮೆ ನನ್ನನ್ನು ಪೂರ್ಣವಾಗಿ ಆವರಿಸಿ ಬಿಟ್ಟಿತು. ಆ ಮೋಡಿಯ ಛಾಯೆ ನಂತರದ ನಿರಂತರ ಸಂಪರ್ಕದಿಂದ ಗಾಢವಾಗುತ್ತಲೇ ಹೋಯಿತು. ಈಗಲೂ ಇನ್ನೂ ಹಾಗೇ ಉಳಿದಿದೆ. ಬಹುಶಃ ನಾನು ನನ್ನ ಜೀವಮಾನವಿಡೀ ಅದನ್ನು ಕಳೆದುಕೊಳ್ಳಲಾರೆ.... ●



# ಸೇಡಿಯಾಪು ಕೃಷ್ಣಭಟ್ಟರು

"ಗ್ರಂಥಕರ್ತನಿಗೆ ನಿಜವಾಗಿ ಬೇಕಾಗಿರುವುದು ಧನಲಾಭವಲ್ಲ; ಅವನಿಗೆ ಬೇಕಾದುದು ಸುಜ್ಞರೂ ಸಹೃದಯರೂ ಆದ ವಾಚಕರ ಒಲವು. ಇದೊಂದು ಲಭ್ಯವಾದರೆ ಅವನು ಧನ್ಯ. ಅಂತಹ ಧನ್ಯತೆಯನ್ನು ನನಗೊದಗಿಸುವ ಕೃಪೆಯನ್ನು ಕನ್ನಡಿಗರು ಒದಗಿಸಿದರೆ ಸಾಕು. ನನಗೆ ಸಂಪೂರ್ಣ ತೃಪ್ತಿ." ಸೇಡಿಯಾಪು ಕೃಷ್ಣಭಟ್ಟರು ತಮ್ಮ 'ವಿಚಾರ ಪ್ರಪಂಚ' ಕೃತಿಯ ಕೃತಜ್ಞತೆಯಲ್ಲಿ ವ್ಯಕ್ತಪಡಿಸಿದ

ಈ ಮಾತುಗಳು ಮನನೀಯವಾಗಿವೆ. ಎಂದಿಗೂ ಪ್ರಚಾರವನ್ನು ಬಯಸದ ಈ ತಲೆಮಾರಿನ ಕನ್ನಡದ ಪ್ರತಿಭಾವಂತ ಹಿರಿಯ ವಿದ್ವನ್ಮಣಿಗಳಲ್ಲಿ ಸೇಡಿಯಾಪು ಅವರು ಪ್ರಮುಖರೆನ್ನಬಹುದು. ಅವರು ರಚಿಸಿದ ಕೃತಿಗಳ ಸಂಖ್ಯೆ ಕಡಿಮೆಯಾದರೂ ಅವುಗಳಲ್ಲಿ ಪ್ರತಿಯೊಂದೂ ಮೌಲಿಕವಾಗಿದೆ: ಉಪಯುಕ್ತವಾಗಿದೆ. ಅವರೇ ತಮ್ಮ ಬರವಣಿಗೆಯ ಬಗ್ಗೆ:

ಹೆಚ್ಚು ಬರೆದವನಲ್ಲ
ನಿಚ್ಚ ಬರೆದವನಲ್ಲ
ಮೆಚ್ಚಿಸಲು ಬರೆಯುವಭ್ಯಾಸವಿಲ್ಲ.
ಇಚ್ಛೆಗೆದೆಯೊಪ್ಪಿ ಬಗೆ
ಬಿಚ್ಚಿದರೆ ಕಣ್ಗೆಮಯ್
ಎಚ್ಚುವಂದದಿ ತೀಡಿ ತಿದ್ದಿ ಬರೆದೆ.

-ಎಂದು ಹೇಳಿಕೊಂಡಿದ್ದಾರೆ.

ಇದು ಅವರ ಬರವಣಿಗೆಯ ಮೂಲ ಸೂತ್ರ. ಯಾವುದನ್ನೇ ಆಗಲಿ ತೀಡಿ ತಿದ್ದಿ ಬರೆಯುವ ಪ್ರವೃತ್ತಿ ಅವರದು. ಜನ ಮೆಚ್ಚಲಿ ಬಿಡಲಿ. ತಮಗೆ ಸರಿಕಂಡ ಮಾರ್ಗದಲ್ಲಿ ನಡೆದವರು ಅವರು. ಅವರ ಪ್ರತಿಯೊಂದು ಬರವಣಿಗೆಯೂ ಪರಿಶುದ್ಧ ಹಾಗೂ ಸುಸ್ಪಷ್ಟ. ಖಚಿತತೆ ಅವರ ಬರವಣಿಗೆಯ ಮತ್ತೊಂದು ಗುಣ. ಕವಿಯಾಗಿ, ಸಣ್ಣಕತೆಗಾರ ರಾಗಿ ಭಾಷಾ ವ್ಯಾಕರಣ ಹಾಗೂ ಛಂದಃಶಾಸ್ತ್ರಜ್ಞರಾಗಿ, ನಿಘಂಟುಕಾರರಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವರು ವಿಶಿಷ್ಟ ಹಾಗೂ ಪ್ರಮುಖ ಸ್ಥಾನವನ್ನು ಪಡೆದುಕೊಂಡವರು. ಉಗ್ರಾಣ ಮಂಗೇಶರಾಯರ ಶಿಷ್ಯರಾದ ಅವರು ಪಂಜೆ ಮಂಗೇಶ್‌ರಾವ್. ಮುಳಿಯ ತಿಮ್ಮಪ್ಪಯ್ಯ ಹಾಗೂ ಕಡೆಂಗೋಡ್ಲು ಶಂಕರ ಭಟ್ಟರ ನಿಕಟವರ್ತಿಗಳು.

ಮನ ಮೆಚ್ಚುವಂತೆ ನಡೆಯುವುದು-ನುಡಿಯು ವುದು ಅವರ ಜೀವನ ತತ್ವ. ಗಾಂಧೀಜಿಯ ಪ್ರಭಾವಕ್ಕೊಳಗಾದ ಅವರು ಸ್ವದೇಶೀ ವಸ್ತುಗಳನ್ನೇ ಹೆಚ್ಚಾಗಿ ಬಳಸುವಂಥವರು. ವಿದ್ಯಾರ್ಥಿದೆಸೆಯಿಂದಲೇ ಅವರು ಖಾದೀ ಬಟ್ಟೆಯನ್ನು ಧರಿಸುವಂಥವರು. ಸೇಡಿಯಾಪು ಸ್ವಾಭಿಮಾನಿ; ಆದರೆ ಅಹಂಕಾರಿಯಲ್ಲ. ಹಳತಾಗಲಿ ಹೊಸತಾಗಲಿ ಒಳಿತನ್ನು ಸ್ವೀಕರಿಸುವ

● ಡಾ. ಶ್ರೀಕೃಷ್ಣಭಟ್ ಅರ್ತಿಕಜೆ

ಮನೋಭಾವ ಅವರದು. ಬಡವ-ಬಲ್ಲಿದ, ಮೇಲು-ಕೀಳು, ಆ ಜಾತಿ- ಈ ಜಾತಿ ಎಂಬ ಭೇದಭಾವ ಅವರ ಹತ್ತಿರವೂ ಸುಳಿಯದು. ಅವರು ಸದಾ ಸತ್ಯ, ನ್ಯಾಯ, ಧರ್ಮವನ್ನು ಪರಿಪಾಲಿಸುವವರು. ಸಾಹಿತ್ಯಗೋಷ್ಠಿಯೊಂದರಲ್ಲಿ ಡಾ. ಶಿವರಾಮ ಕಾರಂತರು ಸೇಡಿಯಾಪು ಅವರ ಬಗ್ಗೆ "ಪಂಡಿತರೆಂದರೆ ಹೀಗಿರುತ್ತಾರೆ ಎಂದು ನಾನು ಸಂತೋಷದಿಂದ ಬೆರಳೆತ್ತಿ ತೋರಿಸಬಹು ದಾದವರು ಕೃಷ್ಣಭಟ್ಟರು. ಅವರ ವೇಷ-ಭೂಷಣಗಳಂತೆಯೇ ಅವರ ನಡೆನುಡಿ. ನಿರ್ಮಲ ವ್ಯಕ್ತಿತ್ವದ ವಿದ್ವಾಂಸ ಸೇಡಿಯಾಪು" ಅವರು ಎಂದು ಹೇಳಿದ್ದು ಯಥಾರ್ಥವಾಗಿಯೆ ಇದೆ.

ಸೇಡಿಯಾಪು ಕೃಷ್ಣಭಟ್ಟರು ೧೯೦೨ನೇ ಇಸವಿ ಜೂನ್ ೮ ರಂದು ದಕ್ಷಿಣ ಕನ್ನಡದ ಪುತ್ತೂರು ತಾಲೂಕಿನ ಸೇಡಿಯಾಪು ಎಂಬ ಹಳ್ಳಿಯಲ್ಲಿ ರಾಮ ಭಟ್ ಮತ್ತು ಮೂಕಾಂಬಿಕೆ ದಂಪತಿಗಳಿಗೆ ಮಗನಾಗಿ ಜನಿಸಿದರು. ತಮ್ಮ ಐದನೇ ವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡ ಸೇಡಿಯಾಪು ಅವರಿಗೆ ಪ್ರೀತಿವಾತ್ಸಲ್ಯಗಳನ್ನು ತೋರಿ ಅವರನ್ನು ಬೆಳೆಸಿದವರು ಅವರ ಅಜ್ಜ. (ತಾಯಿಯ ತಂದೆ) ಅಜ್ಜ ರಾಮಾಯಣ ಮಹಾಭಾರತ ಪಠಿಸುತ್ತಿದ್ದು ದರಿಂದ ಸೇಡಿಯಾಪು ಅವರಿಗೆ ಬಾಲ್ಯದಲ್ಲೇ ಆ ಪುರಾಣ ಕಥೆಗಳ ಪರಿಚಯವಾಯಿತು. ಬಾಲ್ಯ

*"ನಿಮ್ಮ ಲೇಖನವನ್ನು ಓದಿ ನೀವಿಷ್ಟು ಸಣ್ಣ ಪ್ರಾಯದವರೆಂದುಕೊಂಡಿರಲಿಲ್ಲ" ಎಂದು ಭಟ್ಟರನ್ನು ಆಲೂರರು ಆಲಂಗಿಸಿಕೊಂಡರಂತೆ.*

ಸಹಜವಾದ ಹಠ, ತುಂಟಾಟ ಅವರಿಗಿರಲಿಲ್ಲ. ಮನೆಯಲ್ಲಿನ ಕಷ್ಟದ ಪರಿಸ್ಥಿತಿಯಿಂದಾಗಿ ಅವರ ಬಾಲ್ಯ ವಿದ್ಯಾಭ್ಯಾಸ, ಶೈಕ್ಷಣಿಕ ಜೀವನ ಸುಗಮ ವಾಗಿ ಸಾಗಲಿಲ್ಲ. ಪುತ್ತೂರಿನ ಬೋರ್ಡ್ ಹೈಸ್ಕೂ ಲಿನಲ್ಲಿ ಫೋರ್ಥ್ ಫಾರ್ಮ್ ಓದುತ್ತಿದ್ದಾಗ ಅವರು ಗಾಂಧೀಜಿಯ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ ವಿದ್ಯಾಭ್ಯಾಸವನ್ನು ನಿಲ್ಲಿಸಿದರು. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಉಗ್ರಾಣ ಮಂಗೇಶ ರಾಯರು ಅವರ ಗುರುಗಳಾಗಿದ್ದರು. ಆ ಕಾಲ ದಲ್ಲೇ ಸೇಡಿಯಾಪು ಅವರು ಕಂದ, ವೃತ್ತ, ಷಟ್ಪದಿ ಮೊದಲಾದ ಛಂದಸ್ಸುಗಳಲ್ಲಿ ಕವನಗಳನ್ನು ರಚಿಸು ತ್ತಿದ್ದರು. ಗಾಂಧೀಜಿಯ ತತ್ವಗಳಲ್ಲಿ ಆಸಕ್ತಿವಹಿ ಸಿದ್ದ ಸೇಡಿಯಾಪು ಶಾಲೆಯನ್ನು ತೊರೆದ ಬಳಿಕ ಹಳ್ಳಿಗೆ ಹೋಗಿ ನೂಲುವುದು, ನೇಯುವುದು ಖಾದಿ ಪ್ರಚಾರ ಮಾಡುವುದು ಮುಂತಾದ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡರು. ಓದಿನಲ್ಲಿ ಅತ್ಯಂತ ಆಸಕ್ತಿಹೊಂದಿದ್ದ ಅವರು ತಮಗೆ ದೊರೆತ ಪುಸ್ತಕಗಳನ್ನು ಓದದೆ ಬಿಟ್ಟವರಲ್ಲ. ರಾಮಾಯಣ, ಮಹಾಭಾರತ, ಭಾಗವತ, ವೇದಾಂತ ಸಂಬಂಧಿ ಗ್ರಂಥಗಳು, ಬೈಬಲ್, ಖುರಾನ್ ಧಮ್ಮಪದ ಮುಂತಾದವು ಗಳನ್ನು ಅಭ್ಯಾಸಮಾಡಿದರು. ಅವರ ಸ್ಮರಣಶಕ್ತಿ ಅತ್ಯಂತ ಪ್ರಬಲ. ಸ್ವಂತ ಪರಿಶ್ರಮದಿಂದಲೇ ಅವರು ಸಂಸ್ಕೃತ-ಕನ್ನಡಗಳನ್ನು ಅಭ್ಯಸಿಸಿದರು. ವೈದ್ಯಕೀಯ ಶಾಸ್ತ್ರದಲ್ಲಿ ಆಸಕ್ತಿ ಮೂಡಿ ತಮ್ಮ ತಂದೆಯವರು ಸಂಗ್ರಹಿಸಿದ ಆಯುರ್ವೇದಕ್ಕೆ ಸಂಬಂಧಿಸಿದ ಪುಸ್ತಕಗಳನ್ನೂ ಓದಿ ಅರಗಿಸಿಕೊಂಡರು.

ಶಾಲೆಯನ್ನು ಬಿಟ್ಟ ಬಳಿಕ ಅವರು ಊರ ಶಾಲೆ ಯೊಂದರಲ್ಲಿ ಸ್ವಲ್ಪ ಕಾಲ ಅಧ್ಯಾಪಕರಾಗಿದ್ದು ಕಾರಣಾಂತರಗಳಿಂದ ಆ ವೃತ್ತಿಯನ್ನು ತೊರೆದು ಜೀವನ ನಿರ್ವಹಣೆಗಾಗಿ ವೈದ್ಯಕೀಯ ವೃತ್ತಿಯನ್ನು ನಡೆಸಿದರು. ಬಳಿಕ ಊರನ್ನು ಬಿಟ್ಟು ಮಂಗಳೂರಿಗೆ ಹೋಗಿ ಔಷಧಾಲಯವೊಂದನ್ನು ತೆರೆದರು. ಬುದ್ಧಿ ವಿಕಲ್ಪಕ್ಕೆ ಔಷಧಿಯನ್ನು ಕೊಡುವುದರಲ್ಲಿ ಸೇಡಿಯಾಪು ಅವರದು ಎತ್ತಿದ ಕೈ. ೧೯೨೩ರಲ್ಲಿ ಕರ್ನಾಟಕ ಸಂಗೀತದಲ್ಲಿ ಹೆಸರಾಂತ ಚಕ್ರಕೋಡಿ ನಾರಾಯಣ ಶಾಸ್ತ್ರಿಗಳ ಸಹೋದರಿ ಶಂಕರಿ ಅಮ್ಮ ಎಂಬವರೊಂದಿಗೆ ಅವರ ವಿವಾಹವಾಯಿತು. ಮಂಗಳೂರಿನಲ್ಲಿ ವೈದ್ಯಕೀಯ ವೃತ್ತಿಯಲ್ಲಿದ್ದಾಗ ಅವರಿಗೆ ಮುಳಿಯ ತಿಮ್ಮಪ್ಪಯ್ಯ ಹಾಗೂ ಕಡೆಂಗೋಡ್ಲು ಶಂಕರ ಭಟ್ಟರ ಪರಿಚಯ ವಾಯಿತು. ಕಡೆಂಗೋಡ್ಲು ಸಂಪಾದಕತ್ವದ 'ರಾಷ್ಟ್ರ ಬಂಧು' ಪತ್ರಿಕೆಯ ಉಪಸಂಪಾದಕರಾಗಿ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಸೇಡಿಯಾಪು ಮೂರು ವರ್ಷ ದುಡಿದರು.

ಮಂಗಳೂರಿನಲ್ಲಿರುವಾಗಲೇ ಅವರು ಸ್ವಂತ ಪರಿಶ್ರಮದಿಂದ ಅಧ್ಯಯನ ಮಾಡಿ ಮದರಾಸು ವಿಶ್ವವಿದ್ಯಾನಿಲಯದ ವಿದ್ವಾನ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ೧೯೩೯ರಲ್ಲಿ ಸೈಂಟ್ ಅಲೋಶಿಯಸ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತ ರಾಗಿ ಸೇರಿದರು. ೧೯೬೦ರವರೆಗೆ ಸುಮಾರು ಇಪ್ಪತ್ತೊಂದು ವರ್ಷಗಳ ಕಾಲ ಹೈಸ್ಕೂಲಿನಲ್ಲಿ ಅಧ್ಯಾಪನ ನಡೆಸಿ ೧೯೬೧ರಲ್ಲಿ ಸೈಂಟ್ ಅಲೋಶಿಯಸ್ ಕಾಲೇಜಿನ ಕನ್ನಡ ವಿಭಾಗದಲ್ಲಿ ಉಪನ್ಯಾಸಕರಾಗಿ ಸೇರಿದರು. ಅನಾರೋಗ್ಯದ ಕಾರಣದಿಂದಾಗಿ ಅವಧಿಗಿಂತ ಎರಡು ವರ್ಷ ಮೊದಲೇ ಅವರು ನಿವೃತ್ತರಾದರು (೧೯೬೭). ಉಪವೃತ್ತಿಯಾಗಿದ್ದ ವೈದ್ಯಕೀಯ ವೃತ್ತಿಯನ್ನೂ ತೊರೆದರು. ಸುಮಾರು ಮೂವತ್ತೈದು ವರ್ಷಗಳ ಕಾಲ ಮಂಗಳೂರಿನಲ್ಲಿ ನೆಲಸಿದ್ದ ಅವರು ಬಳಿಕ ತಮ್ಮ ಮಗನೊಂದಿಗೆ ಇರಲು ಬಯಸಿದ್ದರಿಂದಾಗಿ ನಾಗಪುರ, ಮೈಸೂರು, ಬೆಂಗಳೂರುಗಳಲ್ಲಿ ಕೆಲವು ವರ್ಷ ಕಳೆಯಬೇಕಾಯಿತು. ೧೯೭೧ರಲ್ಲಿ ಮಣಿಪಾಲಕ್ಕೆ ಬಂದ ಅವರು ತಮ್ಮ ಪತ್ನಿ, ಮಗ, ಸೊಸೆ ಹಾಗೂ ಇಬ್ಬರು ಮೊಮ್ಮಕ್ಕಳೊಂದಿಗೆ ಅಲ್ಲೇ ನೆಲೆಸಿದ್ದಾರೆ. ಸೇಡಿಯಾಪು ಅವರಿಗೆ ಐವರು ಹೆಣ್ಣು ಮಕ್ಕಳು. ಅವರ ಒಬ್ಬನೇ ಮಗ ಡಾ. ಜಯರಾಮ. ಅವರು ಮಣಿಪಾಲದ ಎಂ.ಐ.ಟಿ.ಯ ಎಲೆಕ್ಟ್ರಾನಿಕ್ ವಿಭಾಗದಲ್ಲಿ ಪ್ರಾಧ್ಯಾಪಕರೂ ಮುಖ್ಯಸ್ಥರೂ ಆಗಿದ್ದಾರೆ.

ಸೇಡಿಯಾಪು ಅವರು ಸ್ವಭಾವತಃ ಪ್ರಚಾರ ಬಯಸದ ವ್ಯಕ್ತಿ. ಆದರೆ ಅವರ ಹೆಚ್ಚಿನ ಕೃತಿಗಳಿಗೆ ಒಂದಲ್ಲ ಒಂದು ರೀತಿಯ ಪ್ರಶಸ್ತಿ ಲಭಿಸಿದೆ. ೧೯೪೭ರಲ್ಲಿ ಪ್ರಕಟವಾದ ಅವರ 'ಪಳಮೆಗಳು' ಕಥಾಸಂಕಲನಕ್ಕೆ ಆಗಿನ ಮದರಾಸು ಸರಕಾರದ

ಪುರಸ್ಕಾರ ದೊರೆಯಿತು. ೧೯೫೫ರಲ್ಲಿ ಬೆಳಕು ಕಂಡ ಅವರ 'ಕನ್ನಡ ವರ್ಣಗಳು' ಹಸ್ತಪ್ರತಿಗೆ ಮದರಾಸು ಸರಕಾರದ ಗೌರವಧನ ಲಭಿಸಿತ್ತು. ಸೇಡಿಯಾಪು ಅವರು ಉದ್ಯೋಗದಿಂದ ನಿವೃತ್ತರಾದ ಬಳಿಕ ೧೯೫೯ರಲ್ಲಿ ಅವರ ಸ್ನೇಹಿತರು ಮತ್ತು ಶಿಷ್ಯರು ಸೈಂಟ್ ಅಲೋಶಿಯಸ್ ಕಾಲೇಜಿನ ಕರ್ನಾಟಕ ಸಂಘದ ಮೂಲಕ ಅವರ ಸಾಹಿತ್ಯಸೇವೆಯನ್ನು ಶ್ಲಾಘಿಸಿ 'ಒಸಗೆ' ಎಂಬ ಗ್ರಂಥವನ್ನು ಸಮರ್ಪಿಸಿ ಅಭಿನಂದಿಸಿದರು. ೧೯೬೯ರಲ್ಲಿ ಪ್ರಕಟವಾಗ 'ಚಂದ್ರಖಂಡ ಮತ್ತು ಕೆಲವು ಸಣ್ಣ ಕಾವ್ಯಗಳು' ಎನ್ನುವ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ೧೯೭೫ರಲ್ಲಿ ಪ್ರಕಟವಾದ 'ಕೆಲವು ದೇಶನಾಮಗಳು' ಎನ್ನುವ ಕೃತಿಗೆ ಮೈಸೂರು ವಿಶ್ವವಿದ್ಯಾನಿಲಯದ ಸ್ವರ್ಣ ಮಹೋತ್ಸವ ಪ್ರಶಸ್ತಿಯೂ ಲಭಿಸಿದವು. ಸೇಡಿಯಾಪು ಅವರು ಸಾಹಿತ್ಯ ಹಾಗೂ ಸಂಶೋಧನಾ ಕ್ಷೇತ್ರಗಳಿಗೆ ಸಲ್ಲಿಸಿದ ಕೊಡುಗೆಯನ್ನು ಗುರುತಿಸಿ ಕರ್ನಾಟಕ ಸರಕಾರವು ೧೯೭೨ರಲ್ಲಿ ಅವರು ಸನ್ಮಾನಿಸಲ್ಪಟ್ಟರು. ೧೯೮೪ರಲ್ಲಿ ಕಾಂತಾವರ ಕನ್ನಡ ಸಂಘವು ಸೇಡಿಯಾಪು ಅವರ ಸಾಹಿತ್ಯಸೇವೆಯನ್ನು ಗಮನಿಸಿ ಗೌರವಿಸಿತು. ೧೯೮೫ರಲ್ಲಿ ನಡೆದ ದಕ್ಷಿಣ ಕನ್ನಡ ಜಿಲ್ಲೆಯ ಎರಡನೇ ಸಾಹಿತ್ಯ ಸಮ್ಮೇಳನದಲ್ಲೂ ಅವರನ್ನೂ ಸನ್ಮಾನಿಸಲಾಯಿತು. ೧೯೮೫ರಲ್ಲಿ ಪ್ರಕಟವಾದ 'ಛಂದೋಗತಿ'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಹಾಗೂ ವರ್ಧಮಾನ ಪ್ರಶಸ್ತಿ ಲಭಿಸಿವೆ. ರಾಜ್ಯ ಸರಕಾರವು ೧೯೮೧ ರಿಂದ ಸೇಡಿಯಾಪು ಅವರಿಗೆ ಮಾಸಾಶನವನ್ನು ನೀಡುತ್ತಿದೆ.

ಚಿಕ್ಕಂದಿನಲ್ಲಿಯೇ ಸೇಡಿಯಾಪು ಅವರು ವೇದ ಉಪನಿಷತ್ತು, ಭಗವದ್ಗೀತೆ, ಬೈಬಲ್, ಖುರಾನ್ ಮೊದಲಾದವುಗಳನ್ನು ಓದಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದರು. ಜೈನ ಕಾವ್ಯಗಳನ್ನು ಅಭ್ಯಸಿಸಿದರು. ಇವೆಲ್ಲವುಗಳ ಪ್ರಭಾವದಿಂದಾಗಿ ವಿರಕ್ತಿ ಮಾರ್ಗವೇ ಅನುಸರಣೀಯ ಎಂಬ ಭಾವನೆ ಅವರಲ್ಲಿ ಮೂಡಿದರೂ ಮುಂದಿನ ಸಾಹಿತ್ಯಾಧ್ಯಯನದಿಂದ ಅವರ ಆ ಭಾವನೆ ಬದಲಾಯಿತು. 'ಈಸಬೇಕು ಇದ್ದು ಜೈಸಬೇಕು'



ಎಂಬ ಪುರಂದರ ದಾಸರ ನುಡಿ ಅವರಲ್ಲಿ ಶಕ್ತಿ, ಭರವಸೆ ಹಾಗೂ ನಂಬಿಕೆಗಳನ್ನು ಮೂಡಿಸಿತು. ಗಾಂಧೀಜಿಯ ಕುರಿತು ಅಪಾರ ಗೌರವ ಹೊಂದಿದ್ದ ಸೇಡಿಯಾಪು ಅವರಿಗೆ ಹರಿಜನೋದ್ಧಾರದಲ್ಲೂ ಅಪಾರ ಆಸ್ಥೆ. ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿ ಬಂದಿದ್ದರೂ ಬಹು ಒಂದೆಯೇ ಮನೆಯ ಕೆಲಸಕ್ಕಾಗಿ ಹರಿಜನ ಸ್ತ್ರೀಯೊಬ್ಬಳನ್ನು ನೇಮಿಸಿಕೊಂಡಿದ್ದರು. ಎಷ್ಟು ಕಷ್ಟ ಬಂದರೂ ಸೇಡಿಯಾಪು ಉಳಿದವರ ಮುಂದೆ ಕೈ ಚಾಚಿದವರಲ್ಲ. ಸರಳ ರೀತಿಯಲ್ಲಿ ಬಾಳುವುದೇ ಅವರ ಜೀವನದ ಗುರಿ.

ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಸೇಡಿಯಾಪು ಅವರು ಲೇಖನ ಬರೆಯಲು ಆರಂಭಿಸಿದರು. ಒಮ್ಮೆ ಅವರು ತಮ್ಮ ಅಧ್ಯಾಪಕರಿಗೆ ಸವಾಲು ಹಾಕಿ, ತರಗತಿಯಲ್ಲೇ ಕುಳಿತು 'ದೀಪಾವಳಿ'ಯ ವಿಷಯವಾಗಿ ಪದ್ಯವೊಂದನ್ನು ಬರೆದು, ಹಾಡಿ ಎಲ್ಲರ ಮೆಚ್ಚುಗೆಯನ್ನು ಗಳಿಸಿದರು. ಅವರು ಆ ಕಾಲಕ್ಕೆ ಇಂಗ್ಲಿಷಿನಲ್ಲಿ ಪದ್ಯ ಬರೆಯುತ್ತಿದ್ದರಾದರೂ, ತಕ್ಕ ಪ್ರೋತ್ಸಾಹವಿಲ್ಲದ ಕಾರಣ ಆ ಪ್ರಯತ್ನವನ್ನು ಮುಂದುವರಿಸಲಿಲ್ಲ. ೧೯೨೪ರಲ್ಲಿ ಆಲೂರ ವೆಂಕಟರಾಯರು ಸಂಪಾದಿಸುತ್ತಿದ್ದ 'ಜಯ ಕರ್ನಾಟಕ' ಪತ್ರಿಕೆಯಲ್ಲಿ ಸೇಡಿಯಾಪು ಅವರ 'ಕರ್ನಾಟಕ ಕವಿತಾ ಪ್ರಪಂಚ' ಎಂಬ ಲೇಖನ ಪ್ರಕಟವಾಯಿತು. ಕೆಲವು ಕಾಲದ ಬಳಿಕ ಆಲೂರ ವೆಂಕಟರಾಯರು ಕಾರ್ಕಳದಲ್ಲಿ

ನಡೆದ ರಾಜಕೀಯ ಸಮ್ಮೇಳನವೊಂದಕ್ಕೆ ಬಂದಿದ್ದಾಗ, ಸೇಡಿಯಾಪು ಅವರು ವೆಂಕಟರಾಯ ರನ್ನು ಭೇಟಿಮಾಡಿ ತಮ್ಮನ್ನು ಪರಿಚಯಿಸಿಕೊಂಡರು. ಆಲೂರರು, "ನಿಮ್ಮ ಲೇಖನವನ್ನು ಓದಿ ನೀವಿಷ್ಟು ಸಣ್ಣಪ್ರಾಯದವರು ಎಂದುಕೊಂಡಿರಲಿಲ್ಲ," ಎಂದು ಕೃಷ್ಣಭಟ್ಟರನ್ನು ಆಲಿಂಗಿಸಿಕೊಂಡರಂತೆ.

ಸೇಡಿಯಾಪು ಅವರ 'ಪಳಮೆಗಳು' ಒಂದು ಉತ್ತಮ ಕಥಾ ಸಂಕಲನ. ಇದರಲ್ಲಿ ಚಿನ್ನದ ಚೇಳು, ಚೆನ್ನೆಮಣೆ, ಧರ್ಮಮ್ಮ ಮತ್ತು ನಾಗರ ಬೆತ್ತ ಎಂಬ ನಾಲ್ಕು ಕಥೆಗಳಿವೆ. ಪ್ರತಿಯೊಂದಕ್ಕೂ ಅದರದೇ ಆದ ಸೊಗಸಿದೆ. ಕತೆಗಳು ಆಡುನುಡಿ ಯಲ್ಲಿದ್ದು, ಆರಂಭದಲ್ಲಿ ಸಂಭಾಷಣೆ, ವಿವರಣೆಗಳು ಬಂದಿವೆ. ಅವರ ಹೆಚ್ಚಿನ ಕತೆಗಳಲ್ಲಿ ಜಾನಪದ ಹಾಗೂ ಸುತ್ತಮುತ್ತಲಿನ ಬದುಕಿನಿಂದ ಆಯ್ದುಕೊಂಡ ವಸ್ತುಗಳಿವೆ. ವಸ್ತು, ನಿರೂಪಣೆಗ ಳಲ್ಲಿ 'ಪಳಮೆಗಳು' ಉಳಿದ ಕಥಾಸಂಕಲನಗಳಿಂದ ಭಿನ್ನವಾಗಿದ್ದು ಕನ್ನಡ ಕಥಾ ಸಾಹಿತ್ಯದಲ್ಲೇ ವಿಶಿಷ್ಟಸ್ಥಾನವನ್ನು ಪಡೆದುಕೊಂಡಿದೆ.

೧೯೬೯ರಲ್ಲಿ ಪ್ರಕಟವಾದ 'ಚಂದ್ರಖಂಡ ಮತ್ತು ಕೆಲವು ಸಣ್ಣ ಕಾವ್ಯಗಳು' ಅವರ ಏಕೈಕ ಕವನ ಸಂಕಲನ. ಇದರಲ್ಲಿ ವಿವಿಧ ಕಾಲಘಟ್ಟ ಗಳಲ್ಲಿ ಸೇಡಿಯಾಪು ಬರೆದ ಇಪ್ಪತ್ತೆರಡು ಸಣ್ಣ ದೊಡ್ಡ ಕವಿತೆಗಳಿವೆ. ಸೇಡಿಯಾಪು ಅವರು ಸಂಪ್ರ ದಾಯದ ಶೈಲಿಯನ್ನೇ ನೆಚ್ಚಿಕೊಂಡಿರುವಂತೆ ಕಂಡುಬಂದರೂ ಕವಿತೆಗಳಲ್ಲವರು ಸ್ವಂತಿಕೆಯನ್ನು ತೋರಿಸಿದ್ದಾರೆ. ಸ್ವತಂತ್ರ ಮನೋಧರ್ಮದ ಅವರ ಕವನ ಹಾಗೂ ಕಾವ್ಯಗಳಲ್ಲಿ ಚಿಂತನಾಂಶ ಹೆಚ್ಚಾಗಿದೆ. ಅವರ ಕಾವ್ಯ ಶೈಲಿಯಲ್ಲಿ ಮಾರ್ಗ ಮತ್ತು ದೇಸಿಯ ಕೂಡುವಿಕೆಯನ್ನು ಕಾಣಬಹುದು. ಅವರ ಕಾವ್ಯ ಹಳತು ಹೊಸತುಗಳ ಮಿಶ್ರಪಾಕ. ದಕ್ಷಿಣ ಕನ್ನಡದ ನವೋದಯ ಕಾವ್ಯ ಪಂಥದಲ್ಲಿ ಪಂಜೆಯವರ ಅನಂತರದ ಶ್ರೇಷ್ಠ ಕವಿಗಳಲ್ಲಿ ಸೇಡಿಯಾಪು ಅವರಿಗೆ ಹಿರಿಯ ಸ್ಥಾನವಿದೆ.

ಸೃಜನಾತ್ಮಕ ಸಾಹಿತ್ಯಕ್ಕಿಂತ ಸೃಜನೇತರ ಸಾಹಿತ್ಯ ರಚನೆಯಲ್ಲಿ ಸೇಡಿಯಾಪು ಅವರಿಗೆ ಒಲವು ಹೆಚ್ಚು. ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಅವರು 'ಕನ್ನಡ ವರ್ಣಗಳು' ಮತ್ತು 'ಕೆಲವು ದೇಶ ನಾಮಗಳು' ಎಂಬ ಎರಡು ಕೃತಿಗಳನ್ನು ಪ್ರಕಟಿಸಿ ದ್ದಾರೆ. ೧೯೫೫ರಲ್ಲಿ ಪ್ರಕಟವಾದ 'ಕನ್ನಡ ವರ್ಣ ಗಳು' ಎಂಬ ಕೃತಿಯಲ್ಲಿ ಕಾಲ್ಡ್‌ವೆಲ್ಲರು ತಮ್ಮ A Comparative Grammer of the Dravidan or South Indian family of Languagesನಲ್ಲಿ ಪ್ರತಿಪಾದಿಸಿರುವ ಕೆಲವು ತಪ್ಪು ಅಭಿಪ್ರಾಯಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಇದು ಸೇಡಿಯಾಪು ಅವರ ಪ್ರಮುಖ ಹಾಗೂ ವಿಶಿಷ್ಟ ಭಾಷಾ ವೈಜ್ಞಾನಿಕ ಕೃತಿ. ೧೯೭೫ರಲ್ಲಿ ಅವರ 'ಕೆಲವು ದೇಶನಾಮಗಳು' ಬೆಳಕು ಕಂಡಿತು. ಮಿ.ಸೀ ಅವರು ಈ ಕೃತಿಯನ್ನು ಮೆಚ್ಚಿ ಸೇಡಿಯಾಪು ಅವರ ವಸ್ತುನಿಷ್ಠ ದೃಷ್ಟಿಯನ್ನು ಕೊಂಡಾಡಿದ್ದಾರೆ. ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಸಂಶೋಧನಾತ್ಮ ಕವಾದ ಈ ಕೃತಿಯಲ್ಲಿ ಅವರು ಕೆಲವು ಶಬ್ದಗಳ ಮೂಲವನ್ನೂ ಅವುಗಳ ಅರ್ಥವನ್ನೂ ಹುಡುಕುವು ದಕ್ಕೆ ಪ್ರಯತ್ನಿಸಿದ್ದಾರೆ. ಇದು ಚಿಕ್ಕ ಕೃತಿ ಯಾದರೂ ಸಾಕಷ್ಟು ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ಸಂಗೀತಶಾಸ್ತ್ರದ ಹಿನ್ನೆಲೆಯಲ್ಲಿ ಛಂದಃಶಾಸ್ತ್ರ ವನ್ನು ವಿಶ್ಲೇಷಿಸಿದ ಕೆಲವೇ ಮಂದಿ ಪ್ರಮುಖ ಛಂದಃಶಾಸ್ತ್ರಜ್ಞರಲ್ಲಿ ಸೇಡಿಯಾಪು ಅವರೂ ಒಬ್ಬರು. ಸೇಡಿಯಾಪು ಸಂಸ್ಕೃತ ಛಂದಸ್ಸನ್ನೂ ವೈದಿಕ ಛಂದಸ್ಸನ್ನು ಆಳವಾಗಿ ಅಧ್ಯಯನ ಮಾಡಿ ರುವರಲ್ಲದೆ ದ್ರಾವಿಡ ಛಂದಸ್ಸುಗಳ ಬಗೆಗೂ ವಿಶೇಷ ಆಸಕ್ತಿಯನ್ನು ತೋರಿಸಿದ್ದಾರೆ. ಛಂದಸ್ಸಿಗೆ ಸಂಬಂಧಿಸಿದಂತೆ ಅವರು 'ಛಂದೋಗತಿ' ಹಾಗೂ 'ಕನ್ನಡ ಛಂದಸ್ಸು' ಎನ್ನುವ ಎರಡು ಕೃತಿಗಳನ್ನು ಪ್ರಕಟಿಸಿದ್ದಾರೆ. ೧೯೮೫ರಲ್ಲಿ ಅವರ ದೀರ್ಘ ಕಾಲದ ಅಧ್ಯಯನದ ಫಲವಾಗಿ 'ಛಂದೋಗತಿ' ಪ್ರಕಟವಾಯಿತು. ಸಂಗೀತ ಶಾಸ್ತ್ರದ ಹಿನ್ನೆಲೆಯಲ್ಲಿ ಛಂದಸ್ಸನ್ನು ವಿವೇಚಿಸಿರುವ ಈ ಕೃತಿಯಲ್ಲಿ ಛಂದಃ ಶಾಸ್ತ್ರದ, ಛಂದಸ್ಸಿನ ತತ್ವಗಳ ಹಾಗೂ ಗತಿಭೇದ ಗಳ ವಿವೇಚನೆ ಮತ್ತು ವಿವೃತ್ತಿ ಇದೆ. ಇದರಲ್ಲಿ ಭಾರತೀಯ ಛಂದಶಾಸ್ತ್ರದ ಲಯ ಮತ್ತು ಇಂಗ್ಲೀಷಿನ Rythm ಪದಗಳನ್ನು ಕಾಲ್ಪನಿ ಕವಾಗಿ ವಿವೇಚಿಸಲಾಗಿದೆ. ಕನ್ನಡ ಶಾಸ್ತ್ರಸಾಹಿತ್ಯದಲ್ಲಿ ಇದೊಂದು ಅಪೂರ್ವ ಕೃತಿ. ೧೯೮೮ರಲ್ಲಿ ಪ್ರಕಟವಾದ ಅವರ 'ಕನ್ನಡ

ಛಂದಸ್ಸು' ೧೯೩೨ರಲ್ಲಿ ಸೇಡಿಯಾಪು ಅವರು ಮಡಿಕೇರಿಯಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದಲ್ಲಿ ಓದಿದ ಪ್ರಬಂಧದ ಪರಿಷ್ಕೃತ ಹಾಗೂ ವಿಸ್ತೃತ ರೂಪ. ಈ ಕೃತಿಯಲ್ಲಿ 'ಅಕ್ಷರ ಮತ್ತು ವರ್ಣ' 'ತ್ರಿಪದಿಯ ಲಕ್ಷಣ', 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಹಾಗೂ 'ಛಂದೋ ವತಂಸ' ಎಂಬ ನಾಲ್ಕು ಲೇಖನಗಳಿದ್ದು ಅವು ಸಾಕಷ್ಟು ಮೌಲಿಕವಾದ ವಿವೇಚನೆಗಳನ್ನೊಳಗೊಂಡಿವೆ. ಕನ್ನಡದಲ್ಲಿ ಛಂದೋಬಂಧಗಳಲ್ಲದೆ, ಸಂಸ್ಕೃತದಿಂದ ಎರವಲು ಪಡೆದ ಛಂದೋಬಂಧಗಳ ಕುರಿತೂ ಸೇಡಿಯಾಪು ಅವರು ಇಲ್ಲಿ ಚರ್ಚಿಸಿದ್ದಾರೆ. ಕನ್ನಡ ಛಂದಃಶಾಸ್ತ್ರದಲ್ಲಿ ಅವರ ಕೃತಿಗಳು ಮಹತ್ವದ ಸ್ಥಾನವನ್ನು ಪಡೆದಿವೆ.

ಸೇಡಿಯಾಪು ಕೃಷ್ಣಭಟ್ಟರು ಒಬ್ಬ ಉತ್ತಮ ನಿಘಂಟುಕಾರರೂ ಆಗಿದ್ದಾರೆನ್ನುವುದಕ್ಕೆ ಅವರು ತಮ್ಮ ಮಿತ್ರರಾದ ಮಚ್ಚಿಮಲೆ ಶಂಕರನಾರಾಯಣರಾವ್ ಮತ್ತು ಆರ್. ಎಸ್. ನಾಪೂರ್‌ಕರ್ ಎಂಬವರೊಂದಿಗೆ ಸಂಪಾದಿಸಿದ ಕನ್ನಡ ನಿಘಂಟೇ ಸಾಕ್ಷಿ. ಗಾತ್ರದಲ್ಲಿ ಕಿರಿದಾದರೂ ಇದು ನಿರ್ದಿಷ್ಟವಾದ, ಶಾಸ್ತ್ರೀಯವಾದ ಹಾಗೂ ಅಚ್ಚುಕಟ್ಟಾದ ನಿಘಂಟಾಗಿದೆ. ೧೯೩೧ರಲ್ಲಿ ಪ್ರಕಟವಾದ ಇದರಲ್ಲಿ ಏಳು ಸಾವಿರಕ್ಕೂ ಹೆಚ್ಚು ಶಬ್ದಗಳಿವೆ. ಕನ್ನಡ-ಕನ್ನಡ ನಿಘಂಟುಗಳು ಇನ್ನೂ ಸರಿಯಾಗಿ, ಶಾಸ್ತ್ರೀಯವಾಗಿ ರಚನೆಯಾಗಿರದ ಕಾಲದಲ್ಲಿ ಈ ನಿಘಂಟು ಪ್ರಕಟವಾಗಿರುವುದರಿಂದ ಆ ಕಾಲಘಟ್ಟದಲ್ಲಿ ಇದು ಪ್ರಮುಖ ಪಾತ್ರವನ್ನು ವಹಿಸಿತ್ತೆನ್ನುವುದರಲ್ಲಿ ಸಂದೇಹವಿಲ್ಲ.

ಅವರು ಬರೆದ ಲೇಖನಗಳು, ಬಿಡಿ ಲೇಖನಗಳು, ಮಾಡಿರುವ ಉಪನ್ಯಾಸಗಳು, ವ್ಯಕ್ತಿಚಿತ್ರಗಳು, ಮುನ್ನುಡಿ, ಅಭಿನಂದನೆಗಳು ಎಲ್ಲವನ್ನೂ ಸಂಗ್ರಹಿಸಿ ಅವುಗಳನ್ನು ಬೇರೆ ಬೇರೆ ರೀತಿ ವಿಭಾಗಿಸಿ ಶ್ರೀಪಾದೇಕಲ್ಲು ವಿಷ್ಣುಭಟ್ಟರು ಸಂಪಾದಿಸಿದ್ದು, ಅದು 'ಸೇಡಿಯಾಪು ಕೃಷ್ಣಭಟ್ಟರ ವಿಚಾರ ಪ್ರಪಂಚ' ಎಂಬ ಹೆಸರಿನಲ್ಲಿ ಪುತ್ತೂರು ಕರ್ನಾಟಕ ಸಂಘದ ಮೂಲಕ ೧೯೯೨ರಲ್ಲಿ ಪ್ರಕಟವಾಗಿದೆ. ಸಾಹಿತ್ಯ ವಿಚಾರ, ಭಾಷಾವಿಚಾರ, ಕಲಾವಿಚಾರ ಮತ್ತು ನಾನಾ ವಿಚಾರ ಹೀಗೆ ವಿಚಾರಗಳ ಒಂದು ಕರಂಡಕ ಈ 'ಸೇಡಿಯಾಪು ವಿಚಾರ ಪ್ರಪಂಚ.' "ವಿಚಾರ ಪ್ರಪಂಚ ಒಂದು ಅಚ್ಛೋದ ಸರಸ್ಸು. ಆದ್ದರಿಂದಲೇ ತಲದರ್ಶಿ" ಎಂಬುದಾಗಿ ಪ್ರೊ.ಕು.ಶಿ. ಹರಿದಾಸಭಟ್ಟರು ಪ್ರಕಟಿಸಿದ ಅಭಿಪ್ರಾಯ ಮನನೀಯವಾಗಿದೆ. ಸೇಡಿಯಾಪು ಅವರ ಉತ್ತಮ ವಿಮರ್ಶಾತ್ಮಕ ಸಂಶೋಧನಾತ್ಮಕ ಬರಹಗಳಾದ 'ಭಾನುಮತಿಯ ನೆತ್ತ' 'ಪಂಚಮೀ ವಿಭಕ್ತಿ' 'ಗಮಕ ಸಮಾಸ', 'ಯಕ್ಷಗಾನದ ಸ್ತ್ರೀವೇಷ' ಮುಂತಾದುವು ಈ ಕೃತಿಯಲ್ಲಿ ಅಡಕವಾಗಿವೆ.

ಸೇಡಿಯಾಪು ಅವರು ಸರಸ ಸಂಭಾಷಣಕಾರರೂ ಹೌದು. ಅನುಭವ, ವಿದ್ವತ್ತು, ವಿನೋದ ಅವರ ಮಾತುಗಳಲ್ಲಿ ಸದಾ ಮಿಂಚುತ್ತದೆ. ಅವರೊಬ್ಬ ಉತ್ತಮ ಪತ್ರಲೇಖಕರೂ ಆಗಿದ್ದಾರೆ. ಅವರ ಪತ್ರಗಳೂ ಸಾಹಿತ್ಯದ ಲೇಪದಿಂದ ಕೂಡಿದ್ದು ವಿಚಾರಪೂರ್ಣವಾಗಿರುತ್ತವೆ. ಕೆಲವೊಮ್ಮೆ ಗಹನವಾದ ವಿಚಾರದ ಪ್ರತಿಪಾದನೆಯಲ್ಲಿಯೂ ಹಾಸ್ಯವನ್ನು ಸೇರಿಸಿ ಗಹನತೆಯನ್ನು ಮನದಟ್ಟು ಮಾಡಿಸುವುದು ಸೇಡಿಯಾಪು ಅವರ ವೈಶಿಷ್ಟ್ಯ. ಮಾತಿನ ಮಧ್ಯೆಯೂ ಅವರು ಅಲ್ಲಲ್ಲಿ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾರೆ. ಮಣಿಪಾಲದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅ.ನ.ಕೃಷ್ಣರಾಯರು ಸೇಡಿಯಾಪು ಅವರನ್ನು ಭೇಟಿಯಾಗಿ, "ಏನು, ಶಬ್ದ ನಿಧಿ ಕೃಷ್ಣಭಟ್ಟರು" ಎಂದಾಗ ಕೂಡಲೇ ಸೇಡಿಯಾಪು "ಅರ್ಥ ನಿಧಿ ಅಲ್ಲವಲ್ಲ!" ಎಂದು ಉತ್ತರಿಸಿದರು. ಒಮ್ಮೆ ತರಗತಿಯಲ್ಲಿ ಒಬ್ಬ ವಿದ್ಯಾರ್ಥಿ "ಸರ್, ಉಪಾಧ್ಯಾಯರಿಗೆ ಬಾಲ ಇದೆಯೇ?" ಎಂದು ಪ್ರಶ್ನಿಸಿದಾಗ ಸೇಡಿಯಾಪು ಅವರು "ಇದೆ, ವಿದ್ಯಾರ್ಥಿಗೆ ಇರುವಷ್ಟೆ" ಎಂದು ಉತ್ತರಿಸಿದರು. ಅವರ ಹಾಸ್ಯ ಪ್ರಜ್ಞೆಗೆ ಇಂತಹ ಅನೇಕ ಉದಾಹರಣೆಗಳನ್ನು ಕೊಡಬಹುದು.

ಸಾಹಿತಿಯಾಗಿ ಸೇಡಿಯಾಪು ತಮ್ಮದೇ ಆದ ಕೆಲವು ಧೋರಣೆಗಳಿಗೆ ಬದ್ಧರಾದಂತೆ ಕಂಡುಬರುತ್ತದೆ. ಕೃತಿಗಳಲ್ಲಿ ಚಿಂತನಾಂಶವಿಲ್ಲದಿದ್ದರೆ ಅವು ಜನಜೀವನದ ಮೇಲೆ ಸರಿಯಾದ ಪ್ರಭಾವ ಬೀರಲಾರವು ಎಂಬುದನ್ನು ಸೇಡಿಯಾಪು ಮನಗಂಡಿದ್ದಾರೆ ಎನ್ನಬಹುದು. ಯಾವುದೇ ಪಂಥವನ್ನು

ಅವಲಂಬಿಸಿ ಸಾಹಿತ್ಯವನ್ನು ಸೃಷ್ಟಿಸುವುದರಲ್ಲಿ ಅವರಿಗೆ ಆಸಕ್ತಿಯಿಲ್ಲ. ಪ್ರತಿಯೊಂದನ್ನು ಕೂಲಂಕಷವಾಗಿ ಪರಿಶೀಲಿಸಿ ಅದರ ಬಗೆಗೆ ಪ್ರಾಮಾಣಿಕ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸ ಬೇಕೆಂಬ ಅವರ ನಿಲುವು ಅವರದೇ 'ಜಯಭಾರತ ಪುತ್ರ' ಎಂಬ ಕವನದ "ಪರರ ಕಣ್ಣ ಕನ್ನಡಕದಲ್ಲಿ ಜಗದಿರವ ನೋಡುವುದ ತೊರೆ" ಎಂಬ ಸಾಲಿನಲ್ಲಿ ಅಭಿವ್ಯಕ್ತಗೊಂಡಿರುವುದನ್ನು ನೋಡಬಹುದು. ಮೊದಲೇ ಹೇಳಿದಂತೆ ಸೇಡಿಯಾಪು ಬದುಕುವುದ ಕ್ಕಾಗಿ ಬರೆಯಲಿಲ್ಲ; ಉಳಿದವರನ್ನು ಮೆಚ್ಚಿಸುವುದಕ್ಕಾಗಿಯೂ ಬರೆಯಲಿಲ್ಲ.

ಮಾನವನಾಗಿ ಹುಟ್ಟಿದ ಮೇಲೆ ಒಳ್ಳೆಯ ಬಾಳನ್ನು ಬಾಳಬೇಕು. ಇತರರ ಮನಸ್ಸನ್ನು ನೋಯಿಸುವುದರಲ್ಲಿ ಅರ್ಥವಿಲ್ಲ. ನಾವು ಆಚರಿಸಿ ಕೊಂಡು ಬಂದ ಸನಾತನ ಸಂಪ್ರದಾಯದಲ್ಲಿ ನಮಗೆ ಆಸ್ಥೆ ಇರಬೇಕು. ಮತ-ಧರ್ಮದ ವಿಚಾರ ದಲ್ಲಿ ಪರಸ್ಪರ ಸಂಘರ್ಷ ಮಾಡುವುದರಲ್ಲಿ ಅರ್ಥವಿಲ್ಲ.

**ಧರ್ಮವೆಲ್ಲ ಮತಕೊಂದೆ, ದೇವರವ**
**ನೊಂದೆ, ಹೆಸರು ಬೇರೆ**
**ಮರ್ಮವೆಲ್ಲ ಕಸುವೊಂದೆ**
**ಪದಾರ್ಥವದೊಂದೆ ಭಾಷೆ ಬೇರೆ.**

ಎಂಬುದೇ ಅವರ ಮನೋಧರ್ಮ. ಪ್ರತಿಭೆ-ಪಾಂಡಿತ್ಯಗಳೆರಡೂ ಅವರಲ್ಲಿ ಮಿಳಿತವಾಗಿವೆ. ಕನ್ನಡದ ಉಳಿದ ಹಿರಿಯ ಸಾಹಿತಿ-ವಿದ್ವಾಂಸರಿಗೆ ಹೋಲಿಸಿದಾಗ ಸೇಡಿಯಾಪು ಅವರ ಕೃತಿಗಳ ಸಂಖ್ಯೆ ಕಡಿಮೆಯಾದರೂ ಅವುಗಳಿಂದಲೇ ಅವರು ಸಾಕಷ್ಟು ಖ್ಯಾತಿಯನ್ನು ಪಡೆದಿದ್ದಾರೆನ್ನಬಹುದು. ಜ್ಞಾನವೃದ್ಧರೂ, ವಯೋವೃದ್ಧರೂ ಕನ್ನಡನಾಡಿನ ಶ್ರೇಷ್ಠ ಸಂಶೋಧಕರೂ ಆದ ಸೇಡಿಯಾಪು ಕೃಷ್ಣ ಭಟ್ಟರಿಗೆ ಈ ಸಾಲಿನ 'ಚಿದಾನಂದ ಪ್ರಶಸ್ತಿ'ಯೂ ಇತ್ತೀಚೆಗೆ ರಾಜ್ಯೋತ್ಸವ ಪ್ರಶಸ್ತಿಯೂ ಬಂದಿರು ವುದು ಕನ್ನಡಿಗರಿಗೆಲ್ಲ ಹೆಮ್ಮೆಯ ವಿಷಯ. ●



"ಅಯ್ಯೋ ಗೂಬೆ....!
'ಕಲಿತ ನಾರಿ' ಅಂತ
ಬರಿಯೋ ಅಂದ್ರೆ...."




ಅದು ಪಂದ್ಯದ ಐದನೆಯ ಮತ್ತು ಕೊನೆಯ ದಿನ. ಇನ್ನೊಂದು ತಾಸಿನ ಆಟ ಮಾತ್ರ ಬಾಕಿ ಉಳಿದಿತ್ತು. ಆದರೂ ಮೆಲ್ಬೊರ್ನ್ ಕ್ರಿಕೆಟ್ ಮೈದಾನದಲ್ಲಿ ನೆರೆದಿದ್ದ ಪ್ರೇಕ್ಷಕರ ಸಂಖ್ಯೆ ಇಪ್ಪತ್ತು ಸಾವಿರದ ಆಜೂಬಾಜೂ ಇತ್ತು. ಒಂದು ತಾಸಿನ ಆಟವೆಂಬ ಕಾರಣಕ್ಕಾಗಿ ಅಭಿಮಾನಿಗಳಿಗೆ ಉಚಿತ ಪ್ರವೇಶ ನೀಡಲಾಗಿತ್ತಾದರೂ ಅಷ್ಟು ಪ್ರೇಕ್ಷಕ ಸಂದಣಿ ಇರಲು ಅದೇ ಮುಖ್ಯ ಕಾರಣವಾಗಿರಲಿಲ್ಲ. ಪ್ರವೇಶ ಶುಲ್ಕ ಎಂದಿನಂತೆ ಇದ್ದರೂ ಆ ಸಂಖ್ಯೆಯ ಅಭಿಮಾನಿಗಳಲ್ಲಿ ಬಹುಶಃ ಯಾರೊಬ್ಬರೂ ತಪ್ಪಿಸಿಕೊಳ್ಳುತ್ತಿರಲಿಲ್ಲ.

ಒಗೆ ಕೊನೆಯ ಗಳಿಗೆಯ ಆಟದಲ್ಲಿ ಕ್ರಿಕೆಟ್ ಅಭಿಮಾನಿಗಳನ್ನು ಆಕರ್ಷಿಸಿದ ಸಂಗತಿ ಯಾವುದು ಗೊತ್ತೆ?

ಕೊನೆಯ ವಿಕೆಟ್ ಜೋಡಿಗಳಾದ ಅಲನ್ ಬಾರ್ಡರ್ ಮತ್ತು ಜೆಫ್ ಥಾಮ್ಸನ್ ಅವರ ರೋಮಾಂಚಕ ಬ್ಯಾಟಿಂಗ್ ಪ್ರದರ್ಶನ.

## ಮೈದಾನದಲ್ಲಿ

ಮೇಲಕ್ಕೆ ರಿವ್ವನೆ ಚಿಮ್ಮಲ್ಪಟ್ಟ ನಾಣ್ಯ ಆಸ್ಟ್ರೇಲಿಯದ ನಾಯಕ ಗ್ರೆಗ್ ಚಾಪೆಲ್ ಪರವಾಗಿ ಬಿತ್ತು. ಆತ ಬೌಲಿಂಗನ್ನೇ ಆಯ್ದುಕೊಂಡ. ಪುನರ‍್ರೂಪಿಸಲ್ಪಟ್ಟ ಮೆಲ್ಬೊರ್ನ್ ಕ್ರಿಕೆಟ್ ಮೈದಾನದಲ್ಲಿ ಇಂಗ್ಲೆಂಡ್ ತಂಡ ಬ್ಯಾಟಿಂಗಿಗೆ ಇಳಿದಾಗ ಪಿಚ್ ಆರ್ದ್ರವಾಗಿತ್ತು. ಆರಂಭಿಕ ಬೌಲರ್‌ಗಳಾದ ರೋಡ್ನಿ ಹಾಗ್ (೬೯ಕ್ಕೆ ೪) ಮತ್ತು ಜೆಫ್ ಥಾಮ್ಸನ್ (೪೯ಕ್ಕೆ ೨) ಅವರು ಇಂಗ್ಲೆಂಡಿನ ಮೊತ್ತ ೨೫ ಆಗಿದ್ದಾಗ ಪ್ರಾರಂಭಿಕ ಬ್ಯಾಟ್ಸ್‌ಮನ್‌ಗಳಾದ ಜೆಫ್ ಕುಕ್ ಮತ್ತು ಗ್ರೇಮ್ ಫೌಲರ್ ಅವರನ್ನು ಬಲಿ ತೆಗೆದುಕೊಂಡರು. ತಂಡದ ಮೊತ್ತ ೫೬ ಆಗಿದ್ದಾಗ ಡೇವಿಡ್ ಗೋವರನೂ ಅವರ ಹೆಜ್ಜೆಯನ್ನು ಅನುಸರಿಸಿದ.

ಕ್ರಿಸ್ ಟೇವರ್ (೮೯) ಹಾಗೂ ಅಲನ್ ಲ್ಯಾಂಬ್ (೮೩) ಅವರ ನಾಲ್ಕನೆ ವಿಕೆಟ್ ಜೊತೆಯಾಟ ಇಂಗ್ಲೆಂಡ್ ತಂಡಕ್ಕೆ ತುಸು ತಂಪು ತಂದಿತು. ಸ್ಪಿನ್ನರ್ ಬ್ರೂಸ್ ಯಾರ್ಡ್ಲೀ (೮೯ಕ್ಕೆ ನಾಲ್ಕು) ಮಧ್ಯಮ ಕ್ರಮಾಂಕದ ನಾಲ್ಕು ವಿಕೆಟ್‌ಗಳನ್ನು ಎಗರಿಸಿ ಎದುರಾಳಿ ತಂಡವನ್ನು ದುರ್ಬಲಗೊಳಿಸಿದ. ಇಂಗ್ಲೆಂಡ್ ೨೮೪ರ ಮೊತ್ತಕ್ಕೆ ಎಲ್ಲ ಹುದ್ದರಿಗಳನ್ನು ಕಳೆದುಕೊಂಡಿತು.

ಮರುದಿನ ಅಸ್ಸೀಗಳ ಬ್ಯಾಟಿಂಗ್. ಕಿಮ್ ಹಗ್ಸ್ (೬೬), ಡೇವಿಡ್ ಹುಕ್ಸ್ (೫೩) ರೋಡ್ನಿ

---

ಪಂದ್ಯ: **ಆಸ್ಟ್ರೇಲಿಯ-ಇಂಗ್ಲೆಂಡ್ ನಾಲ್ಕನೆ ಟೆಸ್ಟ್ ೧೯೮೨-೮೩**
ಸ್ಥಳ: **ಮೆಲ್ಬೊರ್ನ್**
ದಿನಾಂಕ: **ಡಿಸೆಂಬರ ೨೬, ೨೭, ೨೮, ೨೯, ೩೦.**

# ಎದೆ ಬಡಿತ ತಪ್ಪಿಸಿದ ಕೊನೆಯ ವಿಕೆಟ್ ಜೋಡಿ

ಮಾರ್ಷ್ (೫೩) ಮತ್ತು ಕೆಪ್ಲರ್ ವೆಸೆಲ್ಸ್ (೪೭) ಅವರು ಆಕರ್ಷಕ ಬ್ಯಾಟಿಂಗ್ ಪ್ರದರ್ಶನ ನೀಡಿದರು. ಬೌಲಿಂಗ್ ಚಳಕ ತೋರಿದ ನಾರ್ಮನ್ ಕವಾನ್ಸ್ ಆಸ್ಸೀಗಳ ನಿರಂತರ ರನ್ ಗಳಿಕೆಗೆ ತಡೆಯೊಡ್ಡಿದ್ದೂ ಅಲ್ಲದೆ ಜಾನ್ ಡೈಸನ್ ಮತ್ತು ಗ್ರೆಗ್ ಚಾಪೆಲ್‌ರಂತಹ ಪ್ರಮುಖ ಹುದ್ದರಿಗಳನ್ನು ಪೆವಿಲಿಯನ್‌ಗೆ ಮರಳಿಸಿದ. ಇನ್ನಿಂಗ್ಸ್ ಮುಕ್ತಾಯಗೊಂಡಾಗ ಆಸ್ಟ್ರೇಲಿಯ ಕೇವಲ ಮೂರು ಓಟಗಳ ಮುನ್ನಡೆ (೨೮೭) ಸಾಧಿಸಿತ್ತು.

ಎರಡನೆ ಇನ್ನಿಂಗ್ಸ್‌ನ ಆರಂಭದಲ್ಲಿ ೪೩ ಓಟಗಳಿಗೆ ಮೂರು ವಿಕೆಟ್‌ಗಳಿಗೆ ಎರವಾಗಿದ್ದ ಇಂಗ್ಲೆಂಡ್ ತತ್ತರಿಸಿತ್ತು. ಸದ್ಯದಲ್ಲಿಯೇ ಆಟ ಮುಗಿಯಲಿದೆ ಎಂಬ ನಿರೀಕ್ಷೆಯನ್ನು ನಂತರದ ಧಾಂಡಿಗರಾದ ಫೌಲರ್ (೬೫), ಬಾಥಮ್ (೪೬), ಡೆರೆಕ್ ಪ್ರಿಂಗಲ್ (೪೨), ಬಾಬ್ ಟೇಲರ್ (೩೭) ಅವರು ಹುಸಿಗೊಳಿಸಿದರು. ೨೯೪ಕ್ಕೆ ಆಲೌಟ್ ಆದ ಇಂಗ್ಲೆಂಡ್ ತಂಡ ಆಸ್ಸೀಗಳಿಗೆ ಗಣನೀಯ ಪ್ರಮಾಣದ ಸವಾಲೊಡ್ಡಿತು.

ಇಂಗ್ಲೆಂಡಿನ ಕವಾನ್ಸ್ (೭೭ಕ್ಕೆ ಆರು) ತನ್ನ ಟೆಸ್ಟ್ ಜೀವನದಲ್ಲಿ ಅಪೂರ್ವವೆನ್ನುವಂಥ ಮೊದಲ ಸಾಧನೆಯನ್ನು ಆಸ್ಟ್ರೇಲಿಯ ತಂಡದ ವಿರುದ್ಧ ಸಾಧಿಸಿದ. ಟಾಪ್ ಸ್ಕೋರರ್ ಆಗಿದ್ದ ಹುಕ್ಸ್, ಮಾರ್ಷ್, ಯಾರ್ಡ್ಲೀ ಅವರಂಥ ಪ್ರಮುಖರನ್ನು ಕೇವಲ ೧೯ ಓಟಗಳಿಗೆ ಬುಟ್ಟಿಗೆ ಹಾಕಿಕೊಂಡನೆಂದರೆ ಅವನ ಶೈಲಿಯನ್ನು ಊಹಿಸಬಹುದು.

ಬಾರ್ಡರ್ (೬೨, ಅಜೇಯ) ಮತ್ತು ಹುಕ್ಸ್ (೬೮) ಅವರನ್ನು ಬಿಟ್ಟರೆ ಯಾರೂ ಅರ್ಧ ಶತಕವನ್ನು ದಾಟದಿದ್ದರೂ ಆಸ್ಟ್ರೇಲಿಯ ತಂಡ ಹಾಗೂ ಹೀಗೂ ೨೧೮ ಓಟಗಳನ್ನು ಶೇಖರಿಸಿದಾಗ ಥಾಮ್ಸನ್ ಹಾಗೂ ಬಾರ್ಡರ್ ಜೊತೆಯಾದರು. ಈ ಜೋಡಿ ಪ್ರೇಕ್ಷಕರ ನಿರೀಕ್ಷೆಗೆ ತಕ್ಕ ಆಟವಾಡಿತು. ತಂಡದ ಒಟ್ಟು ಒಂಬತ್ತು ವಿಕೆಟ್‌ಗೆ ೨೫೫ ಆಗಿದ್ದಾಗ ನಾಲ್ಕನೆ ದಿನದ ಆಟ ಮುಕ್ತಾಯಗೊಂಡಿತು. ಆ ವೇಳೆಗಾಗಲೇ ಥಾಮ್ಸನ್-ಬಾರ್ಡರ್ ಜೋಡಿ ಕ್ರಿಕೆಟ್ ಪ್ರಿಯರ ಗಮನವನ್ನು ಸೂಜಿಗಲ್ಲಿನಂತೆ ಸೆಳೆದುಕೊಂಡಾಗಿತ್ತು. ಇಂಗ್ಲೆಂಡಿನ ಸಾವಿರಾರು ಪ್ರೇಕ್ಷಕರು ಆಕಾಶವಾಣಿಯ ಕೋಟ್ಯಂತರ ಶ್ರೋತೃಗಳು ಫಲಿತಾಂಶವನ್ನು ಇಂದೇ ನೋಡೋಣ, ಕೇಳೋಣವೆಂದು ಆಸೆಪಟ್ಟಿದ್ದರು. ಆದರೆ ಸಮಯದ ಕಾರಣದಿಂದ ಆಟ ಮರುದಿನಕ್ಕೆ ಮುಂದೂಡಲ್ಪಟ್ಟಿತು. ಆಗ ಆಸ್ಟ್ರೇಲಿಯ ಗೆಲ್ಲಲು ೩೭ ಓಟಗಳನ್ನು ಮಾಡುವ ಅನಿವಾರ್ಯತೆ ಇತ್ತು.

ಮರುದಿನ ಮುಂಜಾನೆ ಆಟ ನೋಡಲು ನೆರೆದಿದ್ದ ಸುಮಾರು ಇಪ್ಪತ್ತು ಸಾವಿರ ಪ್ರೇಕ್ಷಕರೆದಿರು ಆಟ ಆರಂಭಿಸಿದ ಕೊನೆಯ ವಿಕೆಟ್ ಜೋಡಿ ಪ್ರಾರಂಭದಲ್ಲಿ ಬರೀ ರಕ್ಷಣಾತ್ಮಕ ಕಸರತ್ತು ನಡೆಸಿತು. ಅವರು ತೆಗೆದುಕೊಳ್ಳುತ್ತಿದ್ದ ಒಂದೊಂದು ಓಟಕ್ಕೂ ಭಾರೀ ಕೇಕೆ ಕೇಳಿಬರುತ್ತಿತ್ತು. ಜಗತ್ತಿನ ಬಹುತೇಕ ರೇಡಿಯೋಗಳು ಕ್ರಿಕೆಟ್ ಅಭಿಮಾನಿಗಳ ಕಿವಿಗೆ ಅಂಟಿಕೊಂಡಿದ್ದವು.

ಇಯಾನ್ ಬಾಥಂ ಬೌಲಿಂಗ್ ಆರಂಭಿಸಿದಾಗ ಆಸ್ಟ್ರೇಲಿಯಕ್ಕೆ ನಾಲ್ಕು ಓಟಗಳು ಬೇಕಾಗಿದ್ದವು. ಯಾರು ಗೆದ್ದರೂ ಸೋತರೂ ಕೂದಲೆಳೆಯ ಅಂತರ. ಮೊದಲ ಎಸೆತ ಥಾಮ್ಸನ್‌ನ ಭುಜಕ್ಕಿಂತ ಮೇಲೆ ಹಾರಿತು. ಅದನ್ನು ಸುಮ್ಮನೆ ಬಿಟ್ಟಿದ್ದರೆ ಒಂದು ಬೈ ಸಿಗುತ್ತಿತ್ತು. ಆದರೆ ಅಂಥ ಉದ್ವಿಗ್ನ ಸ್ಥಿತಿಯಲ್ಲಿ ಸುಮ್ಮನಿರದ ಥಾಮ್ಸನ್ ಅದನ್ನು ಅರೆಮನಸ್ಸಿನಿಂದ ಕೆಣಕಿದ. ಆ ಚೆಂಡು ಎರಡನೆ ಸ್ಲಿಪ್

ನಲ್ಲಿದ್ದ ಟೇವರ್‌ನತ್ತ ಸಿಡಿದಾಗ ಎಲ್ಲರ ಉಸಿರು ಒಂದು ಕ್ಷಣ ಸ್ತಬ್ಧ. ಆದರೆ ಟೇವರ್‌ಗೆ ಅದನ್ನು ಹಿಡಿಯಲಾಗಲಿಲ್ಲ. ಅದನ್ನು ಮುಟ್ಟಿದ್ದೇ ಅವನಿಗೆ ಬಂದ ಲಾಭ. ಆದರೂ ಥಾಮ್ಸನ್ ಔಟಾಗಬೇಕಾಯಿತು.

ಹೇಗೆ?

ಟೇವರ್‌ನಿಂದ ಎರಡು ಗಜ ದೂರದಲ್ಲಿದ್ದ ಜೆಫ್ ಮಿಲ್ಲರ್ ಮೊದಲ ಸ್ಲಿಪ್‌ನಲ್ಲಿ ನಡು ಬಗ್ಗಿಸಿ ನಿಂತಿದ್ದ. ಟೇವರ್ ಕೈಯಿಂದ ಚೆಂಡು ನುಣುಚಿಕೊಂಡ ಕ್ಷಣದಲ್ಲಿ ಥಾಮ್ಸನ್ ರೋಮಾಂಚನಗೊಂಡು ಮೇಲಕ್ಕೆ ಜಿಗಿದ. ಆತ ಕೆಳಕ್ಕೆ ಬಂದಿದ್ದನೋ ಇಲ್ಲವೋ ಎನ್ನುವಷ್ಟರಲ್ಲಿ ಮಿಲ್ಲರ್ ಭಗೀರಥ ಪ್ರಯತ್ನದಿಂದ ಚೆಂಡನ್ನು ಹಿಡಿದೇಬಿಟ್ಟ. ತನ್ನ ಬಳಿಗೆ ಚೆಂಡು ಬರುವ ನಿರೀಕ್ಷೆಯನ್ನು ಇಟ್ಟುಕೊಂಡಿರದಿದ್ದ ಮಿಲ್ಲರ್, ಕಣ್ಣವೆ ಮುಚ್ಚಿ ತೆಗೆಯುವುದರೊಳಗೆ ಪಂದ್ಯಕ್ಕೆ ಭಾರೀ ತಿರುವನ್ನು ನೀಡಿದ್ದ. ಇಂಗ್ಲೆಂಡ್ ಮೂರು ಓಟಗಳ ಅಂತರದಿಂದ ಇನ್ನಿಂಗ್ಸ್ ಗೆಲುವು ಸಾಧಿಸಿತು.

"ನಾವು ಬಹುತೇಕ ಅಸಾಧ್ಯವಾದದ್ದನ್ನು ಸಾಧ್ಯ ಮಾಡಿ ತೋರಿಸಿದೆವು. ಸುಲಭವಾಗಿ ಬರುವಂತಿದ್ದ ಒಂದೊಂದು ರನ್‌ಗಳನ್ನು ಪಡೆಯುವಲ್ಲಿ ನಾವು ಅಸಡ್ಡೆ ತೋರಿಸಬಾರದಿತ್ತು ಎಂದು ನಮಗೀಗ ಅನಿಸತೊಡಗಿದೆ. ನಾವು ಸ್ವಲ್ಪದರಲ್ಲಿ ಸೋತರೂ ಅದಕ್ಕೆ ವಿಶ್ವಪ್ರಸಿದ್ಧಿಯ ಸ್ವರೂಪ ನಮ್ಮಿಂದ ದೊರೆಯಿತು." ೬೨ ಓಟ ಗಳಿಸಿ ಅಜೇಯನಾಗುಳಿದ ಆಸ್ಟ್ರೇಲಿಯದ ಬ್ಯಾಟ್ಸ್‌ಮನ್ ಅಲನ್ ಬಾರ್ಡರ್ ಹೇಳಿದ ಮಾತಿದು.

"ಗೆಲುವಿನ ಬಳಿಯೇ ನಾವು ನಿಂತಿದ್ದೆವು. ಆದರೆ ಅದು ನಮ್ಮ ಕೈ ತಪ್ಪಿದ್ದನ್ನು ನೆನೆದರೆ ಹೃದಯ ಒಡೆದಂತಾಗುತ್ತದೆ. ನಾನಿಂಥ ಉದ್ವಿಗ್ನತೆಯನ್ನು ಈ ಮೊದಲೆಂದೂ ಅನುಭವಿಸಿರಲಿಲ್ಲ. ನಮ್ಮ ಖಾತೆಗೆ ಜಮಾ ಆಗುತ್ತಿದ್ದ ಒಂದೊಂದು ಓಟವೂ ಪ್ರೇಕ್ಷಕರನ್ನು ಹುಚ್ಚೆಬ್ಬಿಸುತ್ತಿತ್ತು. ನಮ್ಮ ಆಟ ಅಷ್ಟಕ್ಕೆ ಸಾರ್ಥಕವಾಗಿದೆ." ಇದು ಥಾಮ್ಸನ್ ಕಂಡುಕೊಂಡ ಸಮಾಧಾನ.

"ಸುಪ್ರಸಿದ್ಧ ದಾಂಡಿಗ ಬಾರ್ಡರ್ ಮತ್ತು ಅನನುಭವಿ ಥಾಮ್ಸನ್ ಅವರ ಪರಾಕ್ರಮದ ಪ್ರದರ್ಶನವಿದು. ನಮ್ಮ ತಂಡದ ಬೌಲರ್‌ಗಳು ಇವರಿಗೆ ಒಂದೊಂದು ರನ್ ಗಳಿಸುವ ಅವಕಾಶ ನೀಡಿದ್ದರಾದರೂ ಅದನ್ನಿವರು ಉಪಯೋಗಿಸಿಕೊಳ್ಳಲಿಲ್ಲ." ವಿಜೇತ ಇಂಗ್ಲೆಂಡ್ ತಂಡದ ನಾಯಕ ಬಾಬ್ ವಿಲ್ಲಿಸ್ ಎದುರಾಳಿ ಆಟಗಾರರ ಕೌಶಲದ ಬಗ್ಗೆ ಮೆಚ್ಚುಗೆಯನ್ನು, ಅವರ ಉದಾಸೀನತೆಯ ಕುರಿತು ಬೇಸರವನ್ನು ಹೊರಹಾಕಿದ.

---

## ಅರಿವಳಿಕೆ ಪರೀಕ್ಷೆ

**ಮಾ**ನವರಿಗೆ ಶಸ್ತ್ರಚಿಕಿತ್ಸೆ ಮಾಡುವಾಗ ಅವರಿಗೆ ನೋವಿನ ಅನುಭವ ಆಗದಿರಲೆಂದು ಅರಿವಳಿಕೆಗಳನ್ನು ಕೊಡುತ್ತಾರಷ್ಟೇ. ಇಂತಹ ಅರಿವಳಿಕೆಗಳು ಎಷ್ಟು ಪರಿಣಾಮಕರ ಎಂಬುದನ್ನು ಕಂಡುಕೊಳ್ಳಲು ಹಾಟ್‌ಪ್ಲೇಟ್ ಟೆಸ್ಟ್ ಎಂಬ ಪರೀಕ್ಷೆಯನ್ನು ನಡೆಸಲಾಗುತ್ತಿದೆಯಂತೆ. ಇಲಿಗಳನ್ನು ಹಾಟ್‌ಪ್ಲೇಟುಗಳ ಮೇಲಿಟ್ಟು ವಿದ್ಯುತ್ ಹಾಯಿಸಿದಾಗ ಪ್ಲೇಟು ಬಿಸಿಯಾಗಿ ಅಸಹನೀಯವೆನಿಸಿದಾಗ ಇಲಿಗಳು ಮೇಲಕ್ಕೆ ಹಾರುತ್ತವೆ. ಆದರೆ ಅರಿವಳಿಕೆಗಳನ್ನು ಕೊಟ್ಟಾಗ ಅವು ಔಷಧಿಯ ಶಕ್ತಿಗನುಗುಣವಾಗಿ ಶಾಖದ ಪರಿಣಾಮವನ್ನು ಸಹಿಸಿಕೊಳ್ಳುತ್ತವೆ. ತುಂಬಾ ಪರಿಣಾಮಕಾರಿಯಾದ ಅರಿವಳಿಕೆಗಳನ್ನು ಪ್ರಯೋಗಿಸಿದಾಗ ತಮ್ಮ ಕಾಲುಗಳು ಬೆಂದುಹೋದರೂ ಇಲಿಗಳು ಮೇಲೆ ಹಾರುವುದಿಲ್ಲ!

• ಕೆ. ವೆಂಕಣ್ಣಾಚಾರ್

ಹರಟೆ

# ತ್ರಿಬಾಧೆ

• ಎಚ್. ಆನಂದರಾವ್ ಶಾಸ್ತ್ರಿ

'ತ್ರಿಬಾಧೆ?' ಇದೇನಿದು ಹೊಸ ಶಬ್ದ?!' ಎಂದು ನೀವು ಅಚ್ಚರಿಪಡುತ್ತೀರಷ್ಟೆ? ಹೌದು. 'ತ್ರಿಬಾಧೆ'ಯೇ.

ಜೀವನದಲ್ಲಿ ನಾವು ನಾನಾ ಬಾಧೆಗಳನ್ನೆದುರಿಸಬೇಕಾಗುತ್ತದೆ. ಅವನ್ನೆಲ್ಲ ಪಟ್ಟಿಮಾಡುತ್ತ ಹೊರಟರೆ, ಈ ಪತ್ರಿಕೆಯ ಉದ್ದಗಲವೂ ಸಾಕಾಗಲಿಕ್ಕಿಲ್ಲ, ಅಷ್ಟು ದೊಡ್ಡದಾದೀತು ಪಟ್ಟಿ. ಅಂತಹ ಪಟ್ಟಿಯ ಅವಶ್ಯಕತೆಯೂ ಇಲ್ಲಿಲ್ಲ; ಆ ಮಾತು ಬೇರೆ. ಆದರೆ ನಾನಿಲ್ಲಿ ಬರೆಯಹೊರ



ಟಿರುವುದು ಕೇವಲ ಮೂರೇ ಮೂರು ಬಾಧೆಗಳ ಬಗ್ಗೆ; ಅದು ಸಹ, ನಾವು ಮನೆಯಿಂದ ಹೊರಗೆಲ್ಲೋ ಕಾರ್ಯತತ್ಪರರಾಗಿರುವಾಗ, ಇಲ್ಲವೇ, ಪ್ರಯಾಣದಲ್ಲಿರುವಾಗ ನಮ್ಮನ್ನು ಬಾಧಿಸುವ ಮೂರು ಬಾಧೆಗಳ ಬಗ್ಗೆ. ಆ ಮೂರು ಬಾಧೆಗಳನ್ನೇ ನಾನು 'ತ್ರಿಬಾಧೆ' ಎಂದು ಕರೆದಿರುವುದು.

ಆ ತ್ರಿಬಾಧೆಗಳು ಯಾವುವೆಂದರೆ, 'ಜಲಬಾಧೆ,' 'ಮಲಬಾಧೆ' ಮತ್ತು 'ಅವಮಾನಬಾಧೆ'. ನಾವು ಮನೆಯಿಂದ ಹೊರಹೊರಟು ಒಂದು ಗಂಟೆಯಾಗಿದೆಯೆಂದಿಟ್ಟುಕೊಳ್ಳಿ. ರೇಷನ್ ಷಾಪಿನಲ್ಲಿ ಕ್ಯೂ ನಿಂತಿದ್ದೇವೆ. ಒಂದನೇ ಅಥವಾ ಎರಡನೆ ಬಾಧೆ ಪ್ರಾರಂಭವಾಗುತ್ತದೆ. ಆಗೇನು ಮಾಡಬೇಕು? ಹತ್ತಿರದಲ್ಲಿ ಟಾಯ್ಲೆಟ್ ಇಲ್ಲ, ಇದ್ದರೂ ಕ್ಯೂ ಬಿಟ್ಟು ಹೋಗುವಂತಿಲ್ಲ, ಹೋದರೆ ಮತ್ತೆ ಕ್ಯೂವಿನ ಹಿಂಭಾಗದಲ್ಲಿ ಬಂದು ನಿಲ್ಲಬೇಕು; ಇಂಥ ಪರಿಸ್ಥಿತಿಯಲ್ಲಿ ನಮ್ಮ ಅವಸ್ಥೆ?! ಯಾರದ್ದೋ ಮನೆಯಲ್ಲೋ, ಯಾವುದೋ ಆಫೀಸಿನಲ್ಲೊ ಇದ್ದಾಗ ಈ ಬಾಧೆಗಳುದ್ಭವಿಸಿದರೆ, 'ಎಕ್ಸ್‌ಕ್ಯೂಸ್ ಮಿ, ವೇರ್ ಈಸ್ ದಿ ಟಾಯ್ಲೆಟ್?' ಅಂತ ಕೇಳಿ, ಹೋಗಿರಬಹುದು; (ಅತಿ ಮರ್ಯಾದಸ್ಥರಾದರೆ ಅಲ್ಲೂ ಕಟ್ಟಿಕೊಂಡಿರುತ್ತಾರೆನ್ನಿ) ಆದರೆ, ಬಸ್‌ನಲ್ಲಿ ಪ್ರಯಾಣಿಸುವಾಗ ಸದರೀ ಬಾಧೆ(ಗಳು) ಶುರುವಾದರೆ?! ಬಸ್‌ನ ನಿಲುಗಡೆ ಗಂಟೆಗಳಷ್ಟು ದೂರವಿದ್ದರಂತೂ ಮುಗಿಯಿತು! ಅನುಭವಿಸಿದವರಿಗಷ್ಟೇ ಗೊತ್ತು ಆ ಫಜೀತಿ! ಸಣ್ಣ ಮಕ್ಕಳಾದರೋ ನಿಕ್ಕರೊಳಗೇ ಎರಡನ್ನೂ ಮಾಡಿಕೊಂಡು ಉಭಯ ಬಾಧೆಗಳಿಂದ ಮುಕ್ತವಾಗಿಬಿಡುತ್ತವೆ, ಆದರೆ, ದೊಡ್ಡವರು ಹಾಗೆ ಮಾಡಲಾದಿತೇ? 'ತಲ್ಲಣಿಸದಿರು ಕಂಡ್ಯಾ, ತಾಳು ಮನವೇ,' ಎಂದು ತಮ್ಮ ಮನಸ್ಸಿಗೆ ತಾವೇ ಹೇಳಿಕೊಳ್ಳಲೇಬೇಕಾಗುತ್ತದೆ.

ಒಂದು ಸಲ ಬಸ್‌ನಲ್ಲಿ ಕುಳಿತು ಪ್ರಯಾಣಿಸುತ್ತಿದ್ದೆ. ಚಿಕ್ಕ ಮಗುವನ್ನೆತ್ತಿಕೊಂಡ ಹೆಂಗಸೊಬ್ಬಳು ನನ್ನ ಸೀಟಿನ ಪಕ್ಕ ಬಂದು ನಿಂತಳು. ಆಕೆಗೆ ಕೂರಲು ಖಾಲಿ ಸೀಟು ಇರಲಿಲ್ಲ. ನನ್ನ ಪಕ್ಕದಲ್ಲಿ ಯುವಕನೋರ್ವ ಕುಳಿತಿದ್ದುದರಿಂದ, ನಾನು ಸೀಟು ಆಫರ್ ಮಾಡಿದರೆ ಆಕೆ (ಯುವತಿ) ಕುಳಿತುಕೊಳ್ಳುತ್ತಾಳೋ ಇಲ್ಲವೋ ಎಂಬ ಅನುಮಾನದಿಂದ ನಾನು, ಆಕೆಗೆ ಸೀಟು ಬಿಟ್ಟುಕೊಡುವ (ಮನಸ್ಸಾದರೂ) ಬದಲು ಆಕೆಯಿಂದ ಮಗುವನ್ನು ಕೇಳಿ ಪಡೆದು ನನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಕೆಯ ಪ್ರಯಾಣವನ್ನು ಹಗುರಾಗಿಸಿದೆ. ಮಗು ನನ್ನ ತೊಡೆಯೇರಿ ಹತ್ತು ನಿಮಿಷವಾಗಿತ್ತಷ್ಟೆ, ಜಲಬಾಧೆ ತೀರಿಸಿಕೊಂಡಿತು. ನನ್ನ ಪ್ಯಾಂಟಿನ ಮುಂಭಾಗದಿಂದಿಳಿದು ಆ ಮಗುವಿನ ತೀರ್ಥವು ನನ್ನ ಕಾಲಿನವರೆಗೂ ವ್ಯಾಪಿಸಿ ಅರ್ಧ ಪ್ಯಾಂಟನ್ನೇ ತೋಯಿಸಿಬಿಟ್ಟಿತು! (ಎಷ್ಟು ನೀರು ಹಾಲು ಕುಡಿದಿತ್ತೋ ಆ ಪಾಪು) 'ಹ್ಹಿಹ್ಹಿಹ್ಹಿ! ಸ್ಸಾರಿ!' ಅನ್ನುತ್ತಾ ಆ ತಾಯಿ ತನ್ನ ಮಗುವನ್ನೇನೋ ಕೂಡಲೇ ನನ್ನಿಂದ ವಾಪಸ್ ಪಡೆದಳು. ಎಲ್ಲ ಆದಮೇಲೆ ಏನು ಮಾಡಿ ಏನು ಪ್ರಯೋಜನ? ಕರ್ಚೀಫಿನಿಂದ ಒರೆಸಿಕೊಂಡಷ್ಟೂ ಪ್ಯಾಂಟಿನ ತೇವ ಹೆಚ್ಚು ಹೆಚ್ಚು ಅಗಲವಾಗತೊಡಗಿತು! ಮತ್ತೆ ಹತ್ತು ನಿಮಿಷಕ್ಕೆ ನಾನು ಇಳಿಯುವ ಸ್ಥಳ ಬಂತು. ಕೈಲಿದ್ದ ಅಂಗವಸ್ತ್ರವನ್ನೇ ಅಡ್ಡ ಹಿಡಿದುಕೊಂಡು ನಾನು ಬಸ್ಸಿನಿಂದಿಳಿದು ಮನೆ ಕಡೆ ಹೆಜ್ಜೆ ಹಾಕಿದಾಗ ಬಸ್ಸಿನಲ್ಲಿದ್ದವರು, ರಸ್ತೆಯಲ್ಲಿ ಹೋಗುತ್ತಿದ್ದವರು, ನನ್ನ ಮನೆಯ ಅಕ್ಕಪಕ್ಕದವರೆಲ್ಲ ನನ್ನನ್ನು ಯಾವ ರೀತಿ ನೋಡಿದರೆಂದು...... ಅಯ್ಯೋ..... ನನ್ನ ಶತ್ರುವಿಗೂ ಈ ಅವಸ್ಥೆ ಬರದಿರಲಿ. (ಸದ್ಯ! ಆ ಮಗುವು ಒಂದೇ ಬಾಧೆಯನ್ನು ತೀರಿಸಿಕೊಂಡಿತ್ತು; ಎರಡನೆಯದನ್ನು ತೀರಿಸಿಕೊಂಡಿರಲಿಲ್ಲ! ಅಷ್ಟರಮಟ್ಟಿಗೆ ನಾನು ಅದೃಷ್ಟಶಾಲಿಯೇ!)

'ಜಲಬಾಧೆ,' 'ಮಲಬಾಧೆ'ಗಳ ವಿಷಯ ಹೀಗೆ. ಇನ್ನು, 'ತ್ರಿಬಾಧೆ'ಯ ಮೂರನೇ ಐಟಂ ಆದ 'ಅವಮಾನಬಾಧೆ'ಯತ್ತ ಗಮನ ಹರಿಸೋಣ.

ನೀವು ಹೊರಗೆಲ್ಲೋ ಹೋಗಿರುತ್ತೀರೆಂದಿಟ್ಟುಕೊಳ್ಳಿ. ಆಫೀಸಿನಲ್ಲಿ ಕೆಲಸ ಪೂರೈಸಿ ಎದ್ದು ಹೊರಟಿರುತ್ತೀರಿ, ಅಥವಾ, ಬಂಧುಗಳ ಮನೆಗೆ ಹೋಗಿ, ಅವರು ತೋರಿಸಿದ ಸೋಫಾದಲ್ಲಿ ಕುಳಿತುಕೊಳ್ಳಹೊರಡುತ್ತೀರಿ. ಇಲ್ಲವೇ, ಬಸ್ಸಿನಲ್ಲಿ ನಿಂತುಕೊಂಡು ಪ್ರಯಾಣಿಸುತ್ತಿರುತ್ತೀರಿ, ಆಗ, ಇದ್ದಕ್ಕಿದ್ದಂತೆ, ನಿಮ್ಮ ಉಡುಪಿನ ಯಾವುದಾದರೊಂದು ಭಾಗ 'ಫರ್' ಎಂದರೆ?! ಹೊಲಿಗೆ ಬಿಟ್ಟರೆ, ಅಥವಾ ಜಿಪ್ ಹೋದರೆ, ಅಥವಾ, ಬಟನ್ನು 'ಫಟ್' ಆದರೆ, ಅಥವಾ, ಬಟ್ಟೆಯೇ ಹರಿದುಬಿಟ್ಟರೆ?! ಆಗ ನಿಮ್ಮ ಪರಿಸ್ಥಿತಿ ಊಹಿಸಿ! (ನಿಮ್ಮೆದುರಿನವರ ಪರಿಸ್ಥಿತಿಯನ್ನೂ ಊಹಿಸಿ!) ನಿಮಗಾಗುವ ದಿಢೀರ್ ಅಷಮಾನದ ಬಾಧೆ ಅಂತಿಂಥದೆ? ಎದುರಿನವರು ಕಿಸಕ್ಕನೆ ನಕ್ಕರಂತೂ ನಿಮಗೆ ತಡೆಯಲಾರದಷ್ಟು ಅವಮಾನವೆನ್ನಿಸುತ್ತದೆ. ಆ ಎದುರಿನವರು ನಿಮ್ಮ ವಿರುದ್ಧ ಲಿಂಗಿಗಳಾದರಂತೂ ತೀರಿತು, ನಿಮ್ಮ 'ಅವಮಾನ ಬಾಧೆ'ಯು ವರ್ಣಿಸಲಸದಳ! ಇಂಥ ಘೋರ 'ಅವಮಾನಬಾಧೆ'ಯನ್ನೊಮ್ಮೆ ಅನುಭವಿಸಿಯೂ ನಾನಿನ್ನೂ (ಮರ್ಯಾದೆಸಹಿತ) ಬದುಕಿದ್ದೇನೆಂದರೆ ನಿಮಗೆ ಆಶ್ಚರ್ಯವಾದೀತಲ್ಲವೆ?

ಆವತ್ತು ನಾನು ಅರ್ಜೆಂಟಾಗಿ ಎಲ್ಲಿಗೋ ಹೋಗಬೇಕಿತ್ತು. (ಬೆಂಗಳೂರಿನಲ್ಲಿ ಅರ್ಜೆಂಟ್ ಇಲ್ಲದವರು ಯಾರು?) ಮನೆಯಿಂದ ಹೊರಟು ಒಂದು ಬಿ.ಟಿ.ಎಸ್. ಬಸ್‌ನಲ್ಲಿ ಮೆಜೆಸ್ಟಿಕ್‌ಗೆ ಬಂದೆ. ಅಲ್ಲಿಂದ ಇನ್ನೊಂದು ಬಸ್ ಹಿಡಿದು ಗಮ್ಯಸ್ಥಳ ತಲುಪಬೇಕಾಗಿತ್ತು. ಈ ಬಸ್ ಇಳಿಯುತ್ತಲೂ, ಅಷ್ಟು ದೂರದಲ್ಲಿ

ಎರಡನೇ ಬಸ್ಸು ಹೊರಟು ನಿಂತಿದ್ದು ಕಂಡು ಬಂತು. ಸರಿ, ಓಡಿದೆ. ಓಡಿಹೋಗಿ ಆ ಬಸ್ಸನ್ನು ನಾನು ಏರುವುದಕ್ಕೂ, ಬಸ್ಸು ಮೂವ್ ಆಗುವುದಕ್ಕೂ, ನನ್ನ ಪ್ಯಾಂಟಿನ ಮುಂಭಾಗ 'ಪರ್' ಅನ್ನುವುದಕ್ಕೂ ಸರಿಹೋಯಿತು! ಕರೆಂಟ್ ಹೊಡೆದಂತಾಯಿತು! ಈಗೇನು ಮಾಡಲಿ? ಬಸ್ಸು ಚಲಿಸತೊಡಗಿದೆ, ಪ್ಯಾಂಟು ಸರಿಯಾಗಿ ಅದೇ ಆಯಕಟ್ಟಿನ ಸ್ಥಳದಿಂದಲೇ ಉದ್ದಕ್ಕೆ 'ಪರ್' ಅಂದಿದೆ, (ಫೂಟ್‌ಬೋರ್ಡ್ ಬಳಿ ಏತಕ್ಕೋ ಸಿಕ್ಕಿ ಹರಿದಿರಬೇಕು, ಅವಸರದಲ್ಲಿ ಅಡಾವುಡಿಯಾಯ್ತು!) ಮರೆಮಾಡಿಕೊಳ್ಳಲು ಕೈಯಲ್ಲಿ ಕರವಸ್ತ್ರ ಬಿಟ್ಟರೆ ಇನ್ನೇನೂ ಇಲ್ಲ, 'ಏನಿದೀ ಗ್ರಹಚಾರವೋ! ಏನು ಮಾಡಿದೆನೆಂದು ಈ ಗತಿ ಎನಗೆ ತಂದೆಯೋ ಪಶುಪತಿ?!' ಎಂಬ 'ಸತ್ಯ ಹರಿಶ್ಚಂದ್ರ' ಸಿನೆಮಾದ ಹಾಡು ನೆನಪಾಯಿತು! 'ಮುಂದಿನ ಸ್ಟಾಪಿನಲ್ಲಿ ಇಳಿದುಬಿಡಲೋ?' ಎಂದು ಯೋಚಿಸಿದೆ. ಅದೇ ಸರಿ ಎನ್ನಿಸಿತು. 'ಇಳಿದುಬಿಟ್ಟು, ಆಟೋ ಮಾಡಿಕೊಂಡು ಮನೆಗೆ ವಾಪಸಾಗುವುದು,' ಎಂದು ನಿರ್ಧರಿಸಿದೆ. ಅಷ್ಟರಲ್ಲಾಗಲೇ, ಬಸ್ಸಿನಲ್ಲಿದ್ದವರಲ್ಲಿ ನಾಲ್ಕಾರು ಜನರು (ಓರ್ವ ಹೆಂಗಳೆಯೂ ಸೇರಿದಂತೆ, ಅಕಟಕಟಾ!) ನನ್ನ ಅವಸ್ಥೆಯನ್ನು ಗಮನಿಸಿ ಮುಸಿಮುಸಿ ನಗತೊಡಗಿದ್ದರು. ನನ್ನ ಮೈಕೈ ಭಯದಿಂದ ಕಂಪಿಸತೊಡಗಿತು, ದೇಹ ಬೆವರತೊಡಗಿತು. ಯಾವುದ್ಯಾವುದೋ ಭಂಗಿಯಲ್ಲಿ ನಿಂತು, (ಕೂರಲು ಸೀಟು ಖಾಲಿ ಇಲ್ಲ) ಹೇಗ್ಹೇಗೋ ಡ್ಯಾನ್ಸ್ ಮಾಡುತ್ತಾ, ಕೈಯಿಂದ ಏನೇನೋ ಮುದ್ರೆಗಳನ್ನು ಪ್ರದರ್ಶಿಸುತ್ತ, ತಾರಮ್ಮಯ್ಯ ಆಡುತ್ತ ನನ್ನ ಆ ಅವಸ್ಥೆಯನ್ನು ಮರೆಮಾಚಲು ಯತ್ನಿಸತೊಡಗಿದೆ. ಊಹ್ಞೂಂ. ಪ್ರಯೋಜನವಾಗಲಿಲ್ಲ. ಮಾನ ಮುಚ್ಚುವಲ್ಲಿ ಆ ಎಲ್ಲ ಮುದ್ರಾಸನಗಳೂ ವಿಫಲವಾದುವು. ದೇಹದ ಕಂಪನ ಜೋರಾಯಿತು. ಅಷ್ಟರಲ್ಲಿ ಮುಂದಿನ ಸ್ಟಾಪು ಬಂತು. ನಾಚಿಕೆ, ಆತಂಕಗಳಿಂದ ಓಲಾಡುತ್ತ, ಆದಷ್ಟೂ ಮಾನ ಮುಚ್ಚಲು ಒದ್ದಾಡುತ್ತ, ಕಂಪಿಸುವ ಕಾಲುಗಳನ್ನು ಹತೋಟಿಗೆ ತರಲಾರದೇ ತೂರಾಡುತ್ತ ಅದು ಹೇಗೋ ಬಸ್ಸಿನಿಂದಿಳಿದೆ. ಸುತ್ತ ನೋಡಿದೆ. ಒಂದು ಆಟೋ ಇಲ್ಲ! ಬರೀ ಜನಗಳೇ! ಆಟೋಗೆ ಕಾಯುತ್ತ ನಿಂತು ಸುತ್ತಲವರ ಗಮನ ಸೆಳೆದು ಅವಮಾನಿತನಾಗುವುದಕ್ಕಿಂತ ಆಟೋ ಹುಡುಕಿಕೊಂಡು ಚಲಿಸುವುದೇ ಒಳ್ಳೆಯದೆಂದುಕೊಂಡು, ಕಂಪಿಸುತ್ತಲೇ, ಡ್ಯಾನ್ಸ್ ಮಾಡುತ್ತಲೇ, ಕೈ ಕಾಲು ಮುದ್ರೆಗಳನ್ನು ಪ್ರಾಕ್ಟೀಸ್ ಮಾಡುತ್ತಲೇ ಮುನ್ನಡೆದೆ. ದಾರಿಯಲ್ಲಿ ಎದುರಾದ ಪ್ರತಿಯೋರ್ವನೂ-ಳೂ ನನ್ನನ್ನೇ (ಕೆಳಗಡೆ) ನೋಡಿ ನಕ್ಕಂತೆನಿಸಿತು. ಮನಸ್ಸಿನ ಹತೋಟಿ ತಪ್ಪತೊಡಗಿತು. ತೂರಾಡುತ್ತ ಹಾಗೂ ಹೀಗೂ ಒಂದು ಆಟೋ ಬಳಿ ಬಂದು ನಿಂತೆ. 'ಮಲ್ಲೇಶ್... ಶ್... ವರಂ.... ಸ್ವಿಮ್ಮಿಂಗ್.... ಪ್.... ಪ್... ಪೂಲ್... ಎ... ಎ... ಎಕ್ಸ್‌ಟೆನ್ಷನ್,' ಎಂದು ಬಹು ಕಷ್ಟದಿಂದ ನುಡಿದೆ. (ಗಂಟಲ ದ್ರವ ಬತ್ತ ತೊಡಗಿದ್ದಾಗ ಅಷ್ಟು ಮಾತು ಬಂದದ್ದೇ ಹೆಚ್ಚು) ಆಟೋ ಡ್ರೈವರೊಮ್ಮೆ ನನ್ನನ್ನು ಕೆಟ್ಟದಾಗಿ ದಿಟ್ಟಿಸಿ, 'ಹ್ಞೂಂ, ಹತ್ತಿ' ಎಂದು ಆರ್ಡರ್ ಮಾಡಿದ.

ಆಟೋದಿಂದ ಇಳಿದವನೇ, ಮೀಟರ್ ನೋಡಿ, ಇಪ್ಪತ್ತರ ನೋಟನ್ನು ಆಟೋದವನ ಕೈಗೆ ಕುಕ್ಕಿ, ಚಿಲ್ಲರೆಗಾಗಿ ಕಾಯದೇ ಸೀದಾ ಮನೆಗೆ ಧಾವಿಸಿದೆ. "ಕುಡುಕ ಸೂ.... ಮಗ, ಬೆಳಗಾಬೆಳಗೇ ಕುಡ್ದು, ಎಲ್ಲೋ ಬಿದ್ದು, ಪ್ಯಾಂಟು ಹರ್‍ಕೊಂಡಿದಾನೆ, ಮರ್ಯಾದೆ ಸತ್ತೋನು," ಅಂತ ಆ ಆಟೋ ಡ್ರೈವರು ಗೊಣಗಿಕೊಳ್ಳುತ್ತ ಆಟೋ ಸ್ಟಾರ್ಟ್ ಮಾಡಿದ್ದು ಆ ಧಾವಂತದಲ್ಲೂ ನನ್ನ ಗಮನಕ್ಕೆ ಬಾರದಿರಲಿಲ್ಲ! ಇದಕ್ಕಿಂತ ಹೆಚ್ಚಿನ ಅವಮಾನ ಇನ್ನೊಂದುಂಟೆ?

# ಹಿಮಾಚಲ ಪ್ರದೇಶದ ಸುಂದರ ಸರೋವರ–
# ಮಣಿ ಮಹೀಶ

ಅನುಭವ:
**ಬಿ.ಆರ್. ನಂಜುಂಡಯ್ಯ**
ನಿರೂಪಣೆ:
**ಶ್ರೀಮತಿ ಸತ್ಯನಾರಾಯಣ**

ಹಿಮಾಲಯದ ಪರ್ವತ ಶ್ರೇಣಿಗಳಲ್ಲಿ ಯಾವುದೆ ಜಾಗಕ್ಕೆ ಭೇಟಿ ನೀಡಿದರೂ, ಹಿಮಮುಸುಕಿದ ಬೆಡಗಿನ ಪರ್ವತಗಳು, ಹರಿದ್ವರ್ಣದ ಅರಣ್ಯಗಳು, ಜುಳುಜುಳು ಧ್ವನಿ ಮಾಡುತ್ತ ರಭಸದಿಂದ ಹರಿಯುವ ನದಿಗಳು, ಸುಂದರ ಸರೋವರಗಳು ಕಣ್ಮನಗಳನ್ನು ತಣಿಸುತ್ತವೆ.

ದೈಹಿಕ, ಆರ್ಥಿಕ ಚೈತನ್ಯಗಳಿದ್ದು, ನಿಸರ್ಗ ಸೌಂದರ್ಯವನ್ನು ಸವಿಯುವ ಮನಸ್ಸಿದ್ದರೆ ಎಷ್ಟು ಸಲ ಹಿಮಾಲಯದ ಸ್ಥಳಗಳಿಗೆ ಭೇಟಿ ನೀಡಿದರೂ ಬೇಸರವೆನಿಸದು. ಪ್ರತಿ ಭೇಟಿಯಲ್ಲೂ ಹೊಸ ಆಹ್ಲಾದ, ಚೈತನ್ಯ ಉಂಟಾಗುತ್ತದೆ. ೧೯೭೪ರಲ್ಲಿ ಅಮರನಾಥಗೆ ಭೇಟಿ ಕೊಟ್ಟಾಗ ಇದಕ್ಕಿಂತಲೂ ಕಠಿಣವಾದ 'ಮಣಿ' ಮಹೀಶ' ಯಾತ್ರೆ ಎನ್ನುವುದಿದೆ ಎಂದು ಸಹಪ್ರಯಾಣಿಕರೊಬ್ಬರು ಹೇಳಿದ್ದರು. ಅಂದಿನಿಂದ ಹಿಮಾಚಲಪ್ರದೇಶದಲ್ಲಿರುವ 'ಮಣಿ' ಮಹೀಶ'ಗೆ ಹೋಗಲು ಮನ ಕಾತರಿಸುತ್ತಿತ್ತು. ಕೊನೆಗೊಮ್ಮೆ ಎಷ್ಟೇ ಕಷ್ಟವಾದರೂ ಸರಿ, ಜೊತೆಗೆ ಯಾರೂ ಸಿಗದಿದ್ದರೂ ಸರಿ, ಈ ಯಾತ್ರೆ ಮಾಡಲೇಬೇಕೆಂದು ನಿರ್ಧರಿಸಿದೆ. ಬಹುಪಾಲು ದಕ್ಷಿಣದವರಿಗಂತೂ ಇದರ ಬಗ್ಗೆ ಆಗ ಗೊತ್ತೇ ಇರಲಿಲ್ಲ. ಹಿಮಾಚಲ ಪ್ರವಾಸ ಸಂಸ್ಥೆಯ ಏರ್ಪಾಟನ್ನು ಬಿಟ್ಟರೆ ಬೇರೆ ಯಾವ ಪ್ರವಾಸಿ ಸಂಸ್ಥೆಯೂ ಈ ಯಾತ್ರೆಯನ್ನು ಏರ್ಪಡಿಸುತ್ತಿರಲಿಲ್ಲ.

ಹಿಮಾಚಲ ಪ್ರವಾಸಿ ಸಂಸ್ಥೆಯಿಂದ ಮಾಹಿತಿಗಳನ್ನು ತರಿಸಿದೆ. ಆದರಿಂದ ೧೯೮೪ರ ಆಗಸ್ಟ್ ೨೮ನೆ ತಾರೀಖು 'ಚಂಬಾ'ದಿಂದ ಯಾತ್ರಾರ್ಥಿಗಳು ಹೊರಟು ಸೆಪ್ಟಂಬರ್ ೨ನೆ ತಾರೀಖು 'ಮಣಿ' ಮಹೀಶ'ಗೆ ಸೇರುತ್ತಾರೆಂದು ತಿಳಿಯಿತು.

ಆಗಸ್ಟ್ ೨೪ನೆ ತಾರೀಖಿಗೆ ಬೆಂಗಳೂರಿನಿಂದ ದಿಲ್ಲಿ ಮಾರ್ಗವಾಗಿ ಪಠಾಣಕೋಟೆಗೆ ಹೋಗಲು

**ಎಷ್ಟೇ ಕಷ್ಟವೆನಿಸಿದರೂ ಈ ಯಾತ್ರೆ ಸಂತಸ ತರುವಂಥದು. ಚಾರಣಪ್ರಿಯರೆ ಆಗಲಿ, ಕವಿಗಳೇ ಆಗಲಿ, ಕಲಾವಿದರೇ ಇರಲಿ, ಇಲ್ಲವೆ ಧಾರ್ಮಿಕ ಪ್ರವೃತ್ತಿಯವರೇ ಆಗಿರಲಿ ಈ ಪ್ರವಾಸದಿಂದ ಪ್ರಯೋಜನ ಪಡೆಯುತ್ತಾರೆ.**

ಕರ್ನಾಟಕ ಎಕ್ಸ್‌ಪ್ರೆಸ್‌ನಲ್ಲಿ ಸ್ಥಳ ಕಾದಿರಿಸಿದೆ. ಚಾರಣಕ್ಕೆ ಬೇಕಾಗುವ ಸ್ಲೀಪಿಂಗ್ ಬ್ಯಾಗ್, ಬೆಚ್ಚನೆ ಬಟ್ಟೆಗಳು, ರೇನ್‌ಕೋಟ್, ನೀರಿನ ಸೀಸೆ, ಒಣ ಹಣ್ಣುಗಳು, ಬಿಸ್ಕತ್ತು, ಟಾರ್ಚ್, ಹಂಟರ್ ಬೂಟುಗಳು ಹಾಗೂ ಅವಶ್ಯಕವಾದ ಪ್ರಥಮ ಚಿಕಿತ್ಸೆಯ ಔಷಧಗಳು ಎಲ್ಲವನ್ನೂ ಸಿದ್ಧಪಡಿಸಿಕೊಂಡೆ.

ಯಾವುದೋ ಗಲಾಟೆಯ ನಿಮಿತ್ತ ಆ ದಿನ ಹೊರಡಬೇಕಾಗಿದ್ದ ರೈಲನ್ನು ರದ್ದುಪಡಿಸಲಾಗಿದೆ ಎಂದು ತಿಳಿದಾಗ ನನಗೆ ಆದ ನಿರಾಶೆ ಅಷ್ಟಿಷ್ಟಲ್ಲ. ಅದೇ ದಿನ ಬೆಳಿಗ್ಗೆ ರೇಲ್ವೆ ನಿಲ್ದಾಣಕ್ಕೆ ಹೋಗಿದ್ದಾಗ ನಿಜಾಮುದ್ದೀನ್ ಎಕ್ಸ್‌ಪ್ರೆಸ್ ಬಂದು ಸಂಜೆಗೆ ಹೊರಡುವುದೆಂದು ತಿಳಿದು, ಅದರಲ್ಲಿ ಹೋಗಬಹುದೆಂದು ಸಂತೋಷವೆನಿಸಿದರೂ ಜಾಗದ ವ್ಯವಸ್ಥೆಯ ಬಗ್ಗೆ ಅನುಮಾನವಿತ್ತು. ವಿಚಾರಿಸಿದಾಗ ಜಾಗ ಸಿಕ್ಕಿತು. ಸಂತೋಷಕ್ಕೆ ಮೇರೆಯೇ ಇರಲಿಲ್ಲ.

೨೬ನೆ ತಾರೀಖು ಬೆಳಿಗ್ಗೆ ದಿಲ್ಲಿ ತಲಪಿ, ಸಂಜೆ ಪಠಾಣಕೋಟದತ್ತ ಪ್ರಯಾಣಿಸಿ ಮರುದಿನ ಬೆಳಿಗ್ಗೆ ಅಲ್ಲಿಗೆ ತಲಪಿದೆ. ಅಲ್ಲಿಂದಿಳಿದ ಕೂಡಲೆ ಚಂಬಾಗೆ ಬಸ್ಸಿನಲ್ಲಿ ಪಯಣ. ಚಂಬಾದಿಂದ ಯಾತ್ರೆ ಪ್ರಾರಂಭ.

## ಐತೀಹ್ಯ

ಹಿಮಾಚಲಪ್ರದೇಶದಲ್ಲಿ ಅನೇಕ ದೇವಸ್ಥಾನಗಳು, ಸರೋವರಗಳು ಮತ್ತು ಸುಂದರ ಗಿರಿಧಾಮಗಳು ಇವೆ. ಹಿಮಾಲಯದ ವಾಯುವ್ಯದಲ್ಲಿ ಸಮುದ್ರ ಮಟ್ಟದಿಂದ ಸುಮಾರು ೧೯ ಸಾವಿರ ಅಡಿ ಎತ್ತರದಲ್ಲಿರುವ 'ಮಣಿ ಮಹೇಶ.' ಕೈಲಾಸ ಪರ್ವತ ಶ್ರೇಣಿಯ ಕೆಳಗಿರುವುದು 'ಮಣಿ ಮಹೇಶ ಸರೋವರ'. ಇದು ಸಮುದ್ರ ಮಟ್ಟದಿಂದ ೧೩ ಸಾವಿರ ಅಡಿ ಎತ್ತರದಲ್ಲಿದೆ. ಪ್ರತಿ ವರ್ಷವೂ ಸಾವಿರಾರು ಜನ, ಭಾದ್ರಪದ ಅಷ್ಟಮಿಯಂದು ಈ ಸರೋವರದಲ್ಲಿ ಸ್ನಾನ ಮಾಡಲು ಬರುತ್ತಾರೆ. ಈ ದಿನಕ್ಕೆ ರಾಧಾಷ್ಟಮಿ ಎಂದು ಹೆಸರು. ಶ್ರಾವಣ ಪೂರ್ಣಿಮೆಯಂದು ಅಮರನಾಥನ ಹಿಮಲಿಂಗವನ್ನು ದರ್ಶಿಸುವ ರೀತಿಯಲ್ಲೇ ಇಲ್ಲಿಗೆ ಯಾತ್ರಿಕರು ಬರುತ್ತಾರೆ.

ಈ ಯಾತ್ರೆಗೆ ಚಾರ್‌ಸಕ್‌ನಾಥ್‌ಚಾರಿ ಯಾತ್ರಾ ಎಂದು ಹೆಸರು. ಚಂಬಾದಲ್ಲಿರುವ ಚಾರ್‌ಸಕ್ ನಾಥ್ ಮಂದಿರದಿಂದ ಸಂಬಂಧಪಟ್ಟವರು ದೇವರುಗಳನ್ನು ತೆಗೆದುಕೊಂಡು ಒಂದೂವರೆ ಕಿಲೋಮೀಟರು ನಡೆಯುತ್ತ 'ಜುಲ್ಲಾಕಾರಿ' ಎಂಬ ಜಾಗಕ್ಕೆ ಬಂದು ಅಲ್ಲಿಂದ ಭರ್‌ಮೂರ್‌ಗೆ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಾರೆ. ಹಡಸರ್, ಧಾಂಚೋ ಎಂಬ ಸ್ಥಳಗಳಲ್ಲಿ ತಂಗಿ, ಸಪ್ತಮಿಯಂದು ಮಣಿ ಮಹೇಶ ತಲಪುತ್ತಾರೆ. ಅಷ್ಟಮಿಯ ದಿನ ಸರೋವರದಲ್ಲಿ ಸ್ನಾನ ಮಾಡಿ, ದೇವರನ್ನು ಪೂಜಿಸಿ, ದಶಮಿಯಂದು ಬಂದ ಮಾರ್ಗದಲ್ಲೇ ಹಿಂದಿರುಗುತ್ತಾರೆ. ಈ ಪ್ರಯಾಣದಲ್ಲಿ ಒಟ್ಟು ೫೨ ಕಿಲೋಮೀಟರಿನಷ್ಟು ನಡೆಯಬೇಕಾಗುತ್ತದೆ. ಈ ಕ್ರಮವನ್ನು ಎಲ್ಲ ಯಾತ್ರಾರ್ಥಿಗಳೂ ಅನುಸರಿಸುತ್ತಾರೆ. ವರ್ಷದ ಈ ಸಮಯದಲ್ಲಿ ಮಾತ್ರ ಮಣಿಮಹೇಶಗೆ ಹೋಗುತ್ತಾರೆ.

ಪರ್ವತದ ತಪ್ಪಲಿನಲ್ಲಿರುವ ಹಿಮಾಚ್ಛಾದಿತ ಬಯಲು ಶಿವ-ಪಾರ್ವತಿಯರು ವಿಹರಿಸಿದ ಸ್ಥಳವೆಂದು ಸ್ಥಳೀಯ ಜನರ ನಂಬುಗೆ. ಕುರುಬನೊಬ್ಬ ಕುರಿಗಳೊಡನೆ ಪರ್ವತ ಹತ್ತಲು ಪ್ರಯತ್ನಿಸಿದಾಗ ಅವರೆಲ್ಲ ಶಿಲೆಯಾದರೆಂದೂ, ಅವುಗಳೇ ಮುಖ್ಯ ಪರ್ವತದ ಕೆಳಗೆ ಇರುವ ಸಣ್ಣ ಸಣ್ಣ ಶಿಖರಗಳೆಂದೂ ದಂತಕಥೆಯಿದೆ. ಈ ಪರ್ವತ ಶ್ರೇಣಿಗಳು ಸರ್ಪಾಕಾರದಲ್ಲಿ ಕಂಡು ಬರುತ್ತವೆ. ಹೀಗಾಗಿ ಸರ್ಪಗಳೇ ಕಲ್ಲಾಗಿ ಪರಿವರ್ತನಗೊಂಡಿರುವುದೆಂದು ಅಲ್ಲಿನ ಜನರ ನಂಬಿಕೆ. ಇಡಿ ಪ್ರದೇಶ ಪ್ರಕೃತಿ ಸೌಂದರ್ಯದಿಂದ ಕಂಗೊಳಿಸುತ್ತದೆ. ಪವಿತ್ರ ಸ್ಥಳವೆಂದೂ ಪರಿಗಣಿಸಲ್ಪಟ್ಟಿದೆ.

## ಚಂಬಾ

ಪಠಾಣಕೋಟದಿಂದ ೧೨೨ ಕಿಲೋಮೀಟರು ದೂರದಲ್ಲಿರುವ ಚಂಬಾ ಹಿಮಾಚಲ ಪ್ರದೇಶದಲ್ಲಿದೆ. ಪಠಾಣಕೋಟಕ್ಕೆ ಅಮೃತಸರ, ಜಾಲಂದರ್, ದಿಲ್ಲಿ, ಮುಂಬೈ, ಕಲ್ಕತ್ತಾದಿಂದ ಬರಲು ರೈಲಿನ ಅನುಕೂಲ ಇದೆ. ಮಣಿ ಮಹೇಶ ಯಾತ್ರೆಗೆ ಹೋಗುವವರು ಇಲ್ಲಿಂದಲೇ ಯಾತ್ರೆ ಆರಂಭಿಸುವುದು.

ಚಂಬಾ ಖಂಡಿತವಾಗಿಯೂ ನೋಡಬೇಕಾದ ಸ್ಥಳ. ಕಣಿವೆಯ ಮಧ್ಯದಲ್ಲಿರುವ ಚಂಬಾ ಸಮುದ್ರ ಮಟ್ಟದಿಂದ ೩೨೦೦ ಅಡಿ ಎತ್ತರದಲ್ಲಿದೆ. ರಭಸದಿಂದ ಹರಿಯುವ ರಾವಿ ನದಿ ಇಲ್ಲಿದೆ. ದೇವದಾರು ವೃಕ್ಷಗಳು ಎಲ್ಲೆಲ್ಲಿಯೂ ಕಾಣಬರುತ್ತವೆ. ಇಲ್ಲಿ ಅನೇಕ ದೇವಸ್ಥಾನಗಳು ಇವೆ. ವಿಶಾಲವಾದ ಮೈದಾನ ವಿಹಾರಕ್ಕೆ, ಮಂದಿರಗಳಿಗೆ ಈ ಸ್ಥಳ ಪ್ರಸಿದ್ಧವಾಗಿದೆ. ಇಲ್ಲಿ ಒಂದು ಕಿಲೋಮೀಟರು ಉದ್ದ, ೭೫ ಮೀಟರು ಅಗಲವಿರುವ ಹುಲ್ಲುಗಾವಲು ಸುಂದರವಾಗಿದೆ. ಜಾತ್ರೆ, ಸಂತೆ ನಡೆಯುವುದು ಈ ಹುಲ್ಲುಗಾವಲಿನಲ್ಲಿಯೆ. ಚಂಬಾ ಚಿಕ್ಕ ಊರಾದರೂ ಸುತ್ತಮುತ್ತ ಹಳ್ಳಿಗಳಿಂದ ಜನರು ವ್ಯಾಪಾರಕ್ಕೆಂದು ಬರುವುದರಿಂದ ಗಲಾಟೆ ಬಹಳ. ಒಂದೇ ಆವರಣದಲ್ಲಿ ಮೂರು ವಿಷ್ಣು ಹಾಗೂ ಮೂರು ಶಿವ ಮಂದಿರಗಳಿವೆ. ಮರದಲ್ಲಿ ಕಲಾತ್ಮಕವಾದ, ಸೊಗಸಾದ ಕೆತ್ತನೆ ಕೆಲಸಗಳಿರುವುದು ದೇವಸ್ಥಾನಗಳ ವೈಶಿಷ್ಟ್ಯ. ಈ ಮಂದಿರಗಳು ೧೦ನೆ ಶತಮಾನಕ್ಕೆ ಸೇರಿದವುಗಳೆಂದು ಹೇಳಲಾಗುತ್ತದೆ.

ಇಲ್ಲಿಯ ಇನ್ನೊಂದು ಆಕರ್ಷಣೆಯೆಂದರೆ ಭೂರಿಸಿಂಗ್ ಮ್ಯೂಸಿಯಮ್. ಚಂಬಾದ ಸಾಂಸ್ಕೃತಿಕ ಸಂಪತ್ತು ಹಾಗೂ ಕಾಂಗ್ರಾ ಮತ್ತು ಬಾಸೋಲಿ ಶೈಲಿಗಳ ಉತ್ತಮ ಚಿತ್ರಗಳ ಸಂಗ್ರಹ ಇಲ್ಲಿದೆ. ಶಿಲಾಶಾಸನಗಳೂ ಸಾಕಷ್ಟು ಉಂಟು. ಚಪ್ಪಲಿ, ಶಾಲು, ಕಂಬಳಿ ಹಾಗೂ ಚರ್ಮದ ವಸ್ತುಗಳ ಕಸೂತಿ ಕೆಲಸ ಮಾಡಿರುವ ವಿವಿಧ ವಸ್ತುಗಳಿಗೆ ಚಂಬಾ ತುಂಬಾ ಪ್ರಸಿದ್ಧ.

೨೯ನೆ ತಾರೀಖು ಬೆಳಿಗ್ಗೆ ವಿಶೇಷ ಬಸ್ಸಿನಲ್ಲಿ 'ಖರಮುಖ್' ಎಂಬ ಸ್ಥಳ ತಲಪಿದೆ. ಚಂಬಾದಿಂದ ಇಲ್ಲಿಗೆ ೫೨ ಕಿಲೋಮೀಟರ್‌ಗಳ ಪ್ರಯಾಣ. ರಾವಿ ನದಿಗೆ ಹಂಗಾಮಿಯಾಗಿ ನಿರ್ಮಿಸಿದ್ದ ಮರದ ಸೇತುವೆ ಮೇಲೆ ನಡೆದು ನದಿಯ ಇನ್ನೊಂದು ಭಾಗವನ್ನು ತಲಪಬೇಕು. ಇಲ್ಲಿಂದ ಪುನಃ ಬಸ್ಸಿನಲ್ಲಿ ಭರಮೂರ್‌ಗೆ ೧೩ ಕಿಲೋಮೀಟರುಗಳ ಪ್ರಯಾಣ. (ಈಗ ರಾವಿ ನದಿಗೆ ಸೇತುವೆಯಾಗಿದೆ ಎಂದು ತಿಳಿದು ಬಂದಿದೆ.) ಭರಮೂರ್ ತಲಪಿದಾಗ ಮಧ್ಯಾಹ್ನವಾಗಿತ್ತು.

## ಭರಮೂರ್

ಬ್ರಹ್ಮಪುರ ಎನಿಸಿ ಜನರ ಬಾಯಲ್ಲಿ ಭರಮೂರ್ ಆದ ಸ್ಥಳ. ಸಮುದ್ರ ಮಟ್ಟದಿಂದ ೬೦೦೦ ಅಡಿ ಎತ್ತರದಲ್ಲಿರುವ ಭರಮೂರ್‌ನಲ್ಲಿ ಪುರಾತನ ದೇವಸ್ಥಾನಗಳು, ಗತವೈಭವದ ಪ್ರತೀಕವಾಗಿ ಇರುವ ಸ್ಮಾರಕಗಳು ಸಾಕಷ್ಟಿವೆ. ಏಳನೆಯ ಶತಮಾನದಲ್ಲಿ ಕಟ್ಟಿದ ಮಂದಿಗಳಿವೆ. ಗಡ್ಡಿ ಎಂಬ ಜನಾಂಗದವರು ವಾಸಿಸುವ ಸ್ಥಳ. ಇಲ್ಲಿ ಶೈವಾರಾಧನೆಗೆ ಪ್ರಾಮುಖ್ಯ. ಈ ಸ್ಥಳವನ್ನು ಶಿವಭೂಮಿ ಎಂದು ಕರೆಯಲಾಗಿದೆ. ಪರಂಪರೆಯ ಪ್ರಕಾರ, ೮೪ ಯೋಗಿಗಳು ಸಹೀಲವರ್ಮ ಎಂಬ ರಾಜನು ಆಳುತ್ತಿದ್ದಾಗ ಇಲ್ಲಿಗೆ ಬಂದರೆಂದೂ ರಾಜನ ಧರ್ಮನಿಷ್ಠೆ, ಅತಿಥಿ ಸತ್ಕಾರ ನೋಡಿ ಮೆಚ್ಚಿ ಅವರು ಅವನನ್ನು ಆಶೀರ್ವದಿಸಿದರೆಂದೂ ರಾಜನಿಗೆ ಹತ್ತು ಗಂಡು ಮಕ್ಕಳು ಮತ್ತು ಚಂಪಾವತಿ ಎಂಬ ಮಗಳು ಹುಟ್ಟಿದರೆಂದೂ ಪ್ರತೀತಿಯಿದೆ. ಈ ಯೋಗಿಗಳ ಸ್ಮರಣೆಗಾಗಿ ಪೌಳಿಯಲ್ಲಿರುವ ಪುರಾತನ ಮಂದಿರಗಳಿರುವ ಸ್ಥಳಗಳಿಗೆ 'ಚೌರಾಸಿ' ಎಂದರೆ ೮೪ ಎಂದು ಕರೆಯುತ್ತಾರೆ. ಇಲ್ಲಿಯೇ ಎಲ್ಲ ದೇವಮಂದಿರಗಳೂ ಇವೆ. ಸ್ಥಳೀಯ ಜನರು ಇದನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ಇಲ್ಲಿ ಇರುವ ಮುಖ್ಯ ದೇವಸ್ಥಾನಗಳೆಂದರೆ- 'ಮಣಿಮಹೇಶ', 'ಲಕ್ಷಣದೇವಿ', 'ಗಣೇಶ' ಮತ್ತು 'ನರಸಿಂಹ'. ಸುಮಾರು ಆರು ಅಡಿ ಎತ್ತರವಿರುವ ಲೋಹದ ನರಸಿಂಹನ ಮೂರ್ತಿ ತುಂಬಾ ಚೆನ್ನಾಗಿಯೂ, ಉಗ್ರವಾಗಿಯೂ ಕಾಣುತ್ತದೆ. ಲಕ್ಷಣದೇವಿಯ ವಿಗ್ರಹ ಕೂಡ ತುಂಬಾ ಚೆನ್ನಾಗಿದೆ.

---

**ಪ್ರವಾಸದ ಬಗ್ಗೆ ಇವರಿಂದ ಮಾಹಿತಿ ಪಡೆದುಕೊಳ್ಳಬಹುದು:**

The Managing Director,
Himachal pradesh Tourism
Development Corpn., Ltd.,
Ritze Annexe,
**SIMLA-171 001.**

ಇಲ್ಲಿ ಕೂಲಿಗಳು ಸಾಮಾನು ಹೊರಲು ಸಿಗುತ್ತಾರೆ. ಕುದುರೆಗಳ ಮೇಲಿಂದ ಹೋಗುವುದಾದರೆ ಇಲ್ಲಿಂದಲೇ ಗೊತ್ತುಪಡಿಸಿಕೊಳ್ಳಬೇಕು. ಸೇಬು ಸಮೃದ್ಧವಾಗಿ ಬೆಳೆಯುವ ಪ್ರದೇಶ ಇದು.

ಸಾಮಾನ್ಯವಾಗಿ ಯಾತ್ರಿಕರು ಭರಮೂರ್‌ನಲ್ಲಿ ತಂಗಿ, ಮಾರನೆಯ ದಿನ ಮುಂದಿನ ತಂಗು ಸ್ಥಳವಾದ 'ಹಡಸರ್'ಗೆ ಪ್ರಯಾಣಿಸುತ್ತಾರೆ. ತಂಗಲು ವಿಶ್ರಾಂತಿಗೃಹವಾಗಲಿ ಧರ್ಮಶಾಲೆಯಾಗಲಿ ಸಿಗದಿದ್ದರಿಂದ ಹಡಸರ್‌ಗೆ ಪಾದಯಾತ್ರೆ ಆರಂಭಿಸಿದೆ. ೧೨ ಕಿಲೋಮೀಟರ್ ದೂರದ ಪ್ರಯಾಣ. ಈಗ ಹಡಸರ್‌ವರೆಗೆ ರಸ್ತೆ ಆಗಿರುವುದರಿಂದ ಬಸ್ಸಿನಲ್ಲಿ ಹೋಗಬಹುದು. ಎರಡು ಗಂಟೆಗೆ ಹಡಸರ್ ತಲುಪಿದೆ. ಹವೆ ಹಿತಕರವಾಗಿತ್ತು. ನಾನು ವಿಶ್ರಾಂತಿ ಗೃಹದಲ್ಲಿ ಕೋಣೆ ಕಾದಿರಿಸಿರಲಿಲ್ಲವಾಗಿ ಮನೆ ಮನೆ ಹುಡುಕಬೇಕಾಯಿತು. ಎಲ್ಲ ಕಡೆ ಯಾತ್ರಿಕರು ತುಂಬಿದ್ದರು. ಕೊನೆಗೆ ಬಹಳ ಕಷ್ಟಪಟ್ಟ ಮೇಲೆ ಒಬ್ಬರ ಮನೆಯ ಜಗಲಿಯ ಮೇಲೆ ತಂಗಲು ಜಾಗ ಸಿಕ್ಕಿತು. ಮನೆಯ ಜನ ಹಾಸಿಕೊಳ್ಳಲು ಟಾರ್‌ಪಾಲಿನ್ ಕೊಟ್ಟು ಸಹಾಯ ಮಾಡಿದರು. ಪಂಜಾಬಿನಿಂದ ಬಂದಿದ್ದ ಶರ್ಮಾ ಎನ್ನುವವರು ಈ ಮನೆಯಲ್ಲಿ ಇಳಿದುಕೊಂಡಿದ್ದು ಅವರ ಪರಿಚಯವಾಯಿತು. ಮಣಿ ಮಹೇಶದಲ್ಲಿ ಪ್ರತಿ ವರ್ಷವೂ ಯಾತ್ರಿಕರಿಗೆ ಉಚಿತವಾಗಿ ಚಹಾ ಕೊಡುವ ಏರ್ಪಾಡನ್ನವರು ಮಾಡುತ್ತಿದ್ದರು.

೩೧ನೆಯ ತಾರೀಖು ಬೆಳಿಗ್ಗೆ ಮುಂದಿನ ತಂಗುದಾಣವಾದ ಧಾಂಚೋ ಕಡೆಗೆ ಪ್ರಯಾಣ. ಜೊತೆಯಲ್ಲಿ ಶರ್ಮಾ ಅವರೂ ಇದ್ದರು. ಏಳು ಕಿಲೋಮೀಟರು ನಡೆಯಬೇಕು. ಸಮುದ್ರ ಮಟ್ಟದಿಂದ ೮೦೦೦ ಅಡಿಗಳವರೆಗೂ 'ರೇಗನ್' ಎಂಬ ಪಕ್ಷಿ ಕಾಣಬರುತ್ತದೆ. ನೋಡಲು ಕಾಗೆಯ ಹಾಗೆ ಕಾಣುತ್ತದೆ. ಆಮೇಲೆ ಪಕ್ಷಿಗಳ ಸುಳಿವೇ ಇಲ್ಲ. ಕಡಿದಾದ ಮಾರ್ಗ. ಸುಮಾರು ಹತ್ತು ಗಂಟೆಗೆ ಧಾಂಚೋ ತಲಪಿದೆವು. ಮಣಿ ಮಹೇಶದಲ್ಲಿ ವ್ಯವಸ್ಥೆ ಮಾಡಲೋಸುಗ ಶರ್ಮಾ ಅವರು ತಮ್ಮ ಪ್ರಯಾಣವನ್ನು ಮುಂದುವರೆಸಿದರು. ನಾನು ಧಾಂಚೋವಿನಲ್ಲೇ ತಂಗಿದೆ.

ಧಾಂಚೋ ಯಾತ್ರಾ ಸಮಯದಲ್ಲಿ ಹಂಗಾಮಿಯಾಗಿ ತಂಗುವ ಸ್ಥಳ. ಆಗ ಬಯಲಿನಲ್ಲಿ ಟೆಂಟನ್ನು ಹಾಕಿರಲಾಗುತ್ತದೆ. ನನಗೆ ಇಲ್ಲಿ ಜಾಗ ಸಿಕ್ಕಿತು. ಸುಮಾರು ನಾಲ್ಕು ಗಂಟೆಗೆ ಮಳೆ ಪ್ರಾರಂಭವಾಯಿತು. ಟೆಂಟ್ ಮತ್ತು ಇತರ ಯಾವ ವ್ಯವಸ್ಥೆ ಇಲ್ಲದ ಯಾತ್ರಿಕರು ಬಯಲಲ್ಲೇ ನೆನೆದುಕೊಂಡು ಇರಬೇಕಾಯಿತು.

ಧಾಂಚೋವಿನಲ್ಲಿ ಒಂದು ಸುಂದರ ಜಲಪಾತವಿದೆ.

೩೧ನೆ ತಾರೀಖು ಬೆಳಿಗ್ಗೆ ಧಾಂಚೋವಿನಿಂದ ಮಣಿ ಮಹೇಶಕ್ಕೆ ನಡೆಯಲು ಶುರು ಮಾಡಿದೆ. ಏಳೂವರೆ ಕಿಲೋಮೀಟರು ನಡೆಯಬೇಕು. ೪೦೦೦ ಅಡಿ ಎತ್ತರ ಹತ್ತಬೇಕಾಗಿತ್ತು. ಮಳೆಯ ಕಾರಣದಿಂದ ಮಾರ್ಗ ಜಾರುತ್ತಿತ್ತು. ಚಿಕ್ಕದುಂಡಾದ ಹಾಗೂ ಚಪ್ಪಟೆಯಾದ ಕಲ್ಲುಗಳ ಮೆಟ್ಟಿಲ ಮೇಲೆ ಹತ್ತಬೇಕು. ತುಂಬಾ ಕಷ್ಟವಾಗುತ್ತಿತ್ತು. ಮೂರಡಿ ಅಗಲದ ಹಾದಿ. ಒಂದು ಕಡೆ ಪ್ರಪಾತ; ಇನ್ನೊಂದು ಕಡೆ ಪರ್ವತ. ಮಾರ್ಗ ಎಷ್ಟೇ ಕಡಿದಾದರೂ, ಕಠಿಣವಾದರೂ ನಿಸರ್ಗ ಸೌಂದರ್ಯದಿಂದ ಮನಸ್ಸಿಗೆ ಸಂತೋಷವೆನಿಸಿ ದೈಹಿಕ ಕಷ್ಟಗಳನ್ನು ಸಹಿಸುವ ಶಕ್ತಿ ಬರುತ್ತಿತ್ತು.

ರಾವಿ ಮತ್ತು ಐರಾವತಿ ನದಿ ಎರಡೂ ಸೇರಿ ೨೦೦ ಅಡಿ ಕೆಳಗೆ ಕಾಣುವ ಕಂದರದ ದೃಶ್ಯ ರುದ್ರರಮಣೀಯ. ಮೇಲಿನಿಂದ ಬಗ್ಗಿ ನೋಡಿದಾಗ ಭೀಕರವೆನಿಸುತ್ತದೆ. ಮಣಿ ಮಹೇಶ ತಲುಪುವ ಮುಂಚೆ ಗೌರಿಕುಂಡ ಎಂಬ ಸ್ಥಳ ಸಿಗುತ್ತದೆ. ಇಲ್ಲಿಗೆ ತಲಪಲು ಎರಡು ಮಾರ್ಗಗಳಿವೆ. ಒಂದು ಬಂದರ್‌ಘಾಟ್, ಇನ್ನೊಂದು ಭೈರೋ ಘಾಟ್. ಭೈರೋಘಾಟ್ ಮಾರ್ಗ ಹತ್ತಿರವಾದರೂ ತುಂಬ ಕಡಿದಾದ ಜಾಗ. ಸಾಮಾನ್ಯವಾಗಿ ಸ್ಥಳೀಯ ಜನರು ಈ ಮಾರ್ಗದಲ್ಲೇ ಹೋಗುವುದು. ನಾನು ಬಲಾವರ್ ಘಾಟ್ ಮಾರ್ಗವಾಗಿ ಗೌರಿಕುಂಡ ತಲಪಿದೆ. ಗೌರಿಕುಂಡದಲ್ಲಿ ಒಂದು ಸಣ್ಣ ತಣ್ಣೀರಿನ ಕೊಳ. (ಕೇದಾರನಾಥಗೆ ಹೋಗುವಾಗ ಸಿಗುವ ಗೌರಿಕುಂಡದ ಬಿಸಿನೀರಿನ ಕೊಳ ಅಲ್ಲ.) ಮಣಿ ಮಹೇಶ

ತಲಪುವ ಮುಂಚೆ ಐರಾವತಿ ನದಿಗೆ ಬಿದಿರಿನಿಂದ ನಿರ್ಮಿಸಿದ ಸೇತುವೆ ಮೇಲೆ ಹೋಗಬೇಕು.

ಮಧ್ಯಾಹ್ನ ಮಣಿ ಮಹೀಶ ಸರೋವರವಿರುವ ಜಾಗ ತಲಪಿದೆ. ಆಗಲೇ ಸಾವಿರಾರು ಯಾತ್ರಿಕರು ಸೇರಿದ್ದರು. ಸರೋವರದ ಎದುರುಗಡೆ ಇಳಿಜಾರಾದ ಬಯಲು. ಅಲ್ಲಿ ಅನೇಕ ಟೆಂಟುಗಳನ್ನು ಹಾಕಲಾಗಿತ್ತು. ಶರ್ಮಾ ಅವರ ಟೆಂಟಿನಲ್ಲಿ ಇಳಿಯುವುದೆಂದು ನಿಶ್ಚಯಿಸಿದ್ದೆ. ಆದರೆ ಅವರ ಟೆಂಟನ್ನು ಹುಡುಕುವುದೇ ಕಷ್ಟವಾಯಿತು. ವಿಚಾರಣೆಯ ಕೇಂದ್ರದಲ್ಲಿಯೇ ಆಫೀಸರರನ್ನು ತಕ್ಷಣಕ್ಕೆ ಜಾಗ ಸಿಗುತ್ತದೆಯೆ? ಎಂದು ವಿಚಾರಿಸಿದೆ. ಅಲ್ಲಿದ್ದ ಟೆಂಟ್‌ನಲ್ಲಿ ವಿಶ್ರಮಿಸಲು ಹೇಳಿ, ಧ್ವನಿವರ್ಧಕದಲ್ಲಿ ಇಂತಹವರು ಬಂದಿದ್ದಾರೆ. ಶರ್ಮಾ ಅವರಿಗಾಗಿ ಕಾಯುತ್ತಿದ್ದಾರೆಂದು ಸಾರಿದರು. ಶರ್ಮಾ ಅವರ ಟೆಂಟ್‌ಗೆ ಹೋಗಿ ಆ ದಿನವೆಲ್ಲ ಪೂರ್ಣ ವಿಶ್ರಾಂತಿ ತೆಗೆದುಕೊಂಡೆ. ಹಾಸಿಗೆ, ಊಟ ಎಲ್ಲ ವ್ಯವಸ್ಥೆಯನ್ನು ಮಾಡಿಕೊಟ್ಟರು. ತುಂಬಾ ಚೆನ್ನಾಗಿ ನೋಡಿಕೊಂಡರು. ಇದು ದೈವ ಸಹಾಯವೆಂದೇ ಹೇಳಬಹುದು. ಇಲ್ಲದಿದ್ದರೆ ಬಹಳ ಕಷ್ಟವಾಗುತ್ತಿತ್ತು.

ನಾಲ್ಕು ಸಾವಿರ ಜನರು ಆ ಸಲದ ಯಾತ್ರೆಗೆ ಬಂದಿದ್ದರು. ೪೦೦ ಜನಕ್ಕೆ ಟೆಂಟಿನ ವ್ಯವಸ್ಥೆ. ಉಳಿದವರು ಬಯಲಿನಲ್ಲಿಯೇ ಮಳೆ, ಚಳಿ ಸಹಿಸಿಕೊಂಡು ಇರಬೇಕಾಯಿತು. ಭರಮೂರ್, ಹಡಸರ್, ಧಾಂಚೋವಿನಲ್ಲಿ ಅಲ್ಲದೆ ಮಣಿ ಮಹೀಶದಲ್ಲೂ ಸೌದೆ, ಸೀಮೆಎಣ್ಣೆ, ನ್ಯಾಯಬೆಲೆಯ ದಿನಸಿ ಅಂಗಡಿಗಳ ಅನುಕೂಲವಿದೆ. ಪ್ರಥಮ ಚಿಕಿತ್ಸೆಯ ವ್ಯವಸ್ಥೆಯೂ ಇದೆ.

೨ನೆಯ ತಾರೀಖು ಅಷ್ಟಮಿಯ ದಿನ ಬೆಳಗಿನ ಜಾವ ನಾಲ್ಕು ಗಂಟೆಯಿಂದಲೇ ಸರೋವರದಲ್ಲಿ ಸ್ನಾನ ಮಾಡಲು ಯಾತ್ರಿಕರು ಶುರು ಮಾಡಿದರು. ಮೇಲೆ ಮಳೆ ಸುರಿಯುತ್ತಲೇ ಇತ್ತು. ೦೨ ಡಿಗ್ರಿ ಉಷ್ಣಾಂಶ. ಆದರೂ ಸ್ನಾನ ಮಾಡುವುದನ್ನು ಯಾರೂ ಬಿಡಲಿಲ್ಲ.

## ಮಣಿ ಮಹೀಶ ಸರೋವರ

ಮಣಿ ಮಹೀಶ ಕೈಲಾಸ ಶಿಖರ ಸಮುದ್ರ ಮಟ್ಟದಿಂದ ೧೮,೫೬೪ ಅಡಿ ಎತ್ತರದಲ್ಲಿದೆ. ಪರ್ವತದಿಂದ ಮಂಜು ಕರಗಿ ಮತ್ತು ಮಳೆ ನೀರಿನಿಂದ ನಿರ್ಮಿತವಾದ ಅಂಡಾಕೃತಿಯ ಸರೋವರ. ೬೦೦ x ೩೦೦ ಅಡಿ ವಿಸ್ತೀರ್ಣ. ನೀರು ನೀಲಿ ಬಣ್ಣದಿಂದ ಸ್ವಚ್ಛವಾಗಿ ಕಾಣುತ್ತದೆ. ಸರೋವರದ ಸುತ್ತಲೂ ಕಾಲುದಾರಿಯಿದೆ. ಸರೋವರದ ಒಂದು ಭಾಗದಲ್ಲಿ ಟೆಂಟುಗಳು, ಧಾಬಾಗಳು (ಹೊಟೇಲು) ಇರುತ್ತವೆ. ಇನ್ನೊಂದು ಕಡೆಯಲ್ಲಿ ಚಂಬಾದಿಂದ ತಂದಿದ್ದ ಶಿವ ಮತ್ತು ಕಾಳಿಯ ಮುಖವಾಡಗಳನ್ನು ಇಡುತ್ತಾರೆ.

ಸರೋವರದಲ್ಲಿ ಒಂದು ಕಡೆ ಹೆಂಗಸರಿಗಾಗಿ ಸ್ನಾನ ಮಾಡಲು ಮರೆ ಮಾಡಿರುತ್ತಾರೆ. ಯಾತ್ರಿಕರಲ್ಲಿ ಹೆಂಗಸರು, ಮಕ್ಕಳು, ಗಂಡಸರು ಎಲ್ಲ ವಯಸ್ಸಿನವರೂ ಬಂದಿದ್ದರು. ಹೆಚ್ಚು ಜನ ಹಿಮಾಚಲಪ್ರದೇಶದವರು. ಪಂಜಾಬ ಹಾಗೂ ಬಂಗಾಲದ ಯಾತ್ರಿಕರು ಇದ್ದರು. ದಕ್ಷಿಣದವರಲ್ಲಿ ಒಬ್ಬ ಸಾಧುವನ್ನು ಬಿಟ್ಟರೆ ಬಹುಶಃ ನಾನೊಬ್ಬನೆ ಇರಬೇಕೆಂದು ಕಾಣುತ್ತದೆ.

ಯಾತ್ರಿಕರು ಸ್ನಾನ ಮಾಡಿ ಸರೋವರ ಪರಿಕ್ರಮಿಸಿ ದೇವರ ದರ್ಶನ ಮಾಡಿದ ಮೇಲೆಯೇ ಹಿಂದಿರುಗಲು ತಯಾರಾಗುತ್ತಾರೆ. ನಾನೂ ಸ್ನಾನ ಮಾಡಿದೆ. ಅದೂ ಒಂದು ಅನುಭವವೇ. ಕೊರೆಯುವ ನೀರಿನಲ್ಲಿ ಇಳಿದು ಸ್ನಾನ ಮಾಡುವುದು ಅಸಾಧ್ಯವಾದ್ದರಿಂದ ಮೇಲ್ಗಡೆಯೇ ನೀರು ತೆಗೆದುಕೊಂಡು ಸ್ನಾನ ಮಾಡಿದೆ. ಹೆಚ್ಚು ಹೊತ್ತು ನೀರಿನಲ್ಲಿದ್ದರೆ ಕೈಕಾಲುಗಳಿಗೆ ಕೊರೆತ ಬರುತ್ತದೆ. ಆದರೂ ಸ್ನಾನ ಮಾಡಿ, ಪರಿಕ್ರಮ ಮುಗಿಸಿ ದೇವರ ದರ್ಶನ ಮಾಡಿದ್ದು ಮನಸ್ಸಿಗೆ ಸಂತೋಷ, ತೃಪ್ತಿ ತಂದಿತ್ತು. ಅತ್ತ ಬಯಲಿನಲ್ಲಿ ಯಾತ್ರಿಕರ ಶಿವನಾಮ ಸ್ಮರಣೆ ನಡೆದಿತ್ತು. ಆ ದಿನ ನಾನು ಅಲ್ಲಿಯೇ ಇರಲು ನಿಶ್ಚಯಿಸಿದ್ದೆ. ಶರ್ಮಾ ಅವರ ಉಚಿತ ಚಹಾ ಅಲ್ಲದೆ, ಇನ್ನೊಬ್ಬರು ಪೂರಿ, ಪಲ್ಯವನ್ನು ಉಚಿತವಾಗಿ ಎಲ್ಲರಿಗೂ ಕೊಡುತ್ತಿದ್ದರು.

ಬೆಳಿಗ್ಗೆ ಎಂಟು ಗಂಟೆಗೇ ಯಾತ್ರಿಕರು ಹಿಂದಿರುಗಿದ್ದರಿಂದ ಸುಮಾರು ೨೦೦ ಜನ ಮಾತ್ರ

ಉಳಿದಿದ್ದರು. ಸಂಜೆ ಹೊತ್ತಿಗೆ ನನ್ನನ್ನೂ ಸೇರಿ ಉಳಿದವರು ಹತ್ತು ಜನ ಮಾತ್ರ. ಅದರಲ್ಲಿ ನಾಲ್ಕು ಜನ ಸಾಧುಗಳು.

ಹಿಂದಿನ ರಾತ್ರಿ ಅತೀವ ಚಳಿಯಿಂದಾಗಿ ಹನ್ನೊಂದು ಜನ ಸತ್ತರೆಂದೂ ಬೆಟ್ಟದಿಂದ ಕಲ್ಲು ಉರುಳಿ ಒಬ್ಬ ಪೊಲೀಸ್ ಆಫೀಸರ್ ಮೃತಪಟ್ಟ ನೆಂದೂ ಆಮೇಲೆ ತಿಳಿಯಿತು.

ಗುಡ್ಡಗಾಡಿನ ಒಂದು ಜನಾಂಗದ ಗುಂಪಿ ಯಲ್ಲಿ ಅಷ್ಟಮಿಯ ದಿನ ಕ್ರೂರ ಪದ್ಧತಿಯನ್ನು ನಡೆಸುವ ಅಭ್ಯಾಸವಿದೆ ಎಂದು ಕೇಳಿದೆ. ಹರಕೆ ಹೊತ್ತವರು ಕುರಿಗಳನ್ನು ತೆಗೆದುಕೊಂಡು ಬಂದು, ಬಲಿಕೊಟ್ಟು ಅವರ ರಕ್ತವನ್ನು ಕುಡಿಯುವ ಪದ್ಧತಿಗೆ ಸರಕಾರ ಕಡಿವಾಣ ಹಾಕಲು ಪ್ರಯತ್ನಿಸುತ್ತಿದೆ ಯೆಂದು ಅಲ್ಲಿನವರು ಹೇಳಿದರು. ಆದರೆ ನಾನೇನೂ ಈ ದೃಶ್ಯವನ್ನು ನೋಡಲಿಲ್ಲ.

೩ನೇ ತಾರೀಖು ಬೆಳಿಗ್ಗೆ ಹಡಸರ್‌ಗೆ ಹಿಂದಿ ರುಗಲು ಪ್ರಾರಂಭ. ಶರ್ಮಾ ಅವರು ವ್ಯವಸ್ಥೆ ಮಾಡಿ ನಿಧಾನವಾಗಿ ಬರುತ್ತೇನೆಂದು ಹೇಳಿದ್ದ ರಿಂದ ನಾನು ಅವರಿಗಿಂತ ಮುಂಚಿತವಾಗಿ ಹೊರಟೆ. ದಾರಿಯಲ್ಲಿ ನಾನೊಬ್ಬನೇ ನಡೆಯುತ್ತಿದ್ದೆ. ಹಾದಿಯಲ್ಲಿ ಯಾರೂ ಇರಲಿಲ್ಲ. ೧೪ಕ್ಕೂ ಹೆಚ್ಚು ಕಿಲೋಮೀಟರು ದೂರ ನಡೆದು ಹಡಸರ್‌ಗೆ ಬರಬೇಕಿತ್ತು. ಹತ್ತುವುದು ಕಷ್ಟ ನಿಜ. ಆದರೆ, ಇಳಿಯುವುದೇನೂ ಅಂದುಕೊಂಡಷ್ಟು ಸುಲಭ ವಾಗಿರಲಿಲ್ಲ. ಹಡಸರ್ ತಲುಪಿದಾಗ ಮಧ್ಯಾಹ್ನ ಎರಡು ಗಂಟೆ. ಹೋಗುವಾಗ ಇಳಿದುಕೊಂಡಿದ್ದ ವರ ಮನೆಯಲ್ಲೇ ಆ ದಿನ ಉಳಿದೆ. ಮಂಡಿ ನೋವು, ಕಾಲುನೋವು ಅಸಾಧ್ಯವಾಗಿತ್ತು. ಶರ್ಮಾ ಅವರೂ ಬಂದರು. ಅವರ ಜೊತೆಯಲ್ಲಿ ೪ನೇ ತಾರೀಖು ಹೊರಟು ಭರಮೂರ್ ತಲಪಿದೆ. ರಾಸರಂಬಾಕ್ಕೆ ಬಸ್ಸು ಸಿಗದಿದ್ದರಿಂದ ಅಲ್ಲಿಯೇ ಉಳಿಯಬೇಕಾಯಿತು. ವಸತಿಗೃಹದಲ್ಲಿ ಉಳಿ ಯಲು ವ್ಯವಸ್ಥೆ ಆಯಿತು. ನಾವೆಲ್ಲ ೫ನೇ ತಾರೀಖು ಬಸ್ಸಿನಲ್ಲಿ ಚಂಬಾಗೆ ಬಂದೆವು.

ಅಲ್ಲಿನ ಜನರ ಭಾಷೆ ಪಹಾರಿ (ಪಹಾಡಿ= ಗುಡ್ಡಗಾಡು ಜನರಾಡುವಂಥದು.) ಪಂಜಾಬಿ ಭಾಷೆಯನ್ನೂ ಆಡುತ್ತಾರೆ. ಹಿಂದಿಯ ಬಳಕೆ ಅಷ್ಟಾಗಿ ಇಲ್ಲ. ಗುಡ್ಡಗಾಡಿನ ಈ ಜನರು ಕಷ್ಟಜೀ ವಿಗಳು. ವ್ಯವಸಾಯ, ಕುರಿ ಕಾಯುವುದು ಇವರ ವೃತ್ತಿ. ಆರ್ಥಿಕವಾಗಿ ಅಂತಹ ಉತ್ತಮ ಸ್ಥಿತಿ ಇಲ್ಲ. ನೋಡಲು ಸುಂದರರು. ಗಂಡಸರು ಪ್ಯಾಂಟ್, ಶರ್ಟು, ಪಾಯಿಜಾಮ, ಕುರ್ತಾ ಧರಿಸಿದರೆ, ಹೆಂಗಸರು ಸೀರೆ, ಚೂಡಿದಾರಗಳನ್ನು ಧರಿಸು ತ್ತಾರೆ. ಯಾತ್ರಿಕರೊಂದಿಗೆ ಇವರು ಸೌಹಾರ್ದಯು ತವಾಗಿ ನಡೆದುಕೊಳ್ಳುತ್ತಾರೆ. ದಾರಿಯುದ್ದಕ್ಕೂ ಎಲ್ಲರೂ ನನ್ನನ್ನು ಕೇಳುತ್ತಿದ್ದ ಮೂರು ಪ್ರಶ್ನೆಗಳೆಂ ದರೆ- "ಬೆಂಗಳೂರಿನಿಂದ ಬಂದಿದ್ದೀರಾ? ಒಬ್ಬ ರೇ ಬಂದಿದ್ದೀರಾ? ಮತ್ತು ಈ ಯಾತ್ರೆ ಬಗ್ಗೆ ಹೇಗೆ ಗೊತ್ತಾಯಿತು?" ಎಂದು.

೭ನೇ ತಾರೀಖು ಪಠಾಣಕೋಟಕ್ಕೆ ಬಂದೆ. ಅಲ್ಲಿಂದ ದಿಲ್ಲಿಗೆ ಬಂದು ಕೆಲದಿನ ಇದ್ದು ೧೨ನೆ ತಾರೀಖಿಗೆ ಬೆಂಗಳೂರು ಸೇರಿದೆ. ●

## ಸರ್ವಾಧಿಕಾರಿಯ ಸಂದೇಶ

೧೯೩೪ರಲ್ಲಿ ಇಟಲಿ ಮತ್ತು ಆಸ್ಟ್ರಿಯಾ ತಂಡಗಳ ನಡುವೆ ರೋಮ್‌ನಲ್ಲಿ ಫುಟ್‌ಬಾಲ್ ಪಂದ್ಯ ನಡೆದಿತ್ತು. ಇಟಲಿಯ ಸರ್ವಾಧಿಕಾರಿ ಬಿನೆಟೊ ಮುಸೋ ಲಿನಿ ಖುದ್ದು ಹಾಜರಿದ್ದು ಅದನ್ನು ವೀಕ್ಷಿಸುತ್ತಿದ್ದ. ಒಂದು ಹಂತದಲ್ಲಿ ಆಸ್ಟ್ರಿಯಾ ತಂಡ ಮೇಲುಗೈ ಸಾಧಿಸಿದಾಗ ಅದನ್ನು ತಡೆದುಕೊಳ್ಳಲಾಗದ ಮುಸೋಲಿನಿ ಇಟಲಿ ತಂಡದ ಕಪ್ತಾನನಿಗೆ, "ಪಂದ್ಯದಲ್ಲಿ ಇಟಲಿ ಸೋತರೆ ಟೀಮಿನ ಎಲ್ಲರನ್ನೂ ಕಡ್ಡಾಯವಾಗಿ ಮಿಲಿಟರಿ ಸೇವೆಗೆ ಕಳಿಸಲಾಗುವದು," ಎಂಬ ಸಂದೇಶ ಕಳಿಸಿದ. ತಕ್ಷಣ ಇಟಲಿ ತಂಡದ ಆಟದಲ್ಲಿ ವಿಸ್ಮಯಕಾರಿ ಬದಲಾವಣೆಯಾಯಿತು. ಆ ತಂಡದ ಕ್ರೀಡಾಳುಗಳು ಮಿಂಚಿನಂತೆ ಜಯವನ್ನು ಸಾಧಿಸಿಯೇಬಿಟ್ಟರು!

● ಕೆ. ವೆಂಕಣ್ಣಾಚಾರ್

೯



# ಎಕ್ಸ್-ರೇ ಕಣ್ಣಿನ ಮನುಷ್ಯ!

• ಗೋವಾ

ವಜ್ರಗಳ್ಳರು, ಚಿನ್ನಗಳ್ಳರುಗಳ ಪತ್ತೆ ಮುಗಿದ ಮೇಲೆ ಪೀಟರ್ ತನ್ನ ಪತ್ನಿ ಮಾರಿಯಾಳೊಂದಿಗೆ ಮ್ಯಾಡ್ರಿಡ್‌ಗೆ ಪ್ರಯಾಣಿಸಬೇಕಾಯಿತು. ಒಂದು ವಿಚಿತ್ರವೆನ್ನಬಹುದಾದ, ನೂರೈವತ್ತು ವರ್ಷಗಳಷ್ಟು ಹಳೆಯ ಉಯಿಲೊಂದರ ಸಮಸ್ಯೆಯ ಇತ್ಯರ್ಥಕ್ಕಾಗಿ ಪೀಟರ್ ಆಹ್ವಾನಿಸಲ್ಪಟ್ಟಿದ್ದ. ಸ್ಪೇನ್ ತನ್ನ ಕಪಿಮುಷ್ಠಿಯಲ್ಲಿ ನೆದರ್‌ಲ್ಯಾಂಡ್ಸ್ ಹಾಗೂ ಬೆಲ್ಜಿಯಂಗಳನ್ನು ಹಿಡಿದಿಟ್ಟುಕೊಂಡಿದ್ದ ಕಾಲದ ಕೇಸು. ಆ ಉಯಿಲನ್ನು ಲಪಟಾಯಿಸಿ ಕೆಲ ದುಷ್ಕರ್ಮಿಗಳು ಹಲವು ಕೋಟಿ ಬೆಲೆಯ ಚರಾಸ್ತಿ-ಸ್ಥಿರಾಸ್ತಿಗಳನ್ನು ತಮ್ಮದಾಗಿಸಿಕೊಂಡಿದ್ದ ಕರ್ಮಕಾಂಡ. ಮೂರು ತಲೆಮಾರುಗಳ ಹಿಂದೆಯೇ ನಡೆದು ಹೋದ ಈ ದುಷ್ಕೃತ್ಯದಿಂದಾಗಿ ತಮ್ಮ ಕುಟುಂಬ ದಾರಿದ್ರ್ಯದ ಅಂಚಿಗೆ ಬಂದು ತಲಪಿದೆಯೆಂದೂ, ಈಗ ಆ ಆಸ್ತಿಯನ್ನು ಮರಳಿ ತಮಗೆ ದೊರಕಿಸಿ ಕೊಡಬೇಕೆಂದೂ ಮಾಡಿಕೊಂಡಿದ್ದ ವಿನಂತಿಯ ಮೇರೆಗೆ ಮ್ಯಾಡ್ರಿಡ್‌ನ ನ್ಯಾಯಾಧೀಶ ಈ ಪ್ರಕರಣದಲ್ಲಿ ಪೀಟರ್‌ನ ನೆರವು ಕೋರಿದ್ದ.

ಬೆಲ್ಜಿಯಂ ಕನ್ನಡಿಯಷ್ಟೇ ಸ್ಪಷ್ಟವಾಗಿ ಅನ್ಯಾಯ ಗೋಚರಿಸುತ್ತಿತ್ತಾದರೂ ಅದರಲ್ಲೊಂದು ಗಂಟು ಕೂಡ ಕಾಣುತ್ತಿತ್ತು. ಕನ್ನಡಿಯೊಳಗಿನ ಗಂಟು! ಅದರ ಸುತ್ತ ಹಲವಾರು ಮುಖಗಳು. ಎಲ್ಲ ಗೋಜಲು ಗೋಜಲು. ಕೇವಲ ವಿವರಗಳನ್ನು ನೀಡಬಹುದಿತ್ತೇ ಹೊರತು ಆ ಗಂಟನ್ನು 'ಬಿಚ್ಚುವುದು' ಅಸಾಧ್ಯದ ಮಾತೆಂಬುದನ್ನು ಪೀಟರ್ ಆ ನ್ಯಾಯಾಧೀಶನಿಗೆ ಮನದಟ್ಟು ಮಾಡಿಕೊಟ್ಟ.

ಮ್ಯಾಡ್ರಿಡ್‌ನಿಂದ ರೈಲಿನಲ್ಲಿ ಮರಳುವಾಗ ಇದ್ದಕ್ಕಿದ್ದಂತೆಯೇ ಪೀಟರ್ ದಂಗಾದ. ಎದುರಿಗೆ ತನ್ನೆಡೆ ಮುಖ ಮಾಡಿ ಕುಳಿತಾತ ಅಡಾಲ್ಫ್ ಹಿಟ್ಲರ್! ಜಗತ್ತನ್ನೇ ಆಳಹೊರಟ ಅತಿ ಮಹತ್ವಾಂಕಾಂಕ್ಷಿ ಹಿಟ್ಲರ್! ಹಾಲೆಂಡಿನ ಜನರನ್ನೆಲ್ಲ ಜೀವ

"ಹಿಟ್ಲರ್ ಇನ್ನೂ ಬದುಕಿದ್ದಾನೆ!"

ಚ್ಛವಗಳನ್ನಾಗಿ ಮಾಡಿದ್ದ ಹಿಟ್ಲರ್. ಈಗ, ೧೯೫೫ರಲ್ಲಿನ್ನೂ ಬದುಕಿದ್ದಾನಲ್ಲ! ಸಂನ್ಯಾಸಿಯ ವೇಷ ತೊಟ್ಟಿದ್ದಾನಲ್ಲ! ಹ್ಯಾಗೆ ಸಾಧ್ಯ? ಆತ ಸತ್ತಿದ್ದಾನೆಂದು ಜಗತ್ತೆಲ್ಲ ನಂಬಿ, ಹಿಟ್ಲರ್‌ನ ಕೊನೆಯ ಗಳಿಗೆಗಳ ಕುರಿತು ಪುಸ್ತಕಗಳು ಪ್ರಕಟ ವಾಗಿ ಹೋದ ಮೇಲೆಯೂ ಹಿಟ್ಲರ್ ಸತ್ತಿಲ್ಲ ವೆಂದು ತನಗ್ಯಾಕೆ ಅನ್ನಿಸತೊಡಗಿತೊ?

ಮುಂದಿನ ಸ್ಟೇಶನ್ ಬರುವುದರೊಳಗಾಗಿ ಆ ಸಂನ್ಯಾಸಿ ಕಣ್ಮರೆಯಾಗಿಬಿಟ್ಟಿದ್ದ. ಎಲ್ಲಿ ಹೋದ ಹಿಟ್ಲರ್? ತಲೆ ತುರಿಸಿಕೊಂಡರೂ ಪೀಟರ್‌ಗೆ ತಿಳಿಯಲಿಲ್ಲ.

ಸ್ಪಾನಿಶ್ ಪತ್ರಿಕೆಯೊಂದರ ಪ್ರತಿನಿಧಿಯೊಂ ದಿಗೆ ಮಾತಾಡುತ್ತಿದ್ದಾಗ, "ಹಿಟ್ಲರ್ ಬದುಕಿದ್ದಾನೆ. ಆತನನ್ನು ಟ್ರೇನಿನಲ್ಲಿ ಕಂಡೆ. ಸದ್ಯ ಆತ ತಲೆಮ ರೆಸಿಕೊಂಡು ತಿರುಗಾಡುತ್ತಿದ್ದಾನೆ. ಆತನನ್ನು ಪತ್ತೆ ಹಚ್ಚಲು ಪ್ರಾಣವನ್ನೇ ಪಣವಾಗಿಡಲೂ ಸಿದ್ಧ" ಎಂದೆಲ್ಲ ಭಾವಾವೇಶದಲ್ಲಿ ಹೇಳಿಬಿಟ್ಟ ಪೀಟರ್.

ಮರುದಿನ ರಾತ್ರಿ.

ಇಬ್ಬರು ಧಾಂಡಿಗರು ಪೀಟರ್ ಉಳಿದು ಕೊಂಡಿದ್ದ ಹೊಟೇಲಿಗೆ ಬಂದರು. ಈತನ ಕೋಣೆಯನ್ನು ಪ್ರವೇಶಿಸಿ ಬಾಗಿಲು ಮುಚ್ಚಿ ನಿಂತರು. ಒಂದು ಕಾಲಕ್ಕೆ ಹಿಟ್ಲರ್‌ಗೆ ತೀರ ಹತ್ತಿರದವರಾಗಿದ್ದ ರಾಬರ್ಟ್ ಸ್ಪರ್ನರ್ ಹಾಗೂ ಲಿಯಾನ್ ಡಿಗ್ರೇಲಿ. ಮೊದಲಿನವ ಉಗ್ರ ನಾಜಿ. ಹಿಟ್ಲರ್‌ನ ಪತನಾನಂತರ ಓಡಿ ಬಂದು ಸ್ಪೇನಿನಲ್ಲಿ ತಲೆಮರೆಸಿಕೊಂಡಿದ್ದಂಥವ. ಇನ್ನೊಬ್ಬ, ಮಾಜಿ ಬೆಲ್ಜಿಯನ್ ಫ್ಯಾಸಿಸ್ಟ್. ಯುದ್ಧಾನಂತರ ತನ್ನ ಮೇಲಿನ ವಿಚಾರಣೆಯಿಂದ ತಪ್ಪಿಸಿಕೊಳ್ಳಲೆಂದು ಸ್ಪೇನಿಗೆ ಬಂದು ಛದ್ಮವೇಷ ಧರಿಸಿದ್ದವ.

"ಪೇಪರಿನವರ ಮುಂದೆ ಬಾಯಿಗೆ ಬಂದ ಹಾಗೆ ಒದರುವುದನ್ನು ಬಿಟ್ಟುಬಿಡು ಪೀಟರ್,"- ಅಬ್ಬರಿಸಿದ ಡಿಗ್ರೇಲಿ.

"ಇಲ್ದೇ ಹೋದ್ರೆ ಈ ಬುಲೆಟ್ ನಿನ್ನ ಹಣೆಯ ಆಳವನ್ನು ಅಳೆದುನೋಡುತ್ತದೆ," ಪಿಸ್ತೂಲನ್ನು ತೋರಿಸಿದ ಸ್ಪರ್ನರ್.

ಅಂದಿನಿಂದ ಪೀಟರ್ ಸ್ಪೇನ್ ದೇಶದಲ್ಲಿರುವ ತನಕವೂ ಸ್ಪರ್ನರ್ ಆತನ ನೆರಳಾಗಿಯೇ ಹೆಜ್ಜೆ ಹಾಕಿದ. ಹಗಲಿರಲಿ, ರಾತ್ರಿಯಿರಲಿ ತನ್ನ ಹಿಂದೆ ಆತ ಇದ್ದಾನೆಂಬುದು ಪೀಟರ್‌ಗೆ ತಿಳಿಯದೇ ಹೋಗಲಿಲ್ಲ. ಸ್ಪರ್ನರ್ ಈ ರೀತಿ ಹೆಜ್ಜೆ ಅನುಸ ರಿಸುವುದು ಪೀಟರ್‌ಗೆ ಹಿಟ್ಲರ್ ಬದುಕಿರುವುದು ದಿಟವೆಂಬುದನ್ನು ಸ್ಪಷ್ಟಗೊಳಿಸುತ್ತಿತ್ತು.



## "ತೇಲಿಹೋದ ಹುಡುಗ... ಸರ್ಕಸ್ ಸೇರಿದ್ದಾನೆ...."

ಪ್ಯಾರಿಸ್ಸಿಗೆ ಮರಳಿದ ಮೇಲೆ ದಿ ಹೇಗ್ ನಗರದ ಭಾರತೀಯ ರಾಯಭಾರ ಕಚೇರಿಯಿಂದ ಒಂದು ಪತ್ರ ಬಂತು. "ನಾಪತ್ತೆಯಾಗಿರುವ ಬಾಲಕನೊಬ್ಬನನ್ನು 'ಹುಡುಕಿ'ಕೊಡುವಿರಾ ಪೀಟರ್?"

ಈ ಮುಂಚೆ ಇಂಥ ಅನೇಕ ಪ್ರಕರಣಗಳಲ್ಲಿ ಯಶಸ್ವಿಯಾಗಿದ್ದರೂ ಪೀಟರ್‌ಗೆ ಇದೊಂದು ತೀರ ಭಿನ್ನವಾದ ಘಟನೆ ಎನ್ನಿಸಿತು. ಯಾಕೆಂದರೆ ಆ ಬಾಲಕ ಭಾರತದ ಪ್ರಮುಖ ನಗರವಾದ ಮುಂಬ ಯಿಯ ಬಳಿಯ ಊರೊಂದರಿಂದ ಕಣ್ಮರೆಯಾ ಗಿದ್ದ. ಪೀಟರ್ ಇದ್ದುದು ಪ್ಯಾರಿಸ್ಸಿನಲ್ಲಿ. ಹಲವು ಸಾವಿರ ಮೈಲುಗಳಷ್ಟು ದೂರದ್ದು ಈ ಕೇಸು. ಪೀಟರ್‌ನ ಸರಿಯಾದ ವಿಳಾಸ ಗೊತ್ತಿಲ್ಲದ್ದರಿಂದ ಕಳೆದುಹೋದ ಆ ಹದಿನಾಲ್ಕು ವರ್ಷದ ಬಾಲಕನ ಕುಟುಂಬದವರು ದಿ ಹೇಗ್ ನಗರದ ಭಾರತೀಯ ರಾಯಭಾರಿ ಕಚೇರಿಗೂ, ಹುರ್‌ಕೋಸನ ತಾಯಿಯ ವಿಳಾಸಕ್ಕೂ ಎರಡು ಪ್ರತ್ಯೇಕ ಪತ್ರಗ ಳನ್ನು ಬರೆದು ವಿನಂತಿಸಿಕೊಂಡಿದ್ದರು. ಆದರೆ ಪೀಟರ್‌ನ ತಾಯಿಯ ವಿಳಾಸಕ್ಕೆ ಬರೆದ ಪತ್ರ ದೊಂದಿಗೆ ಆ ಹುಡುಗನ ಒಂದು ತಲೆಗೂದ ಲನ್ನು ಅಂಟಿಸಿದ್ದುದು ನೆರವಿಗೆ ಬಂತು. ತನ್ನ ತಾಯಿ ಕಳಿಸಿದ್ದ ಆ ಕೂದಲು ಸಹಿತದ ಪತ್ರದಿಂ ದಾಗಿ ಪೀಟರ್‌ಗೆ ಈ ಪ್ರಕರಣದಲ್ಲಿ ತಾನು

ಯಶಸ್ವಿಯಾಗುವೆನೆಂಬ ಆತ್ಮವಿಶ್ವಾಸ ಉಂಟಾಯಿತು.

ಕೂಡಲೇ ಪ್ಯಾರಿಸ್ಸಿನಿಂದ ೨೪೫ ಮೈಲು ದೂರದ ದಿ ಹೇಗ್ ಪಟ್ಟಣಕ್ಕೆ ಧಾವಿಸಿದ ಪೀಟರ್. ಮರುದಿನ ಸೋಮವಾರ ಮುಂಜಾನೆ ಹತ್ತು ಗಂಟೆಯ ಹೊತ್ತಿಗೆ ಭಾರತೀಯ ರಾಯಭಾರಿ ಕಚೇರಿ ಕಾರ್ಯ ಆರಂಭಿಸುವ ವೇಳೆಗೆ ಅಲ್ಲಿ ಹಾಜರಾದ. ಹುಡುಗ ನದಿಯಲ್ಲಿ ಈಜಿ ಬರುತ್ತೇನೆಂದು ಹೋದವ ಮನೆಗೆ ಮರಳಿರಲೇ ಇಲ್ಲ. ಎಷ್ಟು ಹೊತ್ತಾದರೂ ಮನೆಗೆ ಬಾರದ ಮಗನನ್ನು ಹುಡುಕಿಕೊಂಡು ನದಿಯ ದಡಕ್ಕೆ ಹೋದ ತಂದೆಗೆ ಅಲ್ಲಿ ಕಂಡದ್ದು ಕೇವಲ ಆತನ ಅಂಗಿ ಮತ್ತು ಚಪ್ಪಲಿಗಳು. ಅವುಗಳೊಂದಿಗೆ ಹಿಂತಿರುಗಿ ಬಂದ ಅಪ್ಪ ಅಲ್ಲಿಲ್ಲಿ ಹುಡುಕಿಸಿ ನೋಡಿದ್ದ. ಅದು ಪ್ರಯೋಜನಕ್ಕೆ ಬಾರದ್ದರಿಂದ ಜ್ಯೋತಿಷಿಗಳಲ್ಲೂ ಪ್ರಶ್ನಿಸಿದ್ದ. ಭವಿಷ್ಯವಾಣಿಯೂ ಭರವಸೆದಾಯಕವೆನಿಸದ್ದರಿಂದ ತುಂಬ ಚಿಂತಿತನಾಗಿದ್ದ ತಂದೆ ಹಾಗೇ ಆ ಅಂಗಿ-ಚಪ್ಪಲಿಗಳನ್ನೇ ನೋಡುತ್ತ ಕೊರಗತೊಡಗಿದ್ದ.

ಕೊರಗುವಿಕೆಯಲ್ಲೇ ಕಾಲ ಕಳೆಯಿತು.

ಹುಡುಗ ಮನೆಬಿಟ್ಟು ಹೋಗಿ ನಾಲ್ಕು ತಿಂಗಳಾಗಿತ್ತು.

ಆದರೆ ಕುಟುಂಬದ ಒಬ್ಬ ಸೂಕ್ಷ್ಮಮತಿಗೆ ಹುಡುಗನ ಅಂಗಿಯ ಗುಂಡಿಗೆ ಕೂದಲೆಳೆಯೊಂದು ಅಂಟಿಕೊಂಡದ್ದು ಗೋಚರಿಸಿತ್ತು. ಆ ವೇಳೆಗಾಗಲೇ ಸ್ಪರ್ಶ ಮಾತ್ರದಿಂದಲೇ ಎಂಥ ಸಮಸ್ಯೆಯನ್ನಾದರೂ ಬಿಡಿಸಬಲ್ಲ ಪೀಟರ್ ಹುರ್ಕೋಸ್‌ನ ಕುರಿತು ಭಾರತೀಯ ವೃತ್ತ ಪತ್ರಿಕೆಗಳಲ್ಲೂ ಲೇಖನಗಳು ಪ್ರಕಟವಾಗಿದ್ದವು. ಆ ಸೂಕ್ಷ್ಮಮತಿ ದಿ ಹೇಗ್ ನಗರದ ಭಾರತೀಯ ರಾಯಭಾರ ಕಚೇರಿಗೂ, ಅಂದಾಜಿನ ಮೇಲೆ ಪೀಟರ್ ಹುರ್ಕೋಸನ ಮನೆಯ ವಿಳಾಸಕ್ಕೂ ಪತ್ರಗಳನ್ನು ಬರೆದಿದ್ದ.

ರಾಯಭಾರ ಕಚೇರಿಯಲ್ಲಿ ಆ ಹುಡುಗನ ಸಂಬಂಧಿ ಬರೆದಿದ್ದ ಪತ್ರವನ್ನೊಮ್ಮೆ ಕೂಲಂಕಷವಾಗಿ ಓದಿ ನೋಡಿದ ಪೀಟರ್. ಮಗನ ನಾಪತ್ತೆಯಿಂದಾಗಿ ಹೊಟ್ಟೆಬೇನೆ ಹಚ್ಚಿಕೊಂಡಿದ್ದ ತಂದೆ-ತಾಯಿ, ಬಂಧು-ಬಳಗದವರ ಮುಖಗಳು ಆತನ ಕಣ್ಣೆದುರು ತೇಲಿಬಂದವು. ಹಾಗೆಯೇ ತನ್ನ ತಾಯಿಗೆ ಬಂದ ಪತ್ರದ ಜತೆಗಿದ್ದ ಕೂದಲೆಳೆಯನ್ನೊಮ್ಮೆ ನೇವರಿಸಿದ ಪೀಟರ್‌ಗೆ ಹುಡುಗನ ಮುಖವೂ ಕಂಡಿತು. ಆರೋಗ್ಯದಿಂದಲೇ ಇರುವ ಹುಡುಗನ ಮುಖ. ಸಂಬಂಧಿಕರ ಪತ್ರದಲ್ಲಿ ಹುಡುಗ ನದಿಯಲ್ಲಿ ಮುಳುಗಿ ಸತ್ತು ಪ್ರವಾಹದ ಗುಂಟ ತೇಲಿಹೋಗಿರಬಹುದೆ ಎಂಬ ಸಂಶಯವನ್ನೂ ವ್ಯಕ್ತಪಡಿಸಲಾಗಿತ್ತು. ಪೀಟರ್ ಗಮನವನ್ನು ಕೇಂದ್ರೀಕರಿಸಿದ.

ಹುಡುಗ ನೀರಿಗೆ ಇಳಿದ ಕೂಡಲೇ ಕಾಲು ಜಾರಿ ಪ್ರವಾಹದ ಸೆಳವಿಗೆ ಸಿಕ್ಕಿ ತೇಲಿಹೋದದ್ದು ನಿಜವೇ ಆಗಿತ್ತು. ಆದರೆ ಎಚ್ಚರದಪ್ಪಿದ್ದ ಆತ ಮುಂದೊಮ್ಮೆ ದಡದಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿ ಬಿದ್ದುಕೊಂಡದ್ದು ಕೆಲವರಿಗೆ ಕಂಡಿತ್ತು. ಪ್ರಥಮೋಪಚಾರ ನಡೆಸಿ ಅವರು ಹುಡುಗನನ್ನು ಎಚ್ಚರಿಸಿ ತಮ್ಮೊಂದಿಗೆ ಕರೆದೊಯ್ದಿದ್ದರು.

ಸುತ್ತಲೆಲ್ಲ ಬೋನುಗಳು, ಅವುಗಳೊಳಗೆ ಹುಲಿ-ಸಿಂಹಗಳು... ಡೇರೆಯ ಒಂದು ಬದಿಗೆ ಕಟ್ಟಲ್ಪಟ್ಟ ಆನೆ-ಒಂಟೆ-ಕುದುರೆಗಳು.... ಅಂದರೆ ಹುಡುಗ ಸರ್ಕಸ್ ಕಂಪನಿಯೊಂದರಲ್ಲಿ ಕೆಲಸಕ್ಕಿದ್ದಾನೆ ಎಂದಂತಾಯಿತು....

ಪೀಟರ್ ರಾಯಭಾರ ಕಚೇರಿಯವರಿಗೆ ತಾನು ಕಂಡದ್ದನ್ನು ಹೇಳಿದ. "ಸಮೀಪದಲ್ಲೆಲ್ಲಾದರೂ ಸರ್ಕಸ್ ಕ್ಯಾಂಪು ಇದೆಯೇ, ಇದ್ದರೆ ಅಲ್ಲಿ ಹೋಗಿ ಹುಡುಕಲು ಹುಡುಗನ ಸಂಬಂಧಿಕರಿಗೆ ತಿಳಿಸಿ" ಎಂದ.

ಮನೆಗೆ ಬಂದು ಮತ್ತೆ ಆ ಕೂದಲೊಂದಿಗೆ ಸಂಪರ್ಕವೇರ್ಪಡಿಸಿಕೊಂಡ ಪೀಟರ್‌ಗೆ, ಹುಡುಗ ತನ್ನ ಮನೆಗೆ ಅನೇಕ ಪತ್ರಗಳನ್ನು ಬರೆದದ್ದೂ ಆದರೆ ಅವುಗಳನ್ನು ಅಂಚೆಗೆ ಹಾಕಲು ದುಡ್ಡಿಲ್ಲದ ಕಾರಣ ತನ್ನ ಪ್ಯಾಂಟಿನ ಜೇಬಿನಲ್ಲಿಯೇ ಮಡಿಸಿಟ್ಟುಕೊಂಡದ್ದೂ ಕಂಡಿತು.

ಮೂರು ದಿನಗಳ ನಂತರ ಭಾರತೀಯ ರಾಯಭಾರ ಕಚೇರಿಯವರಿಂದ ಕರೆಬಂತು.

ಅಲ್ಲಿಗೆ ಹೋದ ಪೀಟರನಿಗೆ ಹುಡುಗ ಸರ್ಕಸ್ ಕಂಪನಿಯಲ್ಲಿದ್ದದ್ದು ನಿಜವೆಂದೂ, ಆದರೆ ಆತನ ಮನೆಯ ಜನ ಹುಡುಕಿಕೊಂಡು ಹೋದ ಹೊತ್ತಿನಲ್ಲಿ ಹುಡುಗ ಅಲ್ಲಿಂದ ಓಡಿ ಹೋಗಿದ್ದನೆಂದೂ ಕಚೇರಿಯವರು ಹೇಳಿದರು.

ಮತ್ತೆ ಆ ಕೂದಲಿನೊಂದಿಗೆ ಮಾತನಾಡಿದ ಪೀಟರ್.

"ಹುಡುಗ ಸೌಖ್ಯವಾಗಿದ್ದಾನೆ. ತಾನು ಮನೆಗೆ ಹೋದರೆ ಎಲ್ಲಿ ಅಪ್ಪ-ಅಮ್ಮ ಹೊಡೆಯುತ್ತಾರೋ ಎಂಬ ಭಯವಿದೆ ಆತನಿಗೆ. ಹಾಂ.... ಈಗ ಆತ ದೊಡ್ಡದೊಂದು ರೇಲ್ವೆ ಸ್ಟೇಶನ್ನಿನಲ್ಲಿ ಬರಹೋಗುವ ಗಾಡಿಗಳನ್ನು, ಅವುಗಳಲ್ಲಿ ಹತ್ತುವ ಮತ್ತು ಅವುಗಳಿಂದ ಇಳಿಯುವ ಜನರನ್ನು ನೋಡುತ್ತ ಕೂತಿದ್ದಾನೆ... ಹೌದು... ಅದು ಮುಂಬಯಿಯ ಮುಖ್ಯ ರೈಲು ನಿಲ್ದಾಣ..." ಎಂದ.

ರಾಯಭಾರ ಕಚೇರಿಯವರು ಈ ಸುದ್ದಿಯನ್ನು ಭಾರತಕ್ಕೆ ಮುಟ್ಟಿಸಿದರು.

ನಾಲ್ಕು ದಿನಗಳ ನಂತರ "ಹುಡುಗ ಸುರಕ್ಷಿತವಾಗಿ ಮುಂಬಯಿಯ ವಿ.ಟಿ. ಸ್ಟೇಶನ್ನಿನಲ್ಲಿ ಸಿಕ್ಕನಂತೆ. ಅಪ್ಪ ಆತನನ್ನು ಮನೆಗೆ ಕರೆದೊಯ್ದಿದ್ದಾರಂತೆ" ಎಂದು ರಾಯಭಾರ ಕಚೇರಿಯವರು ಪೀಟರ್‌ಗೆ ಸುದ್ದಿ ಮುಟ್ಟಿಸಿದರು.

ನಂತರ ಹುಡುಗನ ಮನೆಯವರಿಂದ ಕೃತಜ್ಞತಾಪೂರ್ವಕ ಪತ್ರವೂ ಬಂತು. "ಕಳೆದು ಹೋದ ನಮ್ಮ ಮನೆಯ ಬೆಳಕು ಮತ್ತೆ ಮರಳುವಂತೆ ಮಾಡಿದಿರಿ. ಧನ್ಯವಾದಗಳು." ●

(ಮುಂದಿನ ಸಂಚಿಕೆ ನೋಡಿ)

# ಮೂತ್ರಪಿಂಡದ ಕಲ್ಲಿಗೆ ಬಾಳೆಸಿಪ್ಪೆ

**ಬಾ**ಳೆಹಣ್ಣಿನ ಸಿಪ್ಪೆಯನ್ನು ತುಂಡರಿಸಿ ಒಗ್ಗರಣೆ ಹಾಕಿ ಮೊಸರಿನಲ್ಲಿ ಸೇರಿಸಿ ತುಸು ಉಪ್ಪುಕಾರ ಸೇರಿಸಿ ತಿನ್ನುವ ರೂಢಿ ಕೊಂಕಣ ಭಾಗದಲ್ಲಿದೆ. ಇದರಿಂದ ಇನ್ನೊಂದು ಪ್ರಯೋಜನವೂ ಇದೆ– ಇದನ್ನು ಆಗಾಗ ಸೇವಿಸುವವರ ಮೂತ್ರಕೋಶಗಳದಲ್ಲಿ ಹರಳು ಉಂಟಾಗುವ ಸಂಭವ ತೀರಾ ಕಡಿಮೆ.

ಭಾಭಾ ಅಣುವಿಜ್ಞಾನ ಸಂಶೋಧನಾ ಕೇಂದ್ರದ ಪರಾವರ್ತನಾ ಜೀವಶಾಸ್ತ್ರ ಹಾಗೂ ಜೀವರಸಾಯನಶಾಸ್ತ್ರ ವಿಭಾಗಗಳ ವಿಜ್ಞಾನಿಗಳು ಇತ್ತೀಚೆಗೆ ಬಾಳೆಹಣ್ಣಿನ ಸಿಪ್ಪೆ ಹಾಗೂ ಹಕ್ಕರಿಕೆಯ ಸೊಪ್ಪಿನಲ್ಲಿ ಎರಡು ವಿಧದ ಕಿಣ್ವಗಳನ್ನು ಕಂಡುಹಿಡಿದಿದ್ದಾರೆ. ಇವೆರಡೂ ಮೂತ್ರಪಿಂಡಗಳಲ್ಲಿ ಹರಳು ಉಂಟಾಗುವುದನ್ನು ತಡೆಗಟ್ಟುವಂತೆ.

ಶರೀರದ ಬೆಳವಣಿಗೆಗೆ ವಿವಿಧ ಖನಿಜಗಳು ಅಲ್ಪ ಪ್ರಮಾಣದಲ್ಲಿ ಅವಶ್ಯ. ಆದರೆ ಅಧಿಕ ಪ್ರಮಾಣದಲ್ಲಿ ಶರೀರದಲ್ಲಿ ಸೇರಿದರೆ ಅವು ಮೂತ್ರದ ಮುಖಾಂತರ ಹೊರತಳ್ಳಲ್ಪಡುತ್ತವೆ. ಶರೀರದಲ್ಲಿ ಕ್ಯಾಲ್ಸಿಯಂ ಆಕ್ಸಲೇಟ್ ಎಂಬ ಖನಿಜದ ಕಣಗಳ ಪ್ರಮಾಣ ಅಧಿಕವಾದಂತೆಲ್ಲ ಅದು ಇನ್ನುಳಿದ ಕೊಳೆಯೊಡನೆ ಹೊರಹೋಗದೆ ಮೂತ್ರಪಿಂಡದಲ್ಲಿ ಸಂಗ್ರಹಗೊಳ್ಳತೊಡಗುತ್ತದೆ. ಹೀಗೆ ಸಂಗ್ರಹಗೊಂಡ ಕಣಗಳೇ ಹರಳುಗಳಾಗಿ ಪರಿಣಮಿಸುತ್ತವೆ. ಇದೇ ಆಡುಮಾತಿನಲ್ಲಿ ಮೂತ್ರಪಿಂಡದ ಕಲ್ಲು. ಹರಳು ಮೂತ್ರಪಿಂಡದಲ್ಲಿಯೇ ಇದ್ದಾಗ ಯಾವುದೇ ತೊಂದರೆಯಾಗುವುದಿಲ್ಲ. ಆದರೆ ಅದು ಒಡೆದು ಚೂರಾದ ಬಳಿಕ ಒಂದೊಂದೇ ಚೂರು ಮೂತ್ರನಾಳಗಳಲ್ಲಿ ಪ್ರವೇಶಿಸಿ ಮೂತ್ರದ ಮೂಲಕ ಹೊರಹೋಗುತ್ತದೆ. ಈ ಸಮಯದಲ್ಲಿ ಮಾತ್ರ ವಿಪರೀತ ನೋವು.

ಬಾಳೆಹಣ್ಣಿನ ಸಿಪ್ಪೆಯಲ್ಲಿ ಆಕ್ಸಲೇಟ್ ಆಕ್ಸಿಡೇಸ್ ಎಂಬ ಕಿಣ್ವವಿದ್ದು ಅದು ಆಕ್ಸಲೇಟ್ ಕಣಗಳನ್ನು ವಿಘಟನಗೊಳಿಸಿ ಇಂಗಾಲಾಮ್ಲ ಹಾಗೂ ಹೈಡ್ರೋಜನ್ ಪೆರೊಕ್ಸೈಡ್ ವಾಯುಗಳಾಗಿ ಬೇರ್ಪಡಿಸಿ ಹಾರಿಸಿಬಿಡುತ್ತದೆ. ಇದರಂತೆಯೇ ಹಕ್ಕರಿಕೆ ಸಸ್ಯದ ಎಲೆಗಳಲ್ಲಿ ಗ್ಲಯೋಕ್ಸಲೇಟ್ ರಿಡಕ್ಟೇಸ್ ಎಂಬ ಕಿಣ್ವ ಉತ್ಪತ್ತಿಯಾಗುತ್ತಿದ್ದು, ಇದು ಶರೀರದಲ್ಲಿ ಆಕ್ಸಲೇಟ್ ಕಣಗಳು ತಯಾರಾಗದಂತೆ ನೋಡಿಕೊಳ್ಳುತ್ತದೆ.

● ಪ್ರೊ. ಎನ್.ಆರ್. ಆಡೂರ

ಜ್ಞಾನನಿಧಿ

ವಿದ್ಯಾರ್ಥಿ ಅಂಕಣ



# ಕಂಪ್ಯೂಟರನ್ನು ಕಂಡುಹಿಡಿದವರಾರು?

**ಈ**ಗ ಸರ್ವವ್ಯಾಪಿಯಾಗಿರುವ ಕಂಪ್ಯೂಟರ್ ಇಪ್ಪತ್ತನೇ ಶತಮಾನದ ಅದ್ಭುತ ಸಂಶೋಧನೆಗಳಲ್ಲಿ ಒಂದು. ಈ ಯಂತ್ರದ ಸಹಾಯದಿಂದ ಕೆಲಸಗಳು ಮಿಂಚಿನಂತೆ ವೇಗವಾಗಿಯೂ ಕರಾರುವಾಕ್ಕಾಗಿಯೂ ನಡೆಯುತ್ತವೆ. ನಮ್ಮ ಈ ಅವಸರ ಯುಗಕ್ಕೆ ಇದು ಹೇಳಿ ಮಾಡಿಸಿದಂತಿದೆ. ಇದನ್ನು ಕಂಡುಹಿಡಿದವನು ಡಾ. ಜಾನ್ ವಿನ್ಸೆಂಟ್ ಅಟನ್‌ಸೋವ್ ಎಂಬ ಬಲ್ಗೇರಿಯಾದ ವಿಜ್ಞಾನಿ. ಅವನು ಅದನ್ನು ೧೯೩೯-೪೨ರ ಅವಧಿಯಲ್ಲಿ ಕಂಡುಹಿಡಿದ. ಆದರೆ ಮೌಚ್ಲೆ ಮತ್ತು ಎಕರ್ಟ್ ಎಂಬ ವಿಜ್ಞಾನಿಗಳು ತಾವು ಕಂಡುಹಿಡಿದದ್ದೆಂದು ಹೇಳಲಾದ ಕಂಪ್ಯೂಟರನ್ನು ೧೯೬೪ರಲ್ಲಿ ಪೇಟೆಂಟ್ ಮಾಡಿಸಿದಾಗ ಗಣಕಯಂತ್ರವನ್ನು ಯಾರು ಮೊದಲು ಕಂಡುಹಿಡಿದದ್ದು ಎಂಬ ವಿಷಯವಾಗಿ ವಿವಾದ ಉಂಟಾಯಿತು. ಬೇಕಾದಷ್ಟು ಚರ್ಚೆ ಕೂಡ ನಡೆಯಿತು.

ಡಾ. ಅಟನ್‌ಸೋವ್ ಅಮೆರಿಕದ ಪೌರತ್ವವನ್ನು ಪಡೆದು ಅಲ್ಲಿಯೆ ವಾಸಿಸುತ್ತಿದ್ದ. ಕೊನೆಮೊದಲಿಲ್ಲದ ಈ ಚರ್ಚೆಯಿಂದ ಅವನು ಬಹಳ ಹತಾಶನಾಗಿ ಕೊನೆಗೆ ಅಮೆರಿಕದ ಫೆಡರಲ್ ಕೋರ್ಟಿನಲ್ಲಿ ಖಟ್ಲೆ ಹಾಕಿದ. ಅವನು ತನ್ನ ವಾದವನ್ನು ಸಮರ್ಥಿಸಲು ಸಾವಿರ ಪುಟಗಳಿಗೂ ಮೀರಿದ ಟೈಪ್ ಮಾಡಿದ ಹಾಳೆಗಳನ್ನು ಕೋರ್ಟಿಗೆ ಸಲ್ಲಿಸಿದ. ಎರಡೂ ಕಡೆಯವರ ವಾದವನ್ನು ಆಲಿಸಿದ ನ್ಯಾಯಮೂರ್ತಿಗಳು, ಕೊನೆಯಲ್ಲಿ ಡಾ. ಅಟನ್‌ಸೋವ್ ಅವರ ತಂತ್ರಜ್ಞಾನವನ್ನು ಉಪಯೋಗಿಸಿಕೊಂಡು ಮೌಚ್ಲೆ ಮತ್ತು ಎಕರ್ಟ್ ಕಂಪ್ಯೂಟರನ್ನು ತಯಾರಿಸಿದರೆಂದೂ ಆದಕಾರಣ ಕಂಪ್ಯೂಟರನ್ನು ಕಂಡುಹಿಡಿದ ನಿಜವಾದ ಕೀರ್ತಿ ಡಾ. ಅಟನ್‌ಸೋವ್ ಅವರಿಗೇ ಸಲ್ಲಬೇಕೆಂದೂ ತೀರ್ಪು ಕೊಟ್ಟರು. ಅಲ್ಲಿಗೆ ಈ ವಿವಾದಕ್ಕೆ ಅಂತಿಮ ತೆರೆ ಎಳೆಯಲಾಯಿತು.

● ಡಿ. ಗುಂಡೂರಾವ್

## ಜ್ಞಾನನಿಧಿ

# ಪೃಥ್ವಿಯು ಚಲಿಸುವ ವೇಗವೆಷ್ಟು?



ನೀವು ಈ ಲೇಖನದ ಶೀರ್ಷಿಕೆ ಓದುವಷ್ಟರಲ್ಲಿ ಪೃಥ್ವಿಯ ಜೊತೆಗೇ ಸುಮಾರು ೫೫ ಮೈಲುಗಳನ್ನು ಕ್ರಮಿಸಿದ್ದೀರೆನ್ನುವುದು ಗೊತ್ತೆ? ವಾಸ್ತವವಾಗಿ ನಾವೆಲ್ಲರೂ ಪೃಥ್ವಿಯ ಜೊತೆಗೆ ಅಗಾಧವಾದ ವೇಗದಿಂದ ಸೂರ್ಯನಿಗೆ ಪ್ರದಕ್ಷಿಣೆ ಹಾಕುತ್ತಿದ್ದೇವೆ. ಪೃಥ್ವಿಯನ್ನು ನಾವು ಸೂರ್ಯನ ಸುತ್ತಲೂ ಪರಿಭ್ರಮಿಸುತ್ತಿರುವ ಒಂದು ಎಂಜಿನ್ ಎಂದು ಭಾವಿಸಿದರೆ ಈ ಇಂಜಿನ್ನು ದಿನವೊಂದಕ್ಕೆ ಹದಿನೈದುಲಕ್ಷ ಮೈಲುಗಳನ್ನು ಕ್ರಮಿಸುವುದು. ನಾವು ದಿನಾಲು ಆರು ಗಂಟೆಗಳಷ್ಟು ಕಾಲ ನಿದ್ರಿಸುತ್ತಿದ್ದರೆ ನಾವು ನಿದ್ರೆಬಿಟ್ಟೇಳುವ ವೇಳೆಗೆ ಪೃಥ್ವಿಯು ಮೂರು ಲಕ್ಷ ಎಪ್ಪತ್ತೈದು ಸಾವಿರ ಮೈಲುಗಳಷ್ಟು ಅಂತರವನ್ನು ಕ್ರಮಿಸಿರುತ್ತದೆ. ಒಂದು ವರ್ಷದ ಅವಧಿಯಲ್ಲಿ ಪೃಥ್ವಿ ಕ್ರಮಿಸುವ ಒಟ್ಟು ಅಂತರ ೫೩೮,೪೦೦,೦೦೦ ಮೈಲುಗಳಷ್ಟು.

ಬರಿ ಸೂರ್ಯನ ಸುತ್ತ ತಿರುಗುವುದಾಗಲಿ ತನ್ನ ಅಕ್ಷದ ಸುತ್ತ ತಿರುಗುವುದಾಗಲಿ ಪೃಥ್ವಿಯ ಕೆಲಸವಲ್ಲ. ಅದಕ್ಕೆ ಇತರ ಚಲನೆಗಳೂ ಇವೆ. ಆದರೆ ಈ ಚಲನೆಗಳೆಲ್ಲ ಸೂರ್ಯನ ಚಲನೆಗೆ ಅಧೀನ.

ಸೂರ್ಯ ತನ್ನ ಮಂಡಲದ ಗ್ರಹಗಳ ಸಮೇತ ಸೆಕೆಂಡಿಗೆ ಹನ್ನೆರಡು ಮೈಲುಗಳಂತೆ ಹರ್ಕ್ಯುಲಸ್ ತಾರಾಮಂಡಳದತ್ತ ಧಾವಿಸುತ್ತಿದ್ದಾನೆ.

ಗ್ರಹಗಳು ಬೇರೆ ಬೇರೆ ವೇಗದಿಂದ ಸೂರ್ಯನ ಸುತ್ತ ಸುತ್ತುತ್ತಿವೆಯೆನ್ನುವುದು ಸಾಮಾನ್ಯವಾಗಿ ನಿಮಗೆಲ್ಲ ಗೊತ್ತೇ ಇದೆ. ಆದರೆ ಇಡಿ ಸೌರಮಂಡಲವೇ ಒಂದು ಆಕಾಶಗಂಗೆಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಅದರ ಸುತ್ತ ಸೆಕೆಂಡಿಗೆ ೧೭೫ ಮೈಲುಗಳ ವೇಗದಿಂದ ಸುತ್ತುತ್ತ ಇದೆಯೆನ್ನುವುದು ನಿಮಗೆ ಗೊತ್ತಿದೆಯೆ? ಈ ಆಕಾಶಗಂಗೆಯನ್ನು ಒಂದು ಸಲ ಸುತ್ತು ಹಾಕಲು ಸೌರಮಂಡಳಕ್ಕೆ ಇಪ್ಪತ್ತು ಕೋಟಿ ವರ್ಷಗಳು ಬೇಕು! ಈ ಆಕಾಶಗಂ

## ಜ್ಞಾನನಿಧಿ

ಗೆಯೂ ಸ್ಥಿರವಾಗಿಲ್ಲ. ಅದು ನಮ್ಮ ಸೌರಮಂಡಳವಷ್ಟೇ ಅಲ್ಲ, ಇತರ ಸೌರ ಮಂಡಳಗಳು ಹಾಗೂ ಆಕಾಶಕಾಯಗಳ ಸಮೇತ ಅಜ್ಞಾತ ಅನಂತದೆಡೆಗೆ ಅಗಾಧ ವೇಗದಿಂದ ಧಾವಿಸುತ್ತಿದೆ.

ಪೃಥ್ವಿ ತನ್ನ ಅಕ್ಷದ ಸುತ್ತ ತಿರುಗುವುದರಿಂದಲೇ ಹಗಲು-ರಾತ್ರಿಗಳಾಗುತ್ತವೆ ನಿಜ. ಆದರೆ ಈ ವೇಗ ಎಲ್ಲೆಡೆಯೂ ಒಂದೇ ಸಮನಾಗಿಲ್ಲ. ವಿಷವೃತ್ತದ ಹತ್ತಿರ ಅದರ ವೇಗ ಎಲ್ಲಕ್ಕಿಂತ ಹೆಚ್ಚು- ಗಂಟೆಗೆ ಸುಮಾರು ಒಂದುಸಾವಿರ ಮೈಲುಗಳಷ್ಟು.

ಪೃಥ್ವಿಗೆ ಅಯನಚಲನೆ (precession)ಯಂತಹ ಇನ್ನಿತರ ಚಲನೆಗಳೂ ಇವೆ. ವ್ಯಾವಹಾರಿಕವಾಗಿ ಅವು ಅಷ್ಟು ಮುಖ್ಯವಾಗದಿರುವುದರಿಂದ ಅವುಗಳನ್ನಿಲ್ಲಿ ಚರ್ಚಿಸುವುದು ಬೇಡ.

• 'ಕಸ್ತೂರಿಮೃಗ'

## ಅನಿಲ ಮಾಹಿತಿ

೧. ಕಾರ್ಬನ್ನಿನ ಅಪೂರ್ಣ ದಹನದಿಂದ ಯಾವ ಅನಿಲ ಹೊರಬೀಳುತ್ತದೆ?
೨. ಯಾವ ಅನಿಲ ತೀವ್ರ ಪ್ರಕಾಶದಿಂದ ಉರಿಯುವಂಥದೂ, ಧಾತುವನ್ನು ಜೋಡಿಸುವ ಕಾರ್ಯದಲ್ಲಿ ಬಳಸುವಂಥದೂ ಆಗಿದೆ?
೩. ನೀರನ್ನು ಕೀಟಾಣು ನಾಶಕವನ್ನಾಗಿ ಮಾಡಲು ಯಾವ ಅನಿಲವನ್ನು ಉಪಯೋಗಿಸಲಾಗುತ್ತದೆ?
೪. ಸೂರ್ಯನ ಬಹುಭಾಗ ಯಾವ ಅನಿಲದಿಂದ ಒಡಗೂಡಿದೆ?
೫. 'ನಗಿಸುವ ಅನಿಲ' ಯಾವುದು?
೬. ರಾಸಾಯನಿಕ ಯುದ್ಧದಲ್ಲಿ ಬೆಳ್ಳುಳ್ಳಿಯ ವಾಸನೆ ಹೊಮ್ಮಿಸುವಂಥ ಯಾವ ಅನಿಲವನ್ನು ಬಳಸಲಾಗುತ್ತದೆ?
೭. ಯಾವ ಅನಿಲ ಬೆಕ್ಟೀರಿಯಗಳನ್ನು ಸ್ಥಿರವಾಗಿಟ್ಟು ಭೂಮಿಯ ಫಲವತ್ತತೆಯನ್ನು ರಕ್ಷಿಸುತ್ತದೆ?
೮. ಪೊಲೀಸರು ಬಳಸುವ ಅಶ್ರುವಾಯುವಿನಲ್ಲಿ ಕಣ್ಣೀರು ತರಿಸುವ ಅನಿಲ ಯಾವುದು?
೯. ಹಣ್ಣುಗಳನ್ನು ಪಕ್ವಗೊಳಿಸಲು ಉಪಯೋಗಿಯಾದ ಅನಿಲ ಯಾವುದು?
೧೦. ಇಂಧನ ರೂಪದಲ್ಲಿ ಉಪಯೋಗಕ್ಕೆ ಬರುವ ಮುಖ್ಯವಾದ ಮೂರು ಅನಿಲಗಳು ಯಾವುವು?

(ಉತ್ತರಗಳು: ೪೫ನೆ ಪುಟದಲ್ಲಿ)

ಜ್ಞಾನನಿಧಿ

## ಚಿಪ್ಸ್ ಕಂಡುಹಿಡಿದವರು ಯಾರು?

ತರಕಾರಿಗಳನ್ನು ತೆಳುವಾಗಿ ಹೆಚ್ಚಿ ಕರಿದು ಚಿಪ್ಸ್ ತಯಾರಿಸುವುದು ನಮಗೇನೂ ಹೊಸದಲ್ಲ. ನೂರಾರು ವರ್ಷಗಳಷ್ಟು ಹಿಂದೆಯೆ ಬರೆಯಲ್ಪಟ್ಟ ಪಾಕಶಾಸ್ತ್ರದ ಪುಸ್ತಕಗಳಲ್ಲಿ ಉಪ್ಪೇರಿಯನ್ನು ತಯಾರಿಸುವ ವಿಧಾನಗಳನ್ನು ವಿವರಿಸಲಾಗಿದೆ. ಆದರೆ ಪಾಶ್ಚಾತ್ಯರಲ್ಲಿ ಚಿಪ್ಸ್ ತಯಾರಿಸುವುದು ಹೇಗೆ ಜನಪ್ರಿಯವಾಯಿತು ಗೊತ್ತೆ?

೧೮೫೩ರಲ್ಲಿ ನ್ಯೂಯಾರ್ಕಿನ ಸರಟೋಗಾ ಹೊಟೇಲಿಗೆ ಗಿರಾಕಿಯೊಬ್ಬ ಬಂದು ಬಟಾಟೆಯ ಹೋಳುಗಳನ್ನು ಕರಿದು ಫಿಂಗರ್‌ಚಿಪ್ಸ್ ತಯಾರಿಸಿಕೊಡುವಂತೆ ಆರ್ಡರ್ ಕೊಟ್ಟ. ಎಂಥ ಗಿರಾಕಿಯೇ ಬರಲಿ, ಅವನನ್ನು ತೃಪ್ತಿಪಡಿಸಿಯೇ ಕಳಿಸುತ್ತೇನೆಂಬ ಹೆಗ್ಗಳಿಕೆ ಆ ಹೊಟೇಲಿನದು. ಆದರೆ ಎಷ್ಟು ತೆಳುವಾಗಿ ಬಟಾಟೆಯನ್ನು ಹೆಚ್ಚಿ ಕರಿದರೂ ಆ ಗಿರಾಕಿಗೆ ತೃಪ್ತಿಯಿಲ್ಲ. ಕೊನೆಗೆ ಬೇಸತ್ತ ಬಾಣಸಿಗ ಕಾಗದದಷ್ಟು ತೆಳ್ಳಗೆ ಬಟಾಟೆಯನ್ನು ಕತ್ತರಿಸಿ ಕರಿದಾಗ ಗಿರಾಕಿಗೆ ಖುಷಿಯೋ ಖುಷಿ. ಫಿಂಗರ್ ಚಿಪ್ಸ್‌ಗಿಂತ ತೆಳುವಾಗಿ ಹೆಚ್ಚಿ ಕರಿದ ಬಟಾಟೆಯ ಚಿಪ್ಸ್ ಜನಪ್ರಿಯವಾಗಲು ಹೆಚ್ಚು ಸಮಯ ತಗಲಲಿಲ್ಲ. ಇಂದು ಒಂದೇ ಗಂಟೆಯಲ್ಲಿ ಸಾವಿರಾರು ಕಿಲೋಗಳಷ್ಟು ಬಟಾಟೆಯನ್ನು ಹೆಚ್ಚಿ ಚಿಪ್ಸ್ ತಯಾರಿಸುವ ಯಂತ್ರಗಳನ್ನೇ ನಿರ್ಮಿಸಲಾಗಿದೆ. ಈಗ ಚಿಪ್ಸ್ ತಯಾರಿಸುವುದು ಕೋಟ್ಯಂತರ ರೂಪಾಯಿಗಳ ಒಂದು ದೊಡ್ಡ ವ್ಯವಹಾರ.

## ಪುಸ್ತಕ ಪ್ರಪಂಚ

ಪುಸ್ತಕಗಳ ಪ್ರಪಂಚವೇ ವಿಚಿತ್ರ. ಜನಪ್ರಿಯ ಪುಸ್ತಕಗಳನ್ನು ಹೇಗೆ ಬರೆಯಬೇಕೆಂಬ ಬಗೆಗೆ ಒಬ್ಬ ಭೂಪತಿ ಬರೆದ ಪುಸ್ತಕವನ್ನು ಅಮೆರಿಕದ ಪ್ರಕಾಶನ ಸಂಸ್ಥೆಯೊಂದು ಪ್ರಕಟಿಸಿತು. ಅದರ ತಲೆಬರಹವೇ ೪೨ ಶಬ್ದಗಳಷ್ಟು ಉದ್ದವಾಗಿತ್ತು. ಅಂದಮೇಲೆ ಆ ಪುಸ್ತಕ ಎಷ್ಟು ಜನಪ್ರಿಯವಾಯಿತೆಂದು ಹೇಳುವುದೇ ಬೇಡ.

ಇದು ದೊಡ್ಡ ತಲೆಬರಹದ ಪುಸ್ತಕದ ಮಾತಾಯಿತು. ಅತಿ ಚಿಕ್ಕ ತಲೆಬರಹದ ಪುಸ್ತಕ ಯಾವುದು ಗೊತ್ತೆ?- ಅದು ಬಿ. ಒಂದಕ್ಷರಕ್ಕಿಂತ ಕಡಿಮೆ ತಲೆಬರಹವನ್ನು ಯಾವುದಾದರೂ ಪುಸ್ತಕಕ್ಕೆ ಕೊಡಲು ಸಾಧ್ಯವೆ? ತಲೆಬರಹ ಚಿಕ್ಕದಾಗಿದ್ದರೂ ಪುಸ್ತಕವೇನೂ ಚಿಕ್ಕದಾಗಿರಲಿಲ್ಲ. ಅದು ಮೂರು ಸಂಪುಟಗಳಷ್ಟು ದೀರ್ಘವಾಗಿತ್ತು.

ಒಬ್ಬ ಯುರೋಪಿಯನ್ ಅಡ್ಮಿರಲ್ ಬಹಳ ವರ್ಷ ಚೀನದಲ್ಲಿ ಕೆಲಸ ಮಾಡಿ ನಿವೃತ್ತನಾದ. ಅವನು ಯುರೋಪಿಗೆ ಮರಳಿ ಹೋಗಿ ಶೇಷಾಯುಷ್ಯವನ್ನು ಅಲ್ಲಿಯೇ ಕಳೆಯಬೇಕೆಂದು ನಿರ್ಧರಿಸಿದಾಗ ಚೀನೀ ಮಿತ್ರರೆಲ್ಲ ಸೇರಿ ಔತಣವನ್ನು ಕೊಟ್ಟರು. ಅಡ್ಮಿರಲ್ ತುಂಬಾ ಚೂಟಿ. ಚೀನದ ಬಗೆಗೆ ತಾನೊಂದು ಪುಸ್ತಕವನ್ನು ಬರೆದದ್ದಾಗಿಯೂ ಔತಣದ ದಿನವೇ ಅದನ್ನು ಪ್ರಕಟಿಸುವುದಾಗಿಯೂ ಸುದ್ದಿಯನ್ನು ತೇಲಿಬಿಟ್ಟಿದ್ದ. ಆ

## ಜ್ಞಾನನಿಧಿ

ಪುಸ್ತಕದಲ್ಲಿ ಏನಿದೆಯೆನ್ನುವುದನ್ನು ತಿಳಿಯುವ ಕೌತುಕ ಚೀನೀ ಮಿತ್ರರಿಗೆ. ಔತಣದ ದಿನ ಬಂತು. ಔತಣಕ್ಕೆ ಅಡ್ಮಿರಲ್ ಬಂದ. "ಪುಸ್ತಕ ತಂದಿದ್ದೀಯಾ?" ಅಂದರು ಚೀನೀ ಮಿತ್ರರು. "ಯಾಕಿಲ್ಲ? ಇಗೋ ನೋಡಿ, ಎಂದು 'ಚೀನದ ಬಗೆಗೆ ನಾನು ತಿಳಿದುಕೊಂಡಿದ್ದೇನು?' ಎಂಬ ಶಿರೋನಾಮೆಯ ಪುಸ್ತಕವನ್ನು ತೋರಿಸಿ, ಮೊದಲಿನ ಹಾಗೆ ಅಚ್ಚುಕಟ್ಟಾಗಿ ಪ್ಯಾಕ್ ಮಾಡಿದ. "ಪುಸ್ತಕ ಕೊಡು" ಎಂದರು ಮಿತ್ರರು. "ಹೋಗುವಾಗ ಕೊಡುತ್ತೇನೆ. ಹೋದ ನಂತರ ನೀವೆಲ್ಲ ಓದಿಕೊಳ್ಳಿ" ಅಂದ ಅಡ್ಮಿರಲ್. ಭೋಜನದ ನಂತರ ಅಡ್ಮಿರಲ್ ಪ್ಯಾಕ್ ಮಾಡಿದ ಪುಸ್ತಕವನ್ನು ಕೊಟ್ಟು ಹೊರಟುಹೋದ. ಈತ ಇಷ್ಟು ವರ್ಷ ಇಲ್ಲಿದ್ದು ಚೀನದ ಬಗೆಗೆ ಏನು ತಿಳಿದುಕೊಂಡಿದ್ದಾನೆ? ಎನ್ನುವುದನ್ನು ಅರಿಯಲು ಆ ಚೀನೀ ಮಿತ್ರರು ಆತುರಾತುರವಾಗಿ ಪ್ಯಾಕ್ ಬಿಚ್ಚಿ ಪುಸ್ತಕವನ್ನು ತೆರೆದರು. ಎಲ್ಲ ಹಾಳೆಗಳೂ ಖಾಲಿ!

● ಎಂ.ಆರ್.ಎಸ್.

**ಅನಿಲ ಮಾಹಿತಿ ಉತ್ತರಗಳು**

೧. ಕಾರ್ಬನ್ ಮೊನಾಕ್ಸಾಯ್ಡ್
೨. ಎಸಿಟಿಲಿನ್
೩. ಕ್ಲೋರಿನ್
೪. ಹೀಲಿಯಂ
೫. ನೈಟ್ರಸ್ ಆಕ್ಸಾಯ್ಡ್
೬. ಮಸ್ಟರ್ಡ್ ಗ್ಯಾಸ್
೭. ನೈಟ್ರೋಜನ್
೮. ಅಮೋನಿಯಾ
೯. ಇಥೀಲಿನ್
೧೦. ನೈಸರ್ಗಿಕ ಅನಿಲ,
ಕೋಲ್ ಗ್ಯಾಸ್,
ಜಲ ಅನಿಲ (Water gas)

**ಗೂ**ಬೆಗೆ ನಮ್ಮ ಹಾಗೆ ಕಣ್ಣುಗಳನ್ನು ಹೊರಳಿಸಲು ಆಗುವುದಿಲ್ಲ. ಬದಲು ಕುತ್ತಿಗೆಯನ್ನದು ಸುತ್ತಲೂ ತಿರುಗಿಸಬಲ್ಲದು.



## ಚಂದ್ರನಿಂದ ನಮಗೆ ಶಾಶ್ವತವಾಗಿ ಬೆಳದಿಂಗಳು ದೊರಕುವುದೆ?

ಇದಕ್ಕೆ ನೊಬೆಲ್ ಪಾರಿತೋಷಕ ವಿಜೇತರಾದ ಖ್ಯಾತ ಬ್ರಿಟಿಶ್ ವಿಜ್ಞಾನಿ ಫ್ರೆಡ್ ಹಾಯ್ಲ್ ಅವರು ಹೇಳುವ ಉತ್ತರ "ಇಲ್ಲ."

ಚಂದ್ರ ಈಗ ಪೃಥ್ವಿಯಿಂದ ಸುಮಾರು ಎರಡೂಕಾಲು ಲಕ್ಷ ಮೈಲು ದೂರದಲ್ಲಿದ್ದಾನೆ. ಆದರೆ ಈ ದೂರ ಸ್ಥಿರವಾಗಿಲ್ಲ. ಪ್ರತಿವರ್ಷ ಚಂದ್ರನಿಗೂ ಪೃಥ್ವಿಗೂ ಇರುವ ಅಂತರ ಏಳು ಅಡಿಗಳಷ್ಟು ಹೆಚ್ಚಾಗುತ್ತಿದೆ. ಪೃಥ್ವಿಗೂ ಚಂದ್ರನಿಗೂ ಇರುವ ಅಂತರ ಸುಮಾರು ಹತ್ತು ಲಕ್ಷ ಮೈಲುಗಳಷ್ಟಾದಾಗ ಸೂರ್ಯನ ಗುರುತ್ವಾಕರ್ಷಣೆಯಿಂದಾಗಿ ಚಂದ್ರ ಸೆಳೆಯಲ್ಪಟ್ಟು ಪೃಥ್ವಿ ಹಾಗೂ ಶುಕ್ರನ ನಡುವೆ ಸ್ವತಂತ್ರ ಗ್ರಹದಂತೆ ವರ್ತಿಸತೊಡಗುತ್ತಾನೆ. ಹೀಗಾದಾಗ ಪೃಥ್ವಿಯ ಮೇಲೆ ಬೆಳದಿಂಗಳೂ ಇಲ್ಲ; ಸೂರ್ಯ ಗ್ರಹಣಗಳೂ ಇಲ್ಲ; ಸಮುದ್ರದಲ್ಲಿ ದೊಡ್ಡ ದೊಡ್ಡ ತೆರೆಗಳೂ ಇಲ್ಲ.

# ಜ್ಞಾನನಿಧಿ

## ನಿಮಗೆ ಗೊತ್ತೆ?

**ಭಾ**ರತದಲ್ಲಿ ಮೊಟ್ಟಮೊದಲು ರೈಲು ಮುಂಬಯಿಯಲ್ಲಿ ಚಲಿಸಿತು. ಅದು ೧೬ ಎಪ್ರಿಲ್ ೧೮೫೩ರಂದು ಮುಂಬಯಿ ನಗರದ ಬೋರಿ ಬಂದರ್‌ವನ್ನು ಮಧ್ಯಾಹ್ನ ೩ ಗಂಟೆಗೆ ಬಿಟ್ಟು ೩೪ ಕಿಲೋ ಮೀಟರ್ ದೂರದಲ್ಲಿರುವ ಠಾಣೆಯನ್ನು ತಲುಪಿತು. ಬೋರಿಬಂದರ್‌ನಲ್ಲಿ ಆಗ ರೈಲು ನಿಲ್ದಾಣವಿರಲಿಲ್ಲ. ನಿಲ್ದಾಣದ ಹೆಸರಿನಲ್ಲಿ ಒಂದು ಕಟ್ಟಿಗೆಯ ಚೌಕಾಕಾರದ ಕೊಠಡಿ ಇತ್ತು. ನಂತರ ಅದೇ ಸ್ಥಾನದಲ್ಲಿ ಮಹಾರಾಣಿ ವಿಕ್ಟೋರಿಯಾಳ ಹೆಸರಿನಲ್ಲಿ ಪ್ರಪಂಚದ ಅತಿ ಭವ್ಯ ರೈಲು ನಿಲ್ದಾಣಗಳಲ್ಲೊಂದಾದ (ವಿ.ಟಿ.) ವಿಕ್ಟೋರಿಯಾ ಟರ್ಮಿನಸ್‌ನ್ನು ಹತ್ತು ವರ್ಷಗಳಲ್ಲಿ (೧೮೭೮ ರಿಂದ ೧೮೮೮ರ ವರೆಗೆ) ೧೬,೩೫,೫೬೨ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಯಿತು. ಇದು ಗೋಥಿಕ್ ಶಿಲ್ಪಕಲೆಯ ಒಂದು ಸುಂದರ ಮಾದರಿ.

**ಬಿ**ಹಾರದ ರಾಜಧಾನಿ ಪಾಟ್ನಾದಿಂದ ೯೦ ಕಿಲೋ ಮೀಟರ್ ದೂರದಲ್ಲಿ ಪ್ರಾಚೀನ ಕಾಲದ ಸುಪ್ರಸಿದ್ಧ ಶಿಕ್ಷಣ ಕೇಂದ್ರ ನಾಲಂದಾ ವಿಶ್ವವಿದ್ಯಾಲಯದ ಅವಶೇಷಗಳನ್ನು ಈಗಲೂ ನೋಡಬಹುದಾಗಿದೆ. ಕ್ರಿ.ಶ. ಐದನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ ನಾಲಂದಾ ವಿಶ್ವವಿದ್ಯಾಲಯ ಪ್ರಪಂಚದಲ್ಲಿ ಪ್ರಖ್ಯಾತವಾಗಿತ್ತು. ಐದನೆಯ ಶತಮಾನದಲ್ಲಿ ಫಾಹಿಯಾನ ಮತ್ತು ಏಳನೆಯ ಶತಮಾನದಲ್ಲಿ ಹ್ಯೂಯೆಂತ್ಸಾಂಗ ಎಂಬಿಬ್ಬರು ಚೀನಾ ದೇಶ ಯಾತ್ರಿಕರು ಅಧ್ಯಯನಕ್ಕಾಗಿ ಇಲ್ಲಿಗೆ ಬಂದಿದ್ದರು. ಶಕಾದಿತ್ಯ ಸ್ಥಾಪಿಸಿದ್ದ ಈ ವಿಶ್ವವಿದ್ಯಾಲಯದಲ್ಲಿ ಆಗ ಹತ್ತುಸಾವಿರ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಅವರಿಗೆ ೧೫೦೦ ಜನ ಶಿಕ್ಷಕರು. ಶಿಕ್ಷಣ ನೀಡುತ್ತಿದ್ದರು. ಇದಕ್ಕಾಗಿ ಎರಡು ಬೃಹತ್ ಸಭಾಗೃಹಗಳೂ ಮತ್ತು ಉಪನ್ಯಾಸ ನೀಡಲು ೩೦೦ ಕೋಣೆಗಳೂ ಇದ್ದವು. ಇಲ್ಲಿ ಶಿಕ್ಷಣ ಪಡೆದವರಲ್ಲಿ ನಾಗಾರ್ಜುನ, ಶೀಲಭದ್ರ, ಜಯದೇವ, ಶಾಂತರಕ್ಷಿತ, ವಸುವಂಧು, ದಿಗ್ನಾಮ, ಧರ್ಮಕೀರ್ತಿ, ಸ್ಥಿರಮತಿ, ಪದ್ಮಸಂಭವ ಮತ್ತು ಬುದ್ಧಿ ಕೀರ್ತಿ ಪ್ರಮುಖರು. ಹನ್ನೆರಡನೆಯ ಶತಮಾನದಲ್ಲಿ ಬಖ್ತಿಯಾರ್ ಖಿಲಜಿ ಈ ವಿದ್ಯಾಕೇಂದ್ರವನ್ನು ಧ್ವಂಸಗೊಳಿಸಿದ. ಈಗಲೂ ನಾಲಂದಾ ಭಾರತದ ಪ್ರೇಕ್ಷಣೀಯ ಸ್ಥಾನಗಳಲ್ಲೊಂದಾಗಿದೆ. ಮತ್ತು ಬೌದ್ಧ ಭಿಕ್ಷುಗಳ ಪ್ರಮುಖ ಧಾರ್ಮಿಕಕೇಂದ್ರವೂ ಆಗಿದೆ.

**ಮೊ**ಟ್ಟ ಮೊದಲ ಸಲ ಭಾರತದ ಆಕಾಶವಾಣಿಯಲ್ಲಿ ಸುದ್ದಿ ಬುಲೆಟಿನ್

**ಸ**ಮುದ್ರದ ನೀರು ಉಪ್ಪಾಗಿರುತ್ತದೆನ್ನುವುದು ನಿಜವಾದರೂ ಎಲ್ಲ ಸಮುದ್ರಗಳ ನೀರೂ ಅಷ್ಟೇ ಉಪ್ಪಾಗಿರುವುದಿಲ್ಲ. ಬಾಲ್ಟಿಕ್ ಸಮುದ್ರದ ನೀರು ಉಳಿದೆಲ್ಲ ಸಮುದ್ರಗಳ ನೀರಿಗಿಂತ ಕಡಿಮೆ ಉಪ್ಪು.

## ಜ್ಞಾನನಿಧಿ

ಮುಂಬಯಿ ಕೇಂದ್ರದಿಂದ ಪ್ರಸಾರವಾಯಿತು. ೨೩ ಜುಲೈ ೧೯೨೭ರಂದು ಪ್ರಸಾರವಾದ ಈ ಸುದ್ದಿ ಬುಲೆಟಿನ್ ರಾಯ್ಟರ್ ನ್ಯೂಸ್ ಏಜೆನ್ಸಿಯವರಿಂದ ದೊರೆತ ಸುದ್ದಿಗಳನ್ನಾಧರಿಸಿತ್ತು.

ಖುರ(ಗೊರಸು) ಇರುವ ಪ್ರಾಣಿವರ್ಗದ ಕತ್ತೆ ಮೂಲತಃ ಅಶ್ವ ಪರಿವಾರಕ್ಕೆ ಸೇರಿದೆ. ಮನುಷ್ಯನು ಕುದುರೆಗಿಂತ ಮೊದಲು ಕತ್ತೆಯನ್ನೇ ಸಾಕುತ್ತಿದ್ದ. ಆಫ್ರಿಕಾದ ಅಡವಿಯಲ್ಲಿ ದೊರೆಯುವ ನೂಬೀನೆ ಕತ್ತೆಯನ್ನೂ ಕ್ರಿ.ಪೂ. ೪೦೦೦ದಲ್ಲಿ ನೀಲ ಕಣಿವೆಯ ನಿವಾಸಿಗಳು ಸಾಕಿ ಸಲುಹಿದ ಪ್ರಮಾಣಗಳು ದೊರೆತಿವೆ. ಇವರಿಂದಲೇ ಸಾಕುವ ಕತ್ತೆಯ ತಳಿಯನ್ನು ವಿಕಾಸಗೊಳಿಸಲಾಯಿತು.

ಅರಳೆಮರ ಮತ್ತು ತುಳಸಿಗಿಡ ಕೂಡ ರಾತ್ರಿ ಹೊತ್ತಿನಲ್ಲಿ ಆಕ್ಸೀಜನ್ನನ್ನು ಬಿಡುವುದಿಲ್ಲ. ಅರಳೆ ಮರವೂ ಬಸರಿ ಮರದಂತೆ ಅಂಜೂರಿ ಗಿಡದ ಜಾತಿಗೆ ಸೇರಿದ ವೃಕ್ಷ. ಇದರ ಹೂಗಳು ಅದೃಶ್ಯವಾಗಿರುತ್ತವೆ. ಏಕೆಂದರೆ ಇವು ಇದರ ಕಾಯಿಗಳಲ್ಲಿ ಅಡಗಿರುತ್ತವೆ. ಪದ್ಮಪುರಾಣದಲ್ಲಿ ಭಗವಾನ್ ವಿಷ್ಣು ಅರಳೆ ಮರದ ರೂಪವನ್ನೂ ಧಾರಣ ಮಾಡಿದ್ದನೆಂದು ಹೇಳಲಾಗಿದ್ದರಿಂದ ಇದನ್ನು ಧಾರ್ಮಿಕ ದೃಷ್ಟಿಯಲ್ಲಿ ಪವಿತ್ರವೆಂದು ಭಾವಿಸಲಾಗುತ್ತದೆ. ಇದು ಇತರ ವೃಕ್ಷಗಳಿಗಿಂತ ಹೆಚ್ಚು ಪ್ರಮಾಣದಲ್ಲಿ ಪ್ರಾಣವಾಯುವನ್ನು ವಿಸರ್ಜಿಸುತ್ತದೆ. ಹರಪ್ಪಾ ಸಂಸ್ಕೃತಿಯ ಕಾಲದಲ್ಲಿ ನಾಣ್ಯಗಳ ಮೇಲೆ ಅರಳೆಮರವನ್ನು ತೋರಿಸಲಾಗಿದೆ. ಇದಕ್ಕೆ 'ಅಶ್ವತ್ಥನಾರಾಯಣ' ವೃಕ್ಷವೆಂದೂ ಕರೆಯಲಾಗುತ್ತದೆ.

ಭರತನಾಟ್ಯ, ಚಾಕ್ಯಾರಕೂತು, ಕತ್ಥಕ್, ಕಥಕಲಿ, ಕೃಷ್ಣ ಆಟ್ಟಮ್, ಕುಚಿಪುಡಿ, ಮಣಿಪುರಿ, ಓಡಿಸಿ, ಯಕ್ಷಗಾನ, ಮತ್ತು ಮೋಹಿನಿ ಆಟ್ಟಮ್. ಹೀಗೆ ಭಾರತೀಯ ನೃತ್ಯ ಪದ್ಧತಿಗಳಲ್ಲಿ ಸುಮಾರು ಹನ್ನೆರಡು ವಿಧ. ಭರತ ನಾಟ್ಯದ ಸ್ರೋತ ಭರತ ಮುನಿಯ ನಾಟ್ಯ ಶಾಸ್ತ್ರ. ಇದು ಕ್ರಿ.ಪೂ. ೪೦೦೦ ವರ್ಷ ಪ್ರಾಚೀನ ಕಾಲದ್ದೆಂದು ಹೇಳುತ್ತಾರೆ. ಚಾಕ್ಯಾರಕೂತು ಪದ್ಧತಿಯ ಪ್ರಾರಂಭ ಕೇರಳದಲ್ಲಿ ಆರ್ಯರ ಆಗಮನದ ನಂತರ ಆಯಿತೆಂದು ಪ್ರತೀತಿ. ಕತ್ಥಕ್ ಪದ್ಧತಿಗೆ ಕತೆಯೇ ಆಧಾರ. ಕಥಕ್ಕಲಿ ಕೇರಳದ ಪರಿಷ್ಕೃತ, ವೈಜ್ಞಾನಿಕ ಮತ್ತು ವಿಸ್ತೃತ ನಿಯಮಾವಳಿಯುಕ್ತ ಪದ್ಧತಿಯಾಗಿದೆ. ಕುಚಿಪುಡಿ ಆಂಧ್ರ ಪ್ರದೇಶದ ನೃತ್ಯನಾಟಕ. ಯಕ್ಷಗಾನವು ಕರ್ನಾಟಕದ ನೃತ್ಯ ಶೈಲಿ. ಇದು ನಾಟಕದ ಒಂದು ರೂಪ!

ನಿಮ್ಮ ನಾಯಿಯು ಬಾಲ ಅಲ್ಲಾಡಿಸತೊಡಗಿತೆಂದರೆ ನಿಮ್ಮನ್ನು ನೋಡಿ ಅದಕ್ಕೆ ಸಾಕಷ್ಟು ಸಂತೋಷವಾಗಿದೆ ಎಂದು ಭಾವಿಸಿರಿ. ಆದರೆ ಬೆಕ್ಕು ತನ್ನ ಬಾಲವನ್ನು ಹೀಗೆ ಮಾಡಿತೆಂದರೆ ಅದು ಕೋಪದಲ್ಲಿ ಇದೆ ಎಂದು ತಿಳಿಯಿರಿ.

ಭಾರತೀಯ ಕ್ರಿಕೆಟ್ ಪರವಾಗಿ ಆಡಿದ ೮೦ ಇನ್ನಿಂಗ್ಸ್‌ಗಳಲ್ಲಿ ಬಿ.ಎಸ್.ಚಂದ್ರಶೇಖರ್ ಅವರು ೨೪ ಇನ್ನಿಂಗ್‌ಗಳಲ್ಲಿ ಒಂದೂ ರನ್ ಮಾಡಲೇ ಇಲ್ಲ. ಹೀಗೆ ಅವರು ವಿಶ್ವ ದಾಖಲೆಯನ್ನೂ ಸ್ಥಾಪಿಸಿದರು.

• ವೆಂಕಟೇಶ ಗಂಗಾವತಿ

ಗೂಬೆಗೆ ನಮ್ಮ ಹಾಗೆ ಕಣ್ಣುಗಳನ್ನು ಹೊರಳಿಸಲು ಆಗುವುದಿಲ್ಲ. ಬದಲು ಕುತ್ತಿಗೆ ಯೆನ್ನದು ಸುತ್ತಲೂ ತಿರುಗಿಸ ಬಲ್ಲದು.

## ಜ್ಞಾನನಿಧಿ

## ಪ್ರಾಚೀನ ವೈದ್ಯಶಾಸ್ತ್ರ ಗ್ರಂಥಗಳು

೧. ಋಗ್ವೇದ (ಕ್ರಿ.ಪೂ. ೨೦೦೦) ಇದರಲ್ಲಿ ಆಯುರ್ವೇದದ ಪರಿಚಯ ಬರುತ್ತದೆ. ಆಯುರ್ವೇದಜನಕ 'ಅತ್ರೇಯ ಮುನಿ.'

೨. ಅಥರ್ವವೇದ (ಕ್ರಿ.ಪೂ. ೧೦೦೦) ಇದರಲ್ಲಿ ದೇಹದ ಬೆಳವಣಿಗೆಯಲ್ಲಿ ಹಾಲಿನ ಮಹತ್ವವನ್ನು ಕುರಿತ ಪ್ರಸ್ತಾಪವಿದೆ.

೩. ಭೇಲ ಸಂಹಿತೆ (ಕ್ರಿ.ಪೂ. ೮೦೦) ವೇದಗಳ ಆಧಾರವುಳ್ಳ ವೈದ್ಯ ವಿಜ್ಞಾನ ಗ್ರಂಥ.

೪. ಅಗ್ನಿವೇಶ ಸಂಹಿತೆ (ಕ್ರಿ.ಪೂ. ೭೦೦) 'ಅಗ್ನಿವೇಶ'ರಿಂದ ರಚಿಸಲ್ಪಟ್ಟದ್ದು, ಇದು ವೈದ್ಯ ವಿಜ್ಞಾನ ಗ್ರಂಥ.

೫. ಕಾಶ್ಯಪ ಸಂಹಿತೆ (ಕ್ರಿ.ಪೂ. ೬೦೦) 'ಕಾಶ್ಯಪ'ನಿಂದ ರಚಿಸಲ್ಪಟ್ಟದೆ. ಇದು ಮಕ್ಕಳ ರೋಗಗಳಿಗೆ ಸಂಬಂಧಿಸಿದ ವೈದ್ಯಕೀಯ ಗ್ರಂಥ.

೬. ಚಿವರ ವಸ್ತು (ಕ್ರಿ.ಪೂ. ೫೦೦) ಇದರಲ್ಲಿ ಕಣ್ಣು ಹಾಗೂ ಮಿದುಳುಗಳ ಶಸ್ತ್ರಚಿಕಿತ್ಸೆಗಳ ಬಗೆಗೆ ಉಲ್ಲೇಖವಿದೆ

೭. ಪತಂಜಲಿಯ ಯೋಗಶಾಸ್ತ್ರ (ಕ್ರಿ.ಪೂ. ೨೦೦-೧೦೦) ಇದರಲ್ಲಿ ಯೋಗದ ಮೂಲಕ ರೋಗಗಳ ಚಿಕಿತ್ಸೆಯ ಪ್ರಸ್ತಾಪವಿದೆ.

೮. ಚರಕ ಸಂಹಿತೆ (ಕ್ರಿ.ಪೂ. ೨೦೦-೧೦೦) ಅಂಗರಚನಾ ಶಾಸ್ತ್ರ, ಶರೀರಶಾಸ್ತ್ರ, ರೋಗದ ಕಾರಣಗಳು, ರೋಗದ ಲಕ್ಷಣ, ರೋಗ ಚಿಕಿತ್ಸಾ ಕ್ರಮಗಳಿರುವ ಶ್ರೇಷ್ಠ ಗ್ರಂಥ.

೯. ಸುಶ್ರುತ ಸಂಹಿತೆ (ಕ್ರಿ.ಪೂ. ೩೦೦-೨೦೦) 'ಸುಶ್ರುತ'ನಿಂದ ರಚಿಸಲ್ಪಟ್ಟ ಗ್ರಂಥ ಇದರಲ್ಲಿ ೩೦೦ ಬಗೆಯ ಶಸ್ತ್ರ ಚಿಕಿತ್ಸೆಗಳು, ೪೩ ಶಸ್ತ್ರಕ್ರಿಯೆಗಳು, ೧೨೧ ಬಗೆಯ ಶಸ್ತ್ರಗಳು ೬೫೦ ಔಷಧಿಗಳ ಉಲ್ಲೇಖವಿದೆ.

೧೦. ಅಷ್ಟಾಂಗ ಹೃದಯ (ಕ್ರಿ.ಶ. ೫೫೦) ರಚಿಸಿದವರು ವಾಗ್ಭಟಾಚಾರ್ಯ. ಇದು ಸುಧಾರಿಸಿದ ಆಯುರ್ವೇದ ಗ್ರಂಥ.

೧೧. ಗಡ ನಿಗ್ರಹ (ಕ್ರಿ.ಶ. ೭೦೦) ರಚಿಸಿದವರು 'ಸೋಢಲ.' ಇದು ವೈದ್ಯ ವಿಜ್ಞಾನ ಗ್ರಂಥ.

೧೨ .ಸೋಢಲ ನಿಘಂಟು (ಕ್ರಿ.ಶ. ೭೦೦) ರಚನೆ 'ಸೋಢಲ.' ಇದು ವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದ ತಾಂತ್ರಿಕ ಪದಗಳ ಶಬ್ದಕೋಶ.

೧೩. ಸಿದ್ಧಯೋಗ (ಕ್ರಿ.ಶ. ೭೫೦) ರಚಿಸಿದವರು 'ವೃಡಕುಂಟ.' ಇದು ರಸಚಿಕಿತ್ಸೆಗೆ ಸಂಬಂಧಿಸಿದ ವೈದ್ಯಗ್ರಂಥ.

೧೪. ಮಾಧವ ನಿದಾನ (ಕ್ರಿ.ಶ. ೮೦೦) ರಚಿಸಿದವರು 'ಮಾಧವಚಾರ್ಯ'. ರೋಗ ಲಕ್ಷಣ ಮತ್ತು ರೋಗ ಪರೀಕ್ಷೆ ಕುರಿತ ಗ್ರಂಥ.

೧೫. ರಸ ಹೃದಯ (ಕ್ರಿ.ಶ. ೧೦ನೆ ಶತಮಾನ) ರಚಿಸಿದವರು 'ಗೋವಿಂದ ಭಗತ್.' ಇದು ರಸತಂತ್ರದ ಬಗೆಗಿನ ಗ್ರಂಥ.

೧೬. ಮಾನಸೋಲ್ಲಾಸ (ಕ್ರಿ.ಶ. ೧೨ನೆ ಶತಮಾನ) ರಚಿಸಿದವರು 'ಸೋಮದೇವ.' ಇದು ಸಹ ರಸತಂತ್ರ ಕುರಿತ ಗ್ರಂಥ.

೧೭. ಗಂಧಸಾರ (ಕ್ರಿ.ಶ. ೧೨ನೆ ಶತಮಾನ) ರಚಿಸಿದವರು 'ಗಂಗಾಧರ.' ಇದು ಸೌಂದರ್ಯವರ್ಧಕಗಳಿಗೆ ಸಂಬಂಧಿಸಿದ ಗ್ರಂಥ.

೧೮. ಭಾವಪ್ರಕಾಶ (ಕ್ರಿ.ಶ. ೧೩೦೦-೧೬೦೦) ರಚಿಸಿದವರು 'ಭಾವಮಿಶ್ರ.' ಇದು ಸಮಸ್ತ ರೋಗಗಳ ಲಕ್ಷಣ ಮತ್ತು ಚಿಕಿತ್ಸಾ ವಿಧಾನವನ್ನು ತಿಳಿಸುವ ಗ್ರಂಥ.

೧೯. ರಸಪ್ರದೀಪ (ಕ್ರಿ.ಶ. ೧೬ನೆ ಶತಮಾನ) ಇದು ರಸತಂತ್ರ ಬಗೆಗಿನ ಗ್ರಂಥ.

● ಸಂಗ್ರಹ: **ಕಿಶೋರ ಕುಲಕರ್ಣಿ**

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

---

೧. ಸತ್ವರ
(ಅ) ಬಲಹೀನ
(ಆ) ಕೊರತೆ
(ಇ) ಬೇಗನೆ
(ಈ) ಹೊಳೆಯುವ

೨. ತತ್ವಾರ
(ಅ) ಧರ್ಮಬೋಧಕ
(ಆ) ಹಟವಾದಿ
(ಇ) ಅರ್ಥ
(ಈ) ಕೊರತೆ

೩. ತತ್ತರ
(ಅ) ಅದಕ್ಕಿಂತ ಹೆಚ್ಚು
(ಆ) ಗಾಬರಿ
(ಇ) ಅವಸರ
(ಈ) ಚಿಂತೆ

೪. ದುರಿತ
(ಅ) ಪಾಪ
(ಆ) ಕಣ್ಣು ಕುಕ್ಕುವಿಕೆ
(ಇ) ದುರಾಶೆ
(ಈ) ದುಃಖ

೫. ದುರ್ಬೋಧ
(ಅ) ತಿಳಿಯಲಾರದ್ದು
(ಆ) ಒಡೆಯಬಾರದ್ದು
(ಇ) ಬಿಗಿಯಾದ
(ಈ) ಉಪದ್ರವಕಾರಿ

೬. ತರಟು
(ಅ) ಅರ್ಥವಿಲ್ಲದ ಮಾತಾಡು
(ಆ) ಎತ್ತರ
(ಇ) ಬೋಳು
(ಈ) ಒಡಕು

೭. ಹೊಂತಕಾರಿ
(ಅ) ಕೊಲೆಗಡುಕ
(ಆ) ಕೆಲಸದಲ್ಲಿ ಸಮರ್ಥ
(ಇ) ಜನರೊಡನೆ ಹೊಂದಿಕೊಳ್ಳುವವ
(ಈ) ಶತ್ರು

೮. ಪಲ್ಲವ
(ಅ) ತುಣುಕು
(ಆ) ಒದ್ದೆ
(ಇ) ದುರ್ದೈವ
(ಈ) ಚಿಗುರು

೯. ಆಪ್ಲುತ
(ಅ) ಕೂಗು
(ಆ) ನಾವೆ
(ಇ) ಕೋಲಾಹಲ
(ಈ) ಮಿಂದದ್ದು

೧೦. ಆಶಂಸೆ
(ಅ) ಇಚ್ಛೆ
(ಆ) ಅಪ್ಪಣೆ
(ಇ) ಏರಿಕೆ
(ಈ) ಗುಣ

೧೧. ವೈಗುಣ್ಯ
(ಅ) ಬಾರಿಸುವಿಕೆ
(ಆ) ಪ್ರಾಯ
(ಇ) ಸದ್ಗುಣವಿಲ್ಲದಿರುವುದು
(ಈ) ದಯೆ

೧೨. ಸಾತತ್ಯ
(ಅ) ಪರಿಸ್ಥಿತಿ
(ಆ) ಹರಿಗಡಿಯದಿರುವಿಕೆ
(ಇ) ಯಥಾರ್ಥ
(ಈ) ಮುಂಜಾಗ್ರತೆ

## ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**೧. ಸತ್ವರ**

(ಇ) ಬೇಗನೆ, ಅವಸರವಾಗಿ, ವೇಗವಾಗಿ. ಉದಾ: ವಾರ್ತೆ ಕೇಳಿ ಅವನು ಸತ್ವರವಾಗಿ ಬಂದ. (ಸಂ. ಸ=ಸಹಿತ, ತ್ವರಾ=ಅವಸರ)

**೨. ತತ್ವಾರ**

(ಈ) ಕೊರತೆ, ಅಭಾವ, ಇಲ್ಲದಿರುವಿಕೆ. ಉದಾ: ಹೆಸರು ಕ್ಷೀರಸಾಗರಭಟ್ಟ, ಮಜ್ಜಿಗೆಗೆ ತತ್ವಾರ.

**೩. ತತ್ತರ**

(ಅ) ಗಾಬರಿ, ಮುಂಗಾಣದಿರುವುದು, ಗೊಂದಲಕ್ಕೆ ಬೀಳುವುದು, ಪೇಚು, ನಡುಕ. ಉದಾ: ಸೈನ್ಯವನ್ನು ತತ್ತರ ತರಿದನು, ಅವನೆದೆಯಲ್ಲಿ ತತ್ತರ ಹಬ್ಬಿತು. (ಕ.)

**೪. ದುರಿತ**

(ಅ) ಪಾಪ, ಕೆಟ್ಟ ಕೆಲಸ, ದುರ್ಮಾರ್ಗ. (ಸಂ. ದುರ್=ಕೆಟ್ಟ, ಇತ=ತಡೆ)

**೫. ದುರ್ಬೋಧ**

(ಅ) ತಿಳಿಯಲಾರದ್ದು, ಅರ್ಥವಾಗದ್ದು, ಕಠಿಣ. ಉದಾ: ಈ ಪುಸ್ತಕದಲ್ಲಿರುವ ವಿಷಯಗಳು ದುರ್ಬೋಧವಾಗಿವೆ. (ಸಂ. ದುರ್=ಕಷ್ಟದಿಂದ, ಬೋಧ=ತಿಳಿಯುವುದು)

**೬. ತರಟು**

(ಇ) ಬೋಳು, ಖಾಲಿ, ಕತ್ತರಿಸಿ ಉಳಿದದ್ದು. ಉದಾ: ಅವನು ತರಟು ತಲೆಯವನು. (ಕ.)

**೭. ಹೊಂತಕಾರಿ**

(ಅ) ಕೆಲಸದಲ್ಲಿ ಸಮರ್ಥ, ಕಾರ್ಯದಕ್ಷ, ದೊಡ್ಡ ಕಾರ್ಯಗಳನ್ನು ಮಾಡಬಲ್ಲವ, ಭಾರೀ ಚತುರ. (ಹೊಂತ್ಗ=ಹಾದಿ, ಕಾರ=ಮಾಡುವವ)

**೮. ಪಲ್ಲವ**

(ಈ) ಚಿಗುರು, ಎಳೆಯ ಎಲೆಗಳು. ಉದಾ: ಗಿಡಗಳು ಪಲ್ಲವಿತವಾಗಿವೆ. (ಸಂ.)

**೯. ಆಪ್ಲುತ**

(ಈ) ಮಿಂದದ್ದು, ಸಿಂಪಡಿಸಿದ್ದು, ಒದ್ದೆಯಾದದ್ದು. (ಆ=ವಿಶೇಷವಾಗಿ, ಪ್ಲುತ=ತೇಲಿದ್ದು.)

**೧೦. ಆಶಂಸೆ**

(ಅ) ಇಚ್ಛೆ, ಅಪೇಕ್ಷೆ, ಅಭಿಲಾಷೆ, ಬಯಕೆ, ಹರಕೆ. ಉದಾ: ಈ ಕಾರ್ಯಕ್ಕೆ ನನ್ನ ಶುಭಾಶಂಸೆಗಳಿವೆ. (ಸಂ.)

**೧೧. ವೈಗುಣ್ಯ**

(ಇ) ಸದ್ಗುಣಗಳಿಲ್ಲದಿರುವಿಕೆ, ಗುಣ ವಿಹೀನತೆ, ದುರ್ಗುಣ, ಗುಣಗಳಲ್ಲಿರುವ ಅಂತರ. ಉದಾ: ಅವನ ವೈಗುಣ್ಯಗಳನ್ನೆಲ್ಲ ಕ್ಷಮಿಸಿರಿ, ಅವನಿಗೂ ಇವನಿಗೂ ಇರುವ ವೈಗುಣ್ಯಗಳಿವು. (ಸಂ. ವಿ=ಇಲ್ಲ, ಗುಣ.)

**೧೨. ಸಾತತ್ಯ**

(ಅ) ಹರಿಗಡಿಯದಿರುವಿಕೆ, ಶಾಶ್ವತವಾಗಿರುವಿಕೆ. ಉದಾ: ವಂಶದ ಸಾತತ್ಯವುಳಿಸಲು ಮಕ್ಕಳು ಬೇಕು. (ಸಂ. ಸತತ-ದಿಂದ)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೭–೮ ಸರಿಯಿದ್ದರೆ.... | ಸಾಧಾರಣ |
| ೯–೧೦ ಸರಿಯಿದ್ದರೆ..... | ಉತ್ತಮ |
| ೧೧–೧೨ ಸರಿಯಿದ್ದರೆ.... | ಅತ್ಯುತ್ತಮ |

# ಸಮಾಜ ವಿಜ್ಞಾನಿಯ ದೃಷ್ಟಿಯಲ್ಲಿ 'ಕಿಟ್ಟೆಲ್ ಕೋಶ'

● ಡಾ. ನ.ಕೃ. ತಿಂಗಳಾಯ

ಶತಮಾನವನ್ನು ಆಚರಿಸಿದ ಕಿಟ್ಟೆಲ್ಲರ ನಿಘಂಟಿನ ಉಪಯುಕ್ತತೆಯ ಬಗ್ಗೆ ಸಾಕಷ್ಟು ವಿಚಾರವಿಮರ್ಶೆಗಳು ನಡೆದಿವೆ. ಅವರ ಸಾಧನೆಯನ್ನು ಕೃತಜ್ಞತಾಪೂರ್ವಕವಾಗಿ ಗುರುತಿಸಲಾಗಿದೆ. ಆದರೆ ನಿಘಂಟನ್ನು ಹೆಚ್ಚಾಗಿ ಶಬ್ದಗಳ ಅರ್ಥ ಮತ್ತು ಅವುಗಳ ಪ್ರಯೋಗಗಳನ್ನು ತಿಳಿಯಲು ಮಾತ್ರ ಉಪಯೋಗಿಸುವುದನ್ನು ನಾವು ಕಾಣಬಹುದು. ಆದುದರಿಂದ, ಈ ಲೇಖನದಲ್ಲಿ ನಾನು ಅದನ್ನು ಬೇರೆಯೇ ಆದ ದೃಷ್ಟಿಕೋನದಿಂದ ನೋಡುವ ಒಂದು ಚಿಕ್ಕ ಪ್ರಯತ್ನವನ್ನು ಮಾಡಬಯಸುತ್ತೇನೆ. ಕಿಟ್ಟೆಲ್ಲರ ನಿಘಂಟು ಒಂದು ಶತಮಾನದ ಹಿಂದೆ ಪ್ರಕಟವಾಗಿರುವುದರಿಂದ ಅದರಲ್ಲಿ ಬರುವ ಪದಗಳು ಆ ಕಾಲದ ಸಮಾಜದ ವಿವಿಧ ರೂಪಗಳನ್ನು ಪ್ರತಿಬಿಂಬಿಸುತ್ತವೆ ಎನ್ನಬಹುದು. ಆಗ ರೂಢಿಯಲ್ಲಿದ್ದ ಶಬ್ದಗಳೂ ನಾಣ್ಣುಡಿಗಳೂ ಆಗಿನ ಪರಿಸ್ಥಿತಿಯನ್ನೂ ಸಾಮಾಜಿಕ ಮನಃಸ್ಥಿತಿಯನ್ನೂ ಬಿಂಬಿಸುತ್ತವೆ. ಕಿಟ್ಟೆಲ್ಲರ ಶಬ್ದಕೋಶವು ಐತಿಹಾಸಿಕ ಪ್ರಜ್ಞೆಯುಳ್ಳ ಸಮಾಜಶಾಸ್ತ್ರಜ್ಞರಿಗೆ ಸಂಶೋಧನೆಗೆ ಸಾಕಷ್ಟು ಸಾಮಗ್ರಿಯನ್ನು ಒದಗಿಸಬಲ್ಲ ಮಹಾಗ್ರಂಥ ಎನ್ನಲು ಅಡ್ಡಿಯಿಲ್ಲ. ಇದಕ್ಕೊಂದು ಉದಾಹರಣೆ ಕೊಡುವುದಿದ್ದರೆ, ಆಗಿನ ಉಡುಗೆತೊಡಗೆಗಳು, ತಿಂಡಿತಿನಿಸುಗಳು, ಉಪಯೋಗದ ವಸ್ತುಗಳು- ಇವಕ್ಕೆ ಸಂಬಂಧಪಟ್ಟ ಶಬ್ದಗಳನ್ನೆಲ್ಲಾ ಸಂಗ್ರಹಿಸಿ ಅಧ್ಯಯನ ಮಾಡಬಹುದು. ಸಮಕಾಲೀನ ಸಾಮಾಜಿಕ ಸ್ಥಿತಿಗತಿಗಳನ್ನು ಈ ಅಧ್ಯಯನದಿಂದ ದೊರಕುವ ಮಾಹಿತಿಯೊಂದಿಗೆ ತುಲನೆಮಾಡಬಹುದು. ಇಂತಹ ಒಂದು ಪ್ರಯೋಗವನ್ನು ಚುಟುಕಾಗಿ ನಾನಿಲ್ಲಿ ಮಾಡಿದ್ದೇನೆ. ಇದಕ್ಕೆ ಅನುವಾಗುವಹಾಗೆ ಕಿಟ್ಟೆಲ್ಲರ ನಿಘಂಟಿನಲ್ಲಿ ದೊರಕುವ ಎಲ್ಲಾ ತಿಂಡಿತಿನಿಸುಗಳ ಮತ್ತು ಉಡುಗೆತೊಡುಗೆಗಳ ಪಟ್ಟಿಯನ್ನು ಸಿದ್ಧಪಡಿಸಿದ್ದೇನೆ. ಶತಮಾನವನ್ನು ಆಚರಿಸಿದ ತಿಂಡಿತಿನಿಸುಗಳ ಮಾಹಿತಿ ಇಲ್ಲಿ ದೊರಕುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿದ್ದ ತಿಂಡಿಗಳ ವಿವರವೂ ದೊರಕುತ್ತದೆ. ಅಂತೆಯೇ ಶತಮಾನದಿಂದಲೂ ವಾಡಿಕೆಯಲ್ಲಿ ಇರುವ ಉಡುಗೆತೊಡುಗೆಗಳ ಪರಿಚಯವನ್ನೂ ಪಡೆಯಬಹುದು.

## ತಿಂಡಿ ತಿನಿಸುಗಳು

ಕಿಟ್ಟೆಲ್ಲರ ಕಾಲದಲ್ಲಿ ಹೋಟೇಲುಗಳು ಇರಲಿಲ್ಲ. ಹೀಗಾಗಿ ಅವರ ನಿಘಂಟಿನಲ್ಲಿ ಈ ಶಬ್ದವೇ ಇಲ್ಲ. ಉಡುಪಿ ಹೋಟೇಲುಗಳು ಆಗಿನ್ನೂ ಪ್ರಾರಂಭವಾಗಿರಲಿಲ್ಲ; ಆದರೆ "ಗಡಂಗು"ಗಳು ಪ್ರಚಲಿತವಾಗಿದ್ದವು ಅಂದರೆ ಹೆಚ್ಚಿನವರಿಗೆ ಆಶ್ಚರ್ಯವಾಗಬಹುದು. ಸಾರಾಯಿ ಮಾರುವ ಗಡಂಗುಗಳನ್ನು 'ಗಿಡ್ಡಂಗಿ' ಎಂದೂ ಕರೆಯುತ್ತಿದ್ದರು. (ಪುಟ ೫೧೯). ಭೋಜನ, ಭೋಜನ ಕ್ರಿಯೆ ಮತ್ತು ಭೋಜನ ಸಮಾರಂಭಗಳನ್ನು ಕಿಟ್ಟೆಲ್ಲರು ಉಲ್ಲೇಖಿಸಿದ್ದರೂ (ಪುಟ ೧೧೭೪) ಭೋಜನಾಲಯ ಅಥವಾ ಭೋಜನಶಾಲೆಗಳ ಪ್ರಸ್ತಾವನೆ ನಿಘಂಟಿನಲ್ಲಿ ಬರುವುದಿಲ್ಲ. 'ಬಾಣ ಪೆಗ್ಗಡೆ" ಎಂಬ ಒಂದು ಶಬ್ದ ಕಂಡುಬರುತ್ತದೆ. ಅದರ ಅರ್ಥ (A kitchen master ಪುಟ ೧೧೦೨) ಎಂದಷ್ಟೇ ಹೇಳಿದ್ದಾರೆ. ಈತ ಹೋಟೇಲು ಸಾಹುಕಾರ

ನಾಗಿರದೆ ದೊಡ್ಡಮನೆಯ ಓರಿಯ ಅಡುಗೆ ಭಟ್ಟ ನಾಗಿರಬಹುದು. ತಿಂಡಿತಿನಿಸುಗಳನ್ನು ಮಾರುವ ಉದ್ಯೋಗ ಪ್ರಾಯಶಃ ಆಗ ಇದ್ದಿಲ್ಲ. ಆದುದರಿಂದ ಭೋಜನಾಲಯಗಳು ಅಸ್ತಿತ್ವಕ್ಕೆ ಬರುವ ಮೊದಲೇ ನಮ್ಮಲ್ಲಿ ಗಡಂಗುಗಳು ಸ್ಥಾಪನೆಯಾಗಿದ್ದವು ಎನ್ನುವುದು ನಿಶ್ಚಿತ. ಇಷ್ಟಕ್ಕೂ ಸುರಾಪಾನವು ವೇದಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಲ್ಲವೆ? ಕರ್ನಾಟಕದ ಜನ ಆಗಲೂ 'ಕಳ್ಳು' ಕುಡಿಯುತ್ತಿದ್ದಿರಬೇಕು (ಪುಟ ೩೯೭). ಅವರು 'ಹೆಂಡ'ವನ್ನೂ ಸವಿಯುತ್ತಿದ್ದಿರಬೇಕು. (ಪುಟ ೧೬೭೮). ಹಿಪ್ಪೆ ಹೂವಿನ ಹೆಂಡ (ಮಧ್ವಾಸವ), ದ್ರಾಕ್ಷಿ ಹಣ್ಣಿನ ಹೆಂಡ (ಮಾಧ್ವೀಕ), ಅರೆ ಹುಪ್ಪು ಬೆಲ್ಲ ಕಲಗಚ್ಚು ನೀರಿನಿಂದ ಮಾಡಿದ ಹೆಂಡ (ಮೈರೇಯ), ಪಕ್ವವಾದ ಕಬ್ಬಿನ ರಸದಿಂದ ಮಾಡಿದ ಹೆಂಡ (ಆಸವ, ಶೀಧು) ಹೀಗೆ ನಾನಾ ತರಹದ ಹೆಂಡಗಳ ಪಟ್ಟಿಯನ್ನೇ ಕಿಟ್ಟಲ್ ಸಾಹೇಬರು ಕೊಟ್ಟಿದ್ದಾರೆ. ಜೊತೆಗೆ 'ಬ್ರಾನ್ಡಿ' ಶಬ್ದವನ್ನೂ ಸೇರಿಸಿದ್ದಾರೆ. ಈಗ ಗೋವೆಯಿಂದ ಬರುವ 'ಫೇಣಿ,' ಆ ಕಾಲದಲ್ಲಿ ಕರ್ನಾಟಕದಲ್ಲಿಯೂ ತಯಾರಿಸಲ್ಪಡುತ್ತಿತ್ತೋ ಏನೋ? 'ಪೇಣಿ' - (Frothy scum rice flour beaten upto a frothy consistency (ಪುಟ ೧೦೧೫). ಇದನ್ನು ಮರಾಠಿಯಲ್ಲಿ 'ಫೇಣಿ' ಎನ್ನುವರು ಎಂದೂ ಉಲ್ಲೇಖಿಸಿದ್ದಾರೆ. ಹೆಂಡ ಕುಡಿಯುವವರ ಕುರಿತಾದ ಒಂದು ಗಾದೆ ಮಾತನ್ನು ಕಿಟ್ಟೆಲ್ಲರು ಆರಿಸಿದ್ದಾರೆ- 'ಹೆಣ್ಣು ಮಣ್ಣಿಗೆ ಏರಿದ್ದು, ಕುಣ್ಣೆ ಬಡಕೊಣ್ಣರೆ ಇಳಿಗೀತೆ?" (ಪುಟ ೧೬೭೯). ಸರಾಯಿ ಮಾರುವವರನ್ನು 'ಮಣ್ಣಾಹಾರಕ'ನೆಂದು ಕರೆಯುತ್ತಿದ್ದರೆನ್ನಲು ಕಿಟ್ಟೆಲ್ಲರು ಗಂಗಾಧರ ಮಡಿವಾಳೇಶ್ವರರ ಭಾಷಾಂತರವನ್ನು ಉಲ್ಲೇಖಿಸಿದ್ದಾರೆ. (ಪುಟ ೧೫೨೩).

'ಉಪಾಹಾರ' ಎಂಬ ಶಬ್ದ ನಿಘಂಟಿನಲ್ಲಿದೆ. ಉಪಾಹಾರ ಸೇವನೆಯ ಕ್ರಮ ಮೈಸೂರು ಕಡೆ ಇದ್ದಿರಬೇಕು. ಅದನ್ನು 'Slight refreshment consisting of fruits ಎಂದು ಅರ್ಥೈಸಿದ್ದಾರೆ. (ಪುಟ ೨೩೭) ಈಗಿನ ನಮ್ಮ ಉಪಾಹಾರ ಭವನಗಳಲ್ಲಿ ಹಣ್ಣುಗಳು ಮಾತ್ರವಲ್ಲ, ಎಲ್ಲಾ ವಿಧದ ತಿಂಡಿಗಳೂ ದೊರಕುತ್ತವೆ ಮತ್ತು slight refereshmentನ ಬದಲು light refreshment× ಆಗಿದೆ.

"ಇಡ್ಲಿ' ಪ್ರಾಯಶಃ ಬಹಳ ಹಳೇ ಕಾಲದ ತಿಂಡಿ. ಅದಕ್ಕೆ 'ಇಡ್ಡಳಿಗೆ' ಎಂಬ ಹೆಸರೂ ಇತ್ತು. ಅದನ್ನು a kind of sour pudding made of rice flower (ಪುಟ ೧೮೫) ಎಂದು ಬಣ್ಣಿಸಿದ್ದಾರೆ ಕಿಟ್ಟೆಲ್ ಸಾಹೇಬರು. ಮುದ್ರಣದೋಷದಿಂದ 'Flour' ಇಲ್ಲಿ 'Flower' ಆಗಿದೆ.

ಅವಲಕ್ಕಿಯನ್ನು ಆಗಲೂ ತಿನ್ನುತ್ತಿದ್ದರು ನಮ್ಮವರು. ಅಂದಹಾಗೆ ದ್ವಾಪರ ಯುಗದ ಕುಚೇಲನಿಗೆ ಕೃಷ್ಣ ಅದನ್ನು ತಿನ್ನಿಸಲಿಲ್ಲವೆ? ಅವಲ್ ಎಂದರೆ Pounding (ಪುಟ ೧೨೦) ಬೆಲ್ಲವನ್ನು ಅದಕ್ಕೆ ಬೆರೆಸುತ್ತಿದ್ದಿರಬಹುದೋ ಏನೋ? ಬೆಲ್ಲವನ್ನು Coarse dark sugar ಎಂದಿದ್ದಾರೆ (ಪುಟ ೧೧೪೧). ಬೆಲ್ಲದ ವಿವಿಧ ರೂಪಗಳಲ್ಲಿ ಅಚ್ಚು ಬೆಲ್ಲ ಮತ್ತು ತಾಳೇ ಬೆಲ್ಲ- ತಾಟ ಬೆಲ್ಲಗಳು ಮಾತ್ರ ಕಿಟ್ಟೆಲ್ಲರ ದೃಷ್ಟಿಗೆ ಬಿದ್ದಿರಬೇಕು (ಪುಟ ೭೧೩) ಬೆಲ್ಲಕ್ಕೆ ಸಂಬಂಧಿಸಿದ ಹಲವು ನಾಣ್ಣುಡಿಗಳಲ್ಲಿ- "ಬೆಲ್ಲವಿಲ್ಲದಿದ್ದರೆ ಬೆಲ್ಲದಂತಹ ಮಾತು ಇಲ್ಲವೆ?" ಎಂಬುದನ್ನೂ ಇನ್ನೊಂದು ಮಾರ್ಮಿಕವಾದ ಗಾದೆ- "ಅಚ್ಚುಬೆಲ್ಲ ಅಚ್ಚಪ್ಪಗೆ, ನುಚ್ಚುಗಂಜಿ ವೆಂಕಪ್ಪಗೆ" ಎಂಬುದನ್ನೂ ಸೇರಿಸಿದ್ದಾರೆ (ಪುಟ ೨೩). 'ಹೋಳಿಗೆ' ಬಹುಶಃ ಜನಪ್ರಿಯ ತಿಂಡಿಯಾಗಿದ್ದಿರಬೇಕು. ಅದನ್ನು a kind of cake ಎಂದು ವಿವರಿಸಿದ್ದಾರೆ. "ನನ್ನ ಮಗ ಇಪ್ಪತ್ತು ಹೋಳಿಗೆ ತಿನ್ನಾನೆನ್ದರೆ ಹಾಕುವವರು ಯಾರು?" ಎಂದೂ ಕೇಳಿದ್ದಾರೆ (ಪುಟ ೧೭೦೨).

'ಲಡ್ಡು' ಅಥವಾ 'ಲಾಡು' ಆಗಲೂ ಇತ್ತು. ಅದನ್ನು a sweetmeat ball of numerous varieties ಎಂದು ಬಣ್ಣಿಸಿದ್ದಾರೆ ಪುಟ ೧೩೫೫).

"ದೋಸೆ'ಯ ಪ್ರಾಚೀನತೆಯ ಬಗ್ಗೆ ಯೋಚನೆ ಮಾಡುವ ಅಗತ್ಯವೇ ಇರಲಿಕ್ಕಿಲ್ಲ. ಅನೇಕ ಗಾದೆಗಳಿಗೆ ದೋಸೆಯೇ ಆಧಾರ. ಇದನ್ನು a holed that i.e spongy cake of rice flour, Urdu etc. baked on a potshed or iron plate ಎಂದು ವಿವರಿಸಿದ್ದಾರೆ. "ದೋಸೆ ಬಿಸಿಯೆಂದು ಮಸಿಕೆಣ್ಣು ತಿನ್ನ" "ದೋಸೆ ತೂತು ಕಾವಲಿ

ಮುಚ್ಚೀತೇ" "ಎಲ್ಲರ ಮನೇಲಿ ದೋಸೆ ತೂತು, ನಮ್ಮಲ್ಲಿ ಕಾವಲಿಗೇ ತೂತು" (ಪುಟ ೮೧೩) ಇತ್ಯಾದಿ ಗಾದೆಗಳು ದೋಸೆಯ ರುಚಿಯನ್ನು ಹೆಚ್ಚಿಸಿವೆ. "ಮಸಾಲೆ ದೋಸೆ" ಆಗಿನ್ನೂ ಅಸ್ತಿತ್ವಕ್ಕೆ ಬಂದಂತೆ ಕಾಣುವುದಿಲ್ಲ. ಮಸಾಲೆಯನ್ನು "ಕಾಯಿ ಪಲ್ಯದೊಳಗೆ ಹಾಕುವ ಮಸಾಲೆ" ಎಂದು ಗುರುತಿಸಲಾಗಿದೆ (ಪುಟ ೧೨೨೪). 'ಚಟ್ನಿ'ಯ ಉಲ್ಲೇಖವಿದೆ. (ಪುಟ ೫೮೭). ಆದರೆ ಅದರ ವೈವಿಧ್ಯತೆಯ ಬಗ್ಗೆ ಏನೂ ವಿವರಣೆಯಿಲ್ಲ.

"ವಡೆ'ಯ ತದ್ಭವ "ವಟ'. ಇದು ಸಂಸ್ಕೃತದಲ್ಲಿ ವಟಕ, ವಡಾ, ವಡಿಕಾ ಎಂದು ಕರೆಯಲ್ಪಟ್ಟಿದ್ದರೆ, ನಮ್ಮ ಉಡುಪಿ ಹೋಟೇಲುಗಳ ಅಡಿಗೆ ಭಟ್ಟರು ಇದರ ಹಲವಾರು ರೂಪಾಂತರಗಳನ್ನು ಕರಿಯಬಲ್ಲರು. ವಡೆಯ ಕುರಿತಾದ ಗಾದೆ ಹೀಗಿದೆ- "ಒಡೆಯನ ಕಣ್ಣಮೇಲೆ ವಡೆ ತಿನ್ನಲಿಕ್ಕೆ ದರಿದ್ರವೇ?" (ಪುಟ ೧೩೭೩)

ಮಾಲೀದಿ- ತುಪ್ಪದಲ್ಲಿ ಕರಿದು, ಸಕ್ಕರೆಯಲ್ಲಿ ಹೊರಳಿಸಿದ ಗೋಧಿಯ ತುಕಡಿಗಳ ಚೂರು (ಪುಟ ೧೨೪೪). ಇದು ಶ್ರೀಮಂತರು ತಿನ್ನುವ ತಿಂಡಿಯಾದರೆ, ಸಾಮಾನ್ಯ ಜನರು ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ತಿನ್ನುವ ದಿನನಿತ್ಯದ ವಸ್ತುವೂ ಒಂದಿದೆ- ಬಕ್ಕರಿ ಬಕ್ರಿ; ಮರಾಠಿಯ ಭಾಕರ. ಇದನ್ನು ಕಿಟೆಲ್ಲರು Bread ಎಂದಿದ್ದಾರೆ. (ಪುಟ ೧೦೬೧).

"ಉಪ್ಪಿಟ್ಟು" a cake or wheat or ragi meal with various ingredients ಇತ್ತು. (ಪುಟ ೨೩೮). ಜತೆಗೆ ಉಪ್ಪಿನಕಾಯಿಯೂ pickles- ಇತ್ತು. ಆದರೆ ಉಪ್ಪಿನಕಾಯಿಯ ಪ್ರಾದೇಶಿಕ ವಿಭಿನ್ನತೆಯ ಬಗ್ಗೆ ಕಿಟ್ಟೆಲ್ ಸಾಹೇಬರು ಬಾಯಿ ಚಪ್ಪರಿಸಿಲ್ಲ. "ಮಾತಿಗೆ ಮೊದಲು ಗಾದೆ, ಊಟಕ್ಕೆ ಮೊದಲು ಉಪ್ಪಿನಕಾಯಿ" ಗಾದೆ ಮಾತನ್ನು ಉದ್ಧರಿಸಿದ್ದಾರೆ.

"ಪಾಯಸ" - made of milk: food prepared with milk- ಸಿಗುತ್ತದೆ." "ಪಾಯಸವಾದರೂ ಆಯಾಸದ ಹೊರ್ತು ಸಿಕ್ಕದು" ಮತ್ತು "ಪಯಸ್ವಿನಿ ನದಿಗೆ ಹೋದರೆ ಪಾಯಸ ಸಿಕ್ಕೀತೆ?" ಎಂಬ ಎರಡು ಗಾದೆ ಮಾತನ್ನೂ ಸೇರಿಸಿದ್ದಾರೆ (ಪುಟ ೯೭೩).

## ಚೆಂಡುಹೂವು ಬೆಳೆಸಿ, ಸೊಳ್ಳೆಗಳನ್ನು ಓಡಿಸಿ

ಇಡಿ ಹೊಲಕ್ಕೆ ಹುಳು ಹತ್ತಿದಾಗಲೂ ಚೆಂಡು ಹೂವಿನ ಸುತ್ತಮುತ್ತ ಬೆಳೆದ ಸಸ್ಯಗಳಿಗೆ ಮಾತ್ರ ಹುಳುಹತ್ತದಿರುವುದು ಅಲಾಬಾಮಾ ವಿಶ್ವವಿದ್ಯಾಲಯದ ಸಿ.ವೆಲ್ಸ್ ಎಂಬ ವಿಜ್ಞಾನಿಯ ಲಕ್ಷ್ಯಕ್ಕೆ ಬಂತು. ಲಕ್ಷ್ಯಕ್ಕೆ ಬರುವುದೇ ತಡ, ಪ್ರಯೋಗಗಳನ್ನಾತ ಆರಂಭಿಸಿಯೇಬಿಟ್ಟ. ಎಲೆ, ಕಾಂಡ, ಹೂವು ಹೀಗೆ ಸಸ್ಯದ ಭಾಗಗಳನ್ನು ಪ್ರತ್ಯೇಕಿಸಿ, ನೀರಿನಲ್ಲಿ ಕುದಿಸಿ, ಅರ್ಕ ತೆಗೆದು, ಗ್ಯಾಸ್ ಕ್ರೊಮ್ಯಾಟೋಗ್ರಾಫಿ ವಿಧಾನದಿಂದ ಅರ್ಕದಲ್ಲಿನ ರಾಸಾಯನಿಕಗಳನ್ನು ಪ್ರತ್ಯೇಕಿಸಿದಾಗ ಸಸ್ಯದ ಎಲ್ಲ ಭಾಗಗಳಲ್ಲಿ- ಅದರಲ್ಲೂ ಹೂವಿನಲ್ಲಿ- ಹೆಚ್ಚು ಪ್ರಮಾಣದಲ್ಲಿ ಥಿಯೋಫೆನೀಸ್ ಎಂಬ ಸೊಳ್ಳೆ ನಾಶಕವಿದ್ದದ್ದು ಗೊತ್ತಾಯಿತು. ಹೂಗಳಿಂದ ಹೊರಡುವ ಈ ರಾಸಾಯನಿಕ ಆವಿಯಾಗಿ ಸುತ್ತಲೂ ಹರಡುವುದರಿಂದ ಚೆಂಡುಹೂವಿನ ಗಿಡದ ಸುತ್ತಲಿನ ಬೆಳೆಗಳಿಗೆ ರೋಗ ತಗಲುವುದಿಲ್ಲವೆನ್ನುವುದೂ ವ್ಯಕ್ತವಾಯಿತು. ವ್ಯಾವಹಾರಿಕವಾಗಿ ಲಾಭದಾಯಕವಾಗುವಷ್ಟು ಪ್ರಮಾಣದಲ್ಲಿ ಥಿಯೋಫೆನೀಸ್ ತೆಗೆಯಬಹುದೆ? ಎಂಬ ಬಗೆಗೆ ಪರಿಶೀಲನೆಯೀಗ ನಡೆಯುತ್ತಿದೆ.

'ಚಾಹ'ಕ್ಕೆ ದೊರೆತ ಮನ್ನಣೆ ಇನ್ನೂ ಕಡಿಮೆ- ಚಹಾ B 5,287. ಅದರ ವಿವರ ಇಷ್ಟೇ- ಈ abbreviation ಏನು ಅಂತ ಹುಡುಕಿದಾಗ ಅದು Bombay Department of Public Instructionsನವರ ೧೮೬೮ರಲ್ಲಿ ಪ್ರಕಟವಾದ Kanarese Bookನ ೨೮೭ನೇ ಪುಟದಲ್ಲಿ ಯಾವುದೋ ಉದಾಹರಣೆ ಇದ್ದಿರಬೇಕು ಎಂದು ಭಾಸವಾಗುತ್ತದೆ. (ಪುಟ ೬೦೪). ನೂರು ವರ್ಷಗಳ ಹಿಂದೆ ಚಹಾ ಕಾಫಿಗಳ ವಿತರಣಾ ವ್ಯವಸ್ಥೆ ಹೇಗಿತ್ತು? ಯಾವ ವಿದೇಶಿ ಕಂಪೆನಿಗಳು ಈ ಮಾರುಕಟ್ಟೆಯನ್ನು ಬೆಳೆಸಿದ್ದವು ಎನ್ನುವ ನನ್ನ ಜಿಜ್ಞಾಸೆಗೆ ಕೂಡಲೇ ಉತ್ತರ ದೊರೆಯುವುದಿಲ್ಲ.

ಮದ್ರಾಸಿನ Parry and Coಯ ಇತಿಹಾಸ ಬರೆದ Hilton Brown ಮಹಾಶಯ, ೧೭೯೯ರಲ್ಲಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ ಬ್ರಿಟಿಷ್ ಸೈನಿಕರು ಕಾಫಿ ಕುಡಿಯುತ್ತಿದ್ದರು ಎಂದಿದ್ದಾನೆ. ಚಿಕ್ಕಮಗಳೂರಿನ ಬಾಬಾಬುಡನ್‌ಗಿರಿಯ ಸುತ್ತಲಿನ ಕಾಫಿ ಬೆಳೆ ಆಗ ಮೈಸೂರು ದರ್ಬಾರಿನ ಸ್ವಾಮಿತ್ವದಲ್ಲಿತ್ತು.

ಪ್ಯಾರಿ ಕಂಪನಿ ಚಹಾ ಮತ್ತು ಕಾಫಿ ತೋಟಗಳನ್ನು ಹೊಂದಿದ್ದು, ಈ ವಸ್ತುಗಳ ನಿರ್ಯಾತದ ವ್ಯವಹಾರದಲ್ಲಿ ತೊಡಗಿತ್ತು. (Hilton Brown: Parrys of Madras. Parry Co. Madras (ಪುಟ ೬೩). ಈಗ ಅಸ್ತಿತ್ವದಲ್ಲಿರದ ಸಣ್ಣ ಕಂಪನಿಗಳು ಚಹಾ-ಕಾಫಿಯ ಮಾರಾಟದ ವ್ಯವಸ್ಥೆಯನ್ನು ಮಾಡುತ್ತಿದ್ದಿರಬಹುದು.

ಕಾಫಿ-ಚಹಾಗಳ ಬಗ್ಗೆ ಯಾವುದೇ ಗಾದೆಗಳು ಇಲ್ಲದಿರಲು ಕಾರಣವೇನು? ಅವುಗಳು ಆಗ ಜನಸಾಮಾನ್ಯರ ದಿನನಿತ್ಯದ ಉಪಯೋಗದ ವಸ್ತುಗಳಾಗಿರಲಿಲ್ಲವೆ? ನಮ್ಮ ಉಡುಪಿಭಟ್ಟರು ಮತ್ತು ಪಾಲ್ಘಾಟ್ ಅಯ್ಯರುಗಳು ಈ ಶತಮಾನದ ಆದಿಯಿಂದ ಅವುಗಳ ಜನಪ್ರಿಯತೆಯನ್ನು ಹೆಚ್ಚಿಸಿರುವುದಂತೂ ನಿಶ್ಚಿತ.

ಸಾಮಾನ್ಯವಾಗಿ ನಾವು ಉತ್ತರಭಾರತದಿಂದ ಬಂದಿರಬಹುದೆಂದು ಪರಿಗಣಿಸುವ ಎರಡು ತಿನಿಸುಗಳ ಪ್ರಸ್ತಾವನೆ ಈ ಕೋಶದಲ್ಲಿದೆ- ಪೂರಿ ಮತ್ತು ಪೇಡ. ಇವುಗಳು ಯಾವಾಗ ಇಲ್ಲಿಗೆ ವಲಸೆ ಬಂದವು ಎನ್ನುವುದನ್ನು ತಿಳಿದುಕೊಳ್ಳುವುದು ಕಷ್ಟವಾದರೂ ನೂರು ವರ್ಷಗಳಿಂದ ಅವು ಕನ್ನಡ ನಾಡಿನಲ್ಲಿ ಜನಪ್ರಿಯವಾಗಿ ಬೆಳೆದಿವೆಯೆನ್ನುವುದರಲ್ಲಿ ಸಂಶಯವಿಲ್ಲ. ಪುರಿ, ಪೂರಿಕೆ-ಊರಿಗೆ- a sort of unleavened cake fried in oil or ghee (ಪುಟ ೧೦೦೫) ಪೂರಿಕೆಯ ತದ್ಭವ ಪೂರಿಗೆ.

ಪೇಡ-ಪೇಡೆ- a sweetmeat composed of milk and sugar (ಪುಟ ೧೦೧೫). ಧಾರವಾಡದ ಪೇಢೆ ನೂರು ವರ್ಷಗಳಿಂದ ಪ್ರಸಿದ್ಧಿಪಡೆದಿರುವ ವಿಚಾರ ಸರ್ವವಿದಿತ. ಕಿಟ್ಟೆಲ್ಲರು ಈ ಬಗ್ಗೆ ಹೆಚ್ಚಿನ ವಿವರಣೆಯನ್ನು ನೀಡಿಲ್ಲ.

## ಉಡುಗೆ-ತೊಡುಗೆಗಳು

ಉಡುಗೆ-ತೊಡುಗೆಗಳಿಗೆ ಸಂಬಂಧಿಸಿದ ಶಬ್ದಗಳ ಆಯ್ಕೆಯಲ್ಲಿ ಸಂಸ್ಕೃತ ಶಬ್ದಗಳನ್ನು ದೂರ ಇಡುವ ಪ್ರಯತ್ನವನ್ನು ನಾನಿಲ್ಲಿಮಾಡಿದ್ದೇನೆ. ಕಿಟ್ಟೆಲ್ಲರು 'ಅಂಶುಕ' (an upper garment)ದಿಂದ ಆರಂಭಿಸಿ ಅನೇಕ ಸಂಸ್ಕೃತ ಶಬ್ದಗಳ ಅರ್ಥವಿವರಣೆಯನ್ನು ಕೊಟ್ಟಿದ್ದಾರೆ. ಕರ್ನಾಟಕದಲ್ಲಿ ಪ್ರಚಲಿತವಾಗಿದ್ದಿರಬಹುದಾದ ಕನ್ನಡ ಶಬ್ದಗಳನ್ನು ಮಾತ್ರ ಈ ಕೆಳಗಿನ ಪಟ್ಟಿಯಲ್ಲಿ ಸೇರಿಸಿದ್ದೇನೆ. ಅವುಗಳನ್ನು ವಿಶ್ಲೇಷಿಸುವ ಮೊದಲು ಬಟ್ಟೆ ಹೊಲಿಯುವ ಸಿಂಪಿಗನ ಮತ್ತು ಬಟ್ಟೆ ಒಗೆಯುವ ಅಗಸನ ಬಗ್ಗೆ ಒಂದಿಷ್ಟು ವಿವೇಚನೆ ಮಾಡಬಹುದು.

ಸಿಮ್ಪಿಗ-ಚಿಪ್ಪಿಗ- a tailor- ಹೊಲಿಯುವವನು- ಎಂದಿಷ್ಟೇ ವಿವರಣೆ ಕೊಟ್ಟು ಬಳಿಕ ಸಿಂಪಿಗನ ನಡವಳಿಕೆಯ ಬಗ್ಗೆ ಜನಜನಿತವಾದ ಅಭಿಪ್ರಾಯನನ್ನು ಕಿಟ್ಟೆಲ್ಲರು ಸರ್ವಜ್ಞ ವಚನವನ್ನು ಉದಾಹರಿಸುವ ಮೂಲಕ ವ್ಯಕ್ತಪಡಿಸಿದ್ದಾರೆ: "ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಮ್ಪಿಗ ಬಲ್ಲ, ಕಳ್ಳರನು ಬಲ್ಲ ತಳವಾರ, ಬಣಜಿಗನು ಎಲ್ಲವನು ಬಲ್ಲ" (ಪುಟ ೧೫೫೮) ಹೊಲಿಯುವ ಕೆಲಸ ಆಗ ಸಮಾಜದ ಒಂದು ವರ್ಗಕ್ಕೆ ಸೀಮಿತವಾದ ಉದ್ಯೋಗವಾಗಿತ್ತು. ಸಮಯಕ್ಕೆ ಸರಿಯಾಗಿ ಉಡುಪುಗಳನ್ನು ಹೊಲಿದು ಕೊಡಲಾರದೆ ಏನಾದರೂ ಸುಳ್ಳು ಹೇಳುವುದು ಇವರ ಜಾಯಮಾನವಾಗಿರಬೇಕು- ಈಗ ಈ ವೃತ್ತಿ ಜಾತಿ ಚೌಕಟ್ಟಿಗೆ ಸೀಮಿತವಾಗಿಲ್ಲ. ಎಲ್ಲಾ ವರ್ಗದ ಜನರನ್ನು ಈ ಉದ್ಯೋಗದಲ್ಲಿ ಕಾಣಬಹುದು. ಆದರೆ ನಿಗದಿತ ವೇಳೆಯೊಳಗೆ ಉಡುಪನ್ನು ಹೊಲಿದುಕೊಡದಿರುವ ಪದ್ಧತಿ ಸರ್ವಸಾಮಾನ್ಯವಾಗಿ ಈಗಲೂ ಇದೆ.

ಬಟ್ಟೆಬರೆಗಳನ್ನು ಒಗೆಯಲು ಅಗಸ, ಅಗಸಗಿತ್ತಿಯರು ಇದ್ದರು. (ಪುಟ ೧೧) ದೋಬಿಯೂ ಇದ್ದ. (ಪುಟ ೮೧೨), ಮಡಿವಾಳ, ಮಡಿವಳ ಮತ್ತು ಮಡಿವಾಳಗಿತ್ತಿಯೂ. ಮಡಿವಾಳಿಯೂ ಇದ್ದರು (ಪುಟ ೧೯೯೧). "ಬಟ್ಟೆ ಮಾಸಿದರೆ ಅಗಸನಿಗೆ, ನಾಲಗೆ ಮಾಸಿದರೆ ಕೆರಕ್ಕೆ" ಎಂಬ ಗಾದೆ ಆಗಲೇ ಇತ್ತು (ಪುಟ ೧೦೬೮). ಈ

ವೃತ್ತಿಯನ್ನು ಅವಲಂಬಿಸಿಕೊಂಡಿದ್ದ ಒಂದು ವರ್ಗ ಹಳ್ಳಿಯಲ್ಲೂ ಪಟ್ಟಣದಲ್ಲೂ ನೆಲೆನಿಂತಿರುವುದಕ್ಕೆ ಆಧಾರಗಳಿವೆ. ಆದರೆ ಒಗೆಯುವ ಕೆಲಸ ಎಷ್ಟು ವ್ಯವಸ್ಥಿತವಾಗಿ ನಡೆದಿತ್ತು ಎನ್ನಲು ಸಾಕಷ್ಟು ಪುರಾವೆಗಳು ಇರುವಂತೆ ಕಾಣುವುದಿಲ್ಲ. ಈ ಜಿಜ್ಞಾಸೆಗೆ ಕಾರಣವೇನೆಂದರೆ ಆಗಿನ ಕಾಲದಲ್ಲಿ 'ಇಸ್ತ್ರಿ'ಯು ಅಸ್ತಿತ್ವದಲ್ಲಿ ಇದ್ದುದು. ಕಿಟ್ಟೆಲ್ಲರು ಇಸ್ತ್ರಿಗೆ 'a smoothing iron" ಎಂದು ಮಾತ್ರ ಹೇಳಿದ್ದಾರೆ (ಪುಟ ೨೦೨). ಬಟ್ಟೆಗೆ ಇಸ್ತ್ರಿ ಹಾಕುವ ಪದ್ಧತಿ ಆಗ ಜಾರಿಯಲ್ಲಿದ್ದಿರಬೇಕು. ಅಗಸನೆ ಬಟ್ಟೆ ಒಗೆದು ಇಸ್ತ್ರಿ ಹಾಕಿ ಕೊಡುತ್ತಿದ್ದನೆ? ಇಸ್ತ್ರಿ ಪೆಟ್ಟಿಗೆಯ ತಯಾರಿಕೆ ಎಲ್ಲಿ ಆಗುತ್ತಿತ್ತು? ನಮ್ಮ ಕಮ್ಮಾರರು ಇದನ್ನು ಸಿದ್ಧಪಡಿಸುತ್ತಿದ್ದರೆ? ಅಥವಾ ಇದನ್ನು ಹೊರಗಿನಿಂದ ಆಮದು ಮಾಡಿಕೊಳ್ಳ ಬೇಕಾಗುತ್ತಿತ್ತೆ? ಎಂಬಿತ್ಯಾದಿಯಾದ ಪ್ರಶ್ನೆಗಳಿಗೆ ಸುಲಭವಾಗಿ ಉತ್ತರ ದೊರಕುವುದಿಲ್ಲ. ಅಗಸನ ಕುರಿತು ಕಿಟ್ಟೆಲ್ಲರು ಆಯ್ದ ಒಂದು ಗಾದೆ ಹೀಗಿದೆ: "ಅಗಸನ ಶವ ಹೊರಗೆ ತೆಗೆದ ಮೇಲೆ ಗುಟ್ಟು ಸಿಕ್ಕೀತೇ?"

ಗಂಡಸರ ಉಡುಗೆತೊಡುಗೆಗಳಲ್ಲಿ ಈಗ ಪ್ರಚಲಿತವಿರುವ ಕೆಲವು ಉಡುಗೆಗಳು ಆಗಲೂ ಇದ್ದವು. ದೋತ್ರ-ದೋತರ- a garment of males worn around the waist. ದೋತ್ರದ ಉದ್ದಳತೆ ಎಷ್ಟಿತ್ತು ಎಂದು ಕಿಟ್ಟೆಲ್ಲರು ತಿಳಿಸುವು ದಿಲ್ಲ. ಆದರೆ 'ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೆ?" ಎಂಬ ಗಾದೆಯನ್ನು ಬಳಸಿದ್ದಾರೆ. ದೋತ್ರದ ಒರಿಮೆಯನ್ನು ಸಾರುವ ಇನ್ನೊಂದು ಗಾದೆ ಹೀಗಿದೆ: "ಚಿಕ್ಕಪ್ಪನಾದರೆ ಮನೆಗೆ ಬಂದು ಕಾಲು ಒಡಿದೇನು. ಅಪರಾಧಕ್ಕೆ ದೋತ್ರಾ ಕೊಡ ಬೇಕು (ಪುಟ ೮೧೨).

ದೋತ್ರಗಳನ್ನು ಸಿದ್ಧಪಡಿಸಲು ನೇಯ್ಗೆ ಯವರೂ ಇದ್ದರು. (ಪುಟ ೯೦೪). ಮಗ್ಗಗಳೂ ಇದ್ದವು (ಪುಟ ೧೧೮೪). ನೇಯ್ಗೆಯ ಮಗ್ಗ ಗಳನ್ನು ಸ್ಥಾಪಿಸುವ ಕಾರ್ಯದಲ್ಲಿ ಕ್ರೈಸ್ತಮಿಶನರಿ ಗಳು ವಹಿಸಿದ ಪಾತ್ರವನ್ನು ಸ್ಮರಿಸಬಹುದು. ದೋತರಗಳನ್ನು ನಮ್ಮ ನೇಯ್ಗೆಯವರೇ ತಯಾರಿ ಸುತ್ತಿದ್ದಿರಬಹುದು. ಬೊಂಬಾಯಿಯಲ್ಲಿ ಸ್ಥಾಪನೆ ಗೊಂಡ ಬಟ್ಟೆ ಗಿರಣಿಗಳಿಂದಲೂ ಧೋತರಗಳು




"ಉನ್ನತ ಮಟ್ಟದ ದಾಂಪತ್ಯಕ್ಕೆ ನಮ್ಮದು ಸರಿಜೋಡಿ, ಅಲ್ವೆ?"

ಸಿದ್ಧವಾಗುತ್ತಿರಬಹುದು. ಲುಂಗಿಯೂ ಪ್ರಚಲಿತ ವಾಗಿತ್ತು (ಪುಟ ೧೩೬೨). ಈಗಿರುವಂತೆ ವಿವಿಧ ಬಣ್ಣದ ಲುಂಗಿಗಳು ಆಗ ತಯಾರಾಗುತ್ತಿದ್ದವೋ ಇಲ್ಲವೋ ಎಂದು ಹೇಳುವುದು ಕಷ್ಟ. ಮುಣ್ಣೆ- ಅಂದರೆ a short cloth used as turban or as undergirth cloth (ಪುಟ ೧೨೬೫). ಮುಂಡು ಈಗ ಸಾಮಾನ್ಯವಾಗಿ ಮಧ್ಯಮವರ್ಗದ ಜನರ ದಿನನಿತ್ಯದ ಉಡುಗೆಯಾಗಿದೆ. ಚಲ್ಲಣ- ಚಣಕ, ಚಡ್ಡಿ-ಚೊಣ್ಣ- drawers or breeches of different length ಪಾದಪರಿಯನ್ತ ತೊಟ್ಟ ಚಲ್ಲಣಂ (ಪುಟ ೫೮೮). ಪಾಯಿಜಾಮೆ- Trousers ಒಂದಿಯಲ್ಲಿ ಪಾಯಿಜಾಮ. (ಪುಟ ೯೭೩). ಇಜಾರ-ಓಜಾರ- ಕಾಲ್ಕುಪ್ಪಸ (ಪುಟ ೧೮೩) ಕಿಟ್ಟೆಲ್ ಸಾಹೇಬರು ಈ ಮೂರೂ ವಿಧದ ಉಡುಗೆಗಳನ್ನು ಬಹಳ ಚುಟುಕಾಗಿ ವಿವ

ರಿಸಿದ್ದಾರಾದರೂ ಪೆಚ್ಚಿನ ವಿವರಣೆ ಕೊಟ್ಟಿಲ್ಲ. ಇಜಾರಿನ ಬಗ್ಗೆ ಒಂದು ವಿಲಕ್ಷಣವಾದ ಗಾದೆ ಮಾತನ್ನು ಮಾತ್ರ ಬೇರೊಂದು ಕಡೆ ಸೇರಿಸಿದ್ದಾರೆ. ಅದು ಹೀಗಿದೆ: ವಿಜಾಪುರದಲ್ಲಿ ಇಜಾರದವರೆಷ್ಟು ಜನ? ಅಂಪಪಾಗೆ. ಇದರ ತಾತ್ಪರ್ಯ ವಿಜಾಪುರ ದಲ್ಲಿ ಇಜಾರ ಹಾಕುವವರು ಬಹಳ ಅಲ್ಪ ಸಂಖ್ಯಾತರೆ? ಅಥವಾ ಎಲ್ಲರೂ ಅದನ್ನು ಧರಿಸು ವವರೇ ಆಗಿದ್ದರೆ? ಎನ್ನುವುದು ಸ್ಪಷ್ಟವಾಗುವು ದಿಲ್ಲ.

'ಅಂಗಿ' ತೊಡುವವರು ನಮ್ಮ ಜನ. ಆಗಲೂ ಇದು ಸಾರ್ವತ್ರಿಕ ಉಡುಗೆಯಾಗಿತ್ತು ಎನ್ನಲು ಅಂಗಿಯ ಬಗೆಗೆ ಪ್ರಚಲಿತವಿದ್ದ ಹಲವಾರು ಗಾದೆ ಗಳನ್ನು ಈ ಕೋಶದಲ್ಲಿ ಕಾಣಬಹುದು. ಅಂಗಿಯ ಆಕಾರದ ವಿಚಾರ ದಲ್ಲಿ ಕಿಟ್ಟೆಲ್ಲರು ಮೌನ ತಾಳಿದ್ದರೂ, "ಅಂಗನೆ ಬರುವಾಗ ಅಂಗಿ ತೊಡ ಬೇಡವೆ?", "ಅಂಗಿ ಕೊಟ್ಟು, ಬಂಗಿ ಸೇದಿ ಮಂಗನಾದೆ." "ಅಂಗಿಗೆ ಇಲ್ಲದಿದ್ದರೆ ನುಂಗ ಲಿಕ್ಕೆ ಬೇಡವೇ?" ಮೊದಲಾದ ಅರ್ಥಗರ್ಭಿತ ಗಾದೆಗಳನ್ನು ಸೇರಿಸಿ ದ್ದಾರೆ (ಪುಟ ೨೦).

ಗಂಡಸರು ತಲೆಯ ಮೇಲೆ ಧರಿಸುವ ಉಡುಗೆಗಳು ಇವು:

ಪೇಟ- ಪೇಟಣ- a kind of turban (ಪುಟ ೧೦೧೫)

ಮುಂಡಾಸು- ಮುಂಡಾಸ (ಪುಟ ೧೨೬೫),

ಪಗಡಿ- turban (ಪುಟ ೯೧೮),

ಪಾಗು- a kind of turban (ಪುಟ ೯೬೯),

ಪಚ್ಚಟೊಪ್ಪಿಗೆ- a green hat (ಪುಟ ೯೨೦)

'ಸಣ್ಣ ತಲೆಗೆ ದೊಡ್ಡ ಮುಂಡಾಸು' ಎನ್ನುವುದು ಬಿಟ್ಟರೆ, ಕಿಟ್ಟೆ ಲ್ಲರು ಇವುಗಳ ಬಗ್ಗೆ ಏನನ್ನೂ ತಿಳಿಸಿಲ್ಲ. ಶಾಲು-ಷಾಲು- ಶಾಲುವೆ- a woolen shawl ಪ್ರಚಲಿತವಾಗಿತ್ತು. ಗೃಹಸ್ಥರಾದವರು, ಹಿರಿಯರಾದವರು ಮಾತ್ರ ಶಾಲು ಹೊದೆಯುತ್ತಿದ್ದಿರಬೇಕು. ಶಾಲಿನ ಕುರಿತಾದ ಗಾದೆ ಮಾತು- "ಶಾಲು ಹೊದ್ದವನಾದರೂ ಹಾಲು ಬಿಟ್ಟಾನೆ?" (ಪುಟ ೧೪೫೩).

ಸ್ತ್ರೀಯರ ಉಡುಗೆತೊಡುಗೆಗಳ ಪೈಕಿ ಹಲವನ್ನು ಕಿಟ್ಟೆಲ್ಲರ ನಿಘಂಟಿನಿಂದ ಸುಲಭವಾಗಿ ಆರಿಸಬಹುದು. ಅವುಗಳಲ್ಲಿ 'ಸೀರೆ' ಬಹಳ ಸಾಮಾನ್ಯವಾದುದು. ಇದರಲ್ಲಿ ಹಲವಾರು ವಿಧಗಳು. ಹತ್ತಿ ಯಿಂದ ಆದ ಸೀರೆ- ಕಾರ್ಪಾಸ, ಬಾದರ. ಕಾರ್ಪಾಸ ಮತ್ತು ಬಾದರವೆಂಬ ಎರಡು ಫಲದಿಂದ ಆದ ನೂಲ ಸೀರೆ- ಫಾಲ. ತೆಗ ಳೆಯ ಹುಳು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೇಯ್ದ ಸೀರೆ- ಕೌತೇಯ. ಮೃಗಗಳ ರೋಮಗಳಿಂದಾದ ಸೀರೆ- ರಾಂಕವ. ಇವುಗಳು ಕಿಟ್ಟೆಲ್ಲರ ಕಾಲದ ಸೀರೆಗಳಿಗಿಂತಲೂ ಹಿಂದಿನ ಕಾಲ ದವುಗಳಿರಬೇಕು. ಸೀರೆಯ ಗಾದೆಗಳ ಪೈಕಿ ಕೆಲವು ಬಹಳ ಸ್ವಾರಸ್ಯ ಕರವಾಗಿವೆ. "ಸೀರೆ ಇಲ್ಲವೆನ್ನು ಹಾಳೆ ಉಟ್ಟುಕೊಂಡಹಾಗೆ", "ನೆರೆ ಮನೆ ಜಕಣೆಗೆ ತವರಮನೆಯೇ ಸೀರೆಯೋ?", "ಸೆರೇ ವರಹ ಕೊಟ್ಟರೂ ಸೀರೆ ವ್ಯಾಪಾರ ಬೇಡ." ಸೀರೆ ವ್ಯಾಪಾರ ಮಾಡು ವವನು 'ದೂಸಿಗ', ಸೀರೆ ವ್ಯಾಪಾರ ಆತನಿಗೆ ಯಾಕೆ ಬೇಡ ವೆನಿಸುವುದೋ ತಿಳಿಯದು (ಪುಟ ೧೫೬೨).

ಸೀರೆಯ ಜೊತೆಗೆ ಸೀರೆಯ ಹೊರೆವ ಚೂರ್ಣ-ಪಿಷ್ಟಾತದ ಉಲ್ಲೇಖವಿದೆ. ಈ ಚೂರ್ಣ ಪಿಷ್ಟ- starch ಇರಬಹುದೆ? ಅದು ಹೌದಾದರೆ ಪಿಷ್ಟವನ್ನು ಹಾಕಿ ಇಸ್ತ್ರಿ ಹಾಕುವ ಕ್ರಮ ಆಗಲೂ ಇದ್ದಿರಬಹುದು ಎನಿಸುತ್ತದೆ.

ಪಟ್ಟೇ ಸೀರೆ- a precious silk sari ಬೇರೆಯಿತ್ತು. ಇದು ಶ್ರೀಮಂತ ವರ್ಗದ ಹೆಂಗಸರಿಗೆ ಮೀಸಲಾಗಿರಬೇಕು. ಇಲ್ಲಿ ಕಿಟ್ಟೆಲ್ಲರು ಬಳಸಿದ ಗಾದೆ- "ಪಟ್ಟೆ ಸೀರೆಯುಟ್ಟರೂ ಮೊಟ್ಟೆ ಹೊರು ವುದು ತಪ್ಪಲಿಲ್ಲ (ಪುಟ ೯೨೮).

ಕುಪ್ಪಸ- ಕುಪ್ಸ ಇತ್ತು. ಕುಬುಸ- ಕೂರ್ಪಾಸದ ತದ್ಭವ (ಪುಟ ೪೪೨). ಪಚ್ಚಗುಪ್ಪಸ- ಹಳದಿ ಬಣ್ಣದ ಕುಪ್ಪಸವೂ ಇತ್ತು (ಪುಟ ೯೨೦) ಆದರೆ ಇವುಗಳ ವಿವರಣೆ ದೊರಕುವುದಿಲ್ಲ. 'ರವಿಕೆ' ನಿಘಂಟಿನಲ್ಲಿ ಇಲ್ಲ.

'ಚಂಡಾತಕ' ಎಂಬ ಉಡುಗೆ ಒಂದಿತ್ತು. ಅದನ್ನು ಕಿಟ್ಟೆಲ್ಲರು a short pettycoat ಎಂದು ಅರ್ಥೈಸಿದರೂ ಮುಂದೆ ಅದನ್ನು 'ವರಯುವತಿಯರು ಅರ್ಧತೊಡೆವರಿಯಂತರ ಉಡುವಂಥ ಸೀರೆ' ಎಂದು ಗುರುತಿಸಿದ್ದಾರೆ (ಪುಟ ೫೮೮).

'ಲಂಗ'ವನ್ನು ವಿವರಿಸುತ್ತಾ ಅದು- a skirt

worn by Mohammedan and certain Hindu females ಎಂದಿದ್ದಾರೆ. ಹಾಗಾದರೆ ಈ ಉಡುಗೆಯನ್ನು ಆ ಕಾಲದಲ್ಲಿ ಎಲ್ಲಾ ವರ್ಗಗಳ ಸ್ತ್ರೀಯರು ಉಪಯೋಗಿಸುತ್ತಿರಲಿಲ್ಲವೆಂದು ಭಾಸವಾಗುತ್ತದೆ.

'ಪತ್ತಲ'- a lower garment of females ಮರಾಠಿಯಲ್ಲಿ ಪಾತಳ (ಪುಟ ೯೩೪).

'ಜಾಮಾರು'- a long cloth without any coloured border chiefly worn by widows (ಪುಟ ೬೪೭) ಬಣ್ಣದ ಅಂಚು ಇಲ್ಲದ ಈ ವಸ್ತ್ರ ಬಿಳಿಬಣ್ಣದ್ದು ಇರಬಹುದೇನೋ?

ಗಂಡಸರೂ ಹೆಂಗಸರೂ ಉಪಯೋಗಿಸುತ್ತಿದ್ದ ಎರಡು ವಸ್ತ್ರಗಳು:

ಬಹಿರ್ವಾಸ- ಬೈರವಾಸ- an outer or upper garment (ಪುಟ ೧೧೯೪).

ರುಮಾಲು- ರುಮಾಲು- ರೂಮಾಲು- a hand kerchief, a towel (ಪುಟ ೧೩೪೩). ಇದನ್ನು ಕೈಯ್ಯಟ್ಟು ಎಂದೂ ಕರೆಯುತ್ತಿದ್ದರು (ಪುಟ ೪೭೦).

ರೇಷ್ಮೆ ರುಮಾಲು ಇತ್ತೆ? ಅಥವಾ ಆಗ ಹತ್ತಿಯ ನೂಲಿನ ಬಣ್ಣಬಣ್ಣದ ರುಮಾಲು ಜನಪ್ರಿಯವಾಗಿತ್ತೆ? ಎನ್ನುವುದು ತಿಳಿಯದು.

ಪ್ರಾಯಶಃ ವಿದೇಶದಿಂದ ಬಂದ ಎರಡು ವಸ್ತುಗಳ ಪ್ರಸ್ತಾವನೆ ನಿಘಂಟಿನಲ್ಲಿದೆ. ಆದರೆ ಕಿಟ್ಟೆಲ್ಲರು ಆ ಬಗ್ಗೆ ಏನನ್ನೂ ಹೇಳುವುದಿಲ್ಲ.

ಮ್ಯೋಜಾ- a stocking, a sock, a glove (ಪುಟ ೧೩೭೦). ಇನ್ನೊಂದು ಬನಿಯನ್- a waistcoat with short sleeves (ಪುಟ ೧೦೭೬). ಮೋಜಾ ವಿದೇಶೀಯರೊಂದಿಗೆ ಬಂದಿರಬಹುದು: ಶೀತವಲಯದಲ್ಲಿ ಕಾಲನ್ನೂ ಕೈಯನ್ನೂ ಬೆಚ್ಚಗಿಡಲು ಮೋಜ ಧರಿಸುವುದು ಅಗತ್ಯವಾಗುತ್ತದೆ. ಅಂತೆಯೇ ಅಂಗಿಯೊಳಗೆ ಬನಿಯನ್ ಹಾಕುವ ಅನಿವಾರ್ಯತೆ ಇರುತ್ತದೆ. ಇವೆರಡೂ ವಿದೇಶದಿಂದಲೇ ಬಂದಿರುವುದು ಎಂದು ತಿಳಿಯಲು ಖಚಿತವಾದ ಆಧಾರಗಳು ಸಿಗುವುದಿಲ್ಲ. ಆದರೆ ಬಾಸೆಲ್ ಮಿಶನರಿಯವರ ಮುಂದಾಳತ್ವದಲ್ಲಿ ಮಂಗಳೂರಿನಲ್ಲಿ ಬನಿಯನ್ ತಯಾರಿಸುವ Commonwealth Trust Co. ಸ್ಥಾಪನೆಯಾದುದನ್ನು ಇಲ್ಲಿ ನೆನೆಯಬಹುದು.

ಹೀಗೆಯೇ ಕಿಟ್ಟೆಲ್ಲರ ನಿಘಂಟಿನಿಂದ ಆ ಕಾಲದಲ್ಲಿ ಬಳಕೆಯಲ್ಲಿದ್ದ ನಿತ್ಯೋಪಯೋಗಿ ವಸ್ತುಗಳ, ಸಲಕರಣೆಗಳ, ವಾಹನ ಸೌಕರ್ಯಗಳ ಮತ್ತು ಸಾಮಾಜಿಕ ಪದ್ಧತಿಗಳಿಗೆ ಸಂಬಂಧಿಸಿದ ಶಬ್ದಗಳನ್ನು ಆರಿಸಿ ಸಂಶೋಧನೆಯನ್ನು ನಡೆಸಬಹುದು. ಕಿಟ್ಟೆಲ್ಲರ ನಿಘಂಟು ಕೇವಲ ಸಾಹಿತಿಗಳ ಮತ್ತು ಭಾಷಾಪಂಡಿತರ ಅವಶ್ಯಕತೆಗೆ ಸೀಮಿತವಾದ ಗ್ರಂಥವಲ್ಲ. ಶತಮಾನ ಕಳೆದ ಈ ಪುಸ್ತಕ, ನಮ್ಮ ನಾಡಿನ ಸಾಮಾಜಿಕ ಜೀವನದ ತುಣುಕುಗಳ ಮೇಲೆ ಪ್ರಕಾಶ ಬೀರಬಲ್ಲದು. ಸಮಾಜಶಾಸ್ತ್ರಜ್ಞರು ಈ ದಿಸೆಯಲ್ಲಿ ಕಾರ್ಯೋನ್ಮುಖರಾಗಬೇಕು. ನಿಘಂಟಿನ ಶತಮಾನೋತ್ಸವವನ್ನು ಆಚರಿಸುವ ಈ ವರ್ಷದಲ್ಲಿ ಕಿಟ್ಟೆಲ್ಲರ ದುಡಿಮೆಯ ಮತ್ತು ಅವರ ಕೃತಿಯ ಅಧ್ಯಯನವು ವಿಭಿನ್ನ ದೃಷ್ಟಿಕೋನಗಳಿಂದಲೂ ನಡೆಯಲಿ ಎಂದು ಆಶಿಸುತ್ತೇನೆ.

A Kannada-English Dictionary- Rev. F. Kittel. Published by Asian Educational Services, New-Delhi, 1982, Preface, Page VIII.

ಈ ಲೇಖನ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದಲ್ಲಿ ಅಕ್ಟೋಬರ ೨, ೧೯೯೪ರಂದು ಜರುಗಿದ "ಕನ್ನಡಕ್ಕೆ ಕಿಟ್ಟೆಲ್ಲರ ಕೊಡುಗೆ" ಎಂಬ ವಿಚಾರದ ಸಂಕಿರಣದಲ್ಲಿ ಮಾಡಿದ ಅಧ್ಯಕ್ಷ ಭಾಷಣದ ಸಾರಾಂಶ. ●

## ನಮ್ಮ ಕೈ

ಅನೈಚ್ಛಿಕ ಕ್ರಿಯೆಗಳನ್ನು ಹೊರತುಪಡಿಸಿದರೆ ನಮ್ಮ ಅಂಗಾಂಗಗಳ ಪೈಕಿ ಅತಿ ಹೆಚ್ಚು ಚಲನಶೀಲವಾದುದೆಂದರೆ ಕೈ. ಸರಾಸರಿ ಜೀವಿತಾವಧಿಯಲ್ಲಿ ಮನುಷ್ಯನ ಕೈ ಬೆರಳುಗಳು ಏನಿಲ್ಲೆಂದರೂ ೨೫ ದಶಲಕ್ಷ ಬಾರಿ ಮಡಚಿಕೊಂಡಿರುತ್ತವೆ ಮತ್ತು ತೆರೆದುಕೊಂಡಿರುತ್ತವೆ. 'ಅಯ್ಯಯ್ಯೋ ನನ್ನ ಕೈಲಾಗೋಲ್ಲಪ್ಪ' ಎಂದು ಅವರಿವರು ಅನ್ನುವುದು ಇದಕ್ಕೇ ಇರಬೇಕು.

## ವಿಜ್ಞಾನಿಗಳು ಈಗಾಗಲೇ ಕೆಲಮಟ್ಟಿಗೆ ಯಶಸ್ಸನ್ನು ಸಂಪಾದಿಸಿಯೂ ಇದ್ದಾರೆ

ಯಾವ ಕೆಲಸವನ್ನಾದರೂ ಸರಿಯಾಗಿ ಯೋಚಿಸಿಯೇ ಮಾಡಬೇಕು: ದೇವರಲ್ಲಿ ವರ ಕೇಳಿಕೊಳ್ಳುವಾಗಲೂ ಸರಿಯಾಗಿ, ಅದರಿಂದ ಉಂಟಾಗಬಹುದಾದ ಸಾಧಕ-ಬಾಧಕಗಳನ್ನು ಯೋಚಿಸಿಯೇ ಕೇಳಿಕೊಳ್ಳಬೇಕು; ಇಲ್ಲದಿದ್ದರೆ ತೊಂದರೆ ತಪ್ಪಿದ್ದಲ್ಲ ಎಂಬುದನ್ನು ಬಿಂಬಿಸುವ ಕಥೆ ಗ್ರೀಕ್ ಪುರಾಣದಲ್ಲಿ ಬರುತ್ತದೆ. ಅದು ಹೀಗೆ:

ಉಷಃಕಾಲದ ದೇವತೆಯಾದ ಈಯೋಸ್ ಟಿಥೋನಸ್ ಎನ್ನುವವನಲ್ಲಿ ಅನುರಕ್ತಳಾದಳು. ಅನುರಕ್ತಳಾದದ್ದೇ ತಡ, ಅವನನ್ನು ತನ್ನ ಸ್ವರ್ಣ ರಥದಲ್ಲಿ ಕೂಡಿಸಿಕೊಂಡು ದೇವಾಧಿದೇವತೆಗಳ ಒಡೆಯನಾದ ಝೂಸ್‌ನ ಬಳಿಗೆ ಕರೆದುಕೊಂಡು ಹೋಗಿ, ತಾನವನ ಮೋಹಪಾಶದಲ್ಲಿ ಬಿದ್ದಿರುವುದಾಗಿಯೂ ಆದ್ದರಿಂದ ಅವನನ್ನು ವರಿಸಲು ನಿಶ್ಚಯಿಸಿರುವುದಾಗಿಯೂ ಹೇಳಿ ಅದಕ್ಕಾಗಿ ಟಿಥೋನಸ್‌ನಿಗೆ ಅಮರತ್ವವನ್ನು ದಯಪಾಲಿಸಬೇಕೆಂದು ಕೇಳಿಕೊಂಡಳು ಝೂಸ್ ಆಗಿಂದಾಗ್ಗೆ 'ತಥಾಸ್ತು' ಅಂದ. ಈಯೋಸ್ ಕೇಳಿಕೊಂಡಿದ್ದು ಅಮರತ್ವವನ್ನೇ ಹೊರತು ಶಾಶ್ವತ ಯೌವನವನ್ನಲ್ಲವಲ್ಲ. ಹೀಗಾಗಿ ಅಲ್ಲಿಂದಲೇ ಶುರುವಾಯಿತು ತೊಂದರೆ. ದಿನದಿಂದ ದಿನಕ್ಕೆ ಟಿಥೋನಸ್ ಸೊರಗುತ್ತಾ ಹೋದ. ತಲೆಗೂದಲೆಲ್ಲ ಬಿಳಿಯಾದವು. ಮೈತುಂಬಾ ನಿರಿಗೆಗಳು ಬಿದ್ದವು. ಸ್ವಲ್ಪ ಸಮಯದಲ್ಲೇ ಆತ ಮುಪ್ಪಾನುಮುದುಕನಾದ. ಇತ್ತ ಕಟ್ಟಿಕೊಂಡಿರಲಿಕ್ಕೂ ಆಗದು, ಅತ್ತ ಅವನನ್ನು ಬಿಟ್ಟು ಲೋಕಾಪವಾದವನ್ನು ಎದುರಿಸಲಿಕ್ಕೂ ಆಗದು ಎಂಬಂತಹ ಸ್ಥಿತಿ ಈಯೋಸಳದಾಯಿತು. ಟಿಥೋನಸ್‌ನಂತೂ ವೃದ್ಧಾಪ್ಯದಿಂದ ಹಾಸಿಗೆಯನ್ನೇ ಹಿಡಿದ. ಈಯೋಸಳಿಗೆ ಅವನ ಶುಶ್ರೂಷೆಯನ್ನು ಮಾಡಿ ಮಾಡಿ ಸಾಕಾಗಿ ಕೊನೆಗೆ ಟಿಥೋನಸ್‌ನನ್ನು ಕೋಣೆಯೊಂದರಲ್ಲಿ ಹಾಕಿ ಬೀಗ ಜಡಿದಳು. ಅವಳು ಬಾಗಿಲಿಗೆ ಬೀಗಹಾಕುವುದೇ ತಡ, ಟಿಥೋನಸ್ ಚಿಟ್ಟೆಯಾಗಿ ಮಾರ್ಪಟ್ಟು ಕಿಟಕಿಯ ಮೂಲಕ ಹೊರಗೆ ಹಾರಿ



ಹೋದ.

ಟಿಥೋನಸ್‌ನ ಹಾಗೆ ಅಮರತ್ವವನ್ನು ಸಂಪಾದಿಸಲು ಸಾಧ್ಯವಾಗದಿದ್ದರೂ ಪರವಾ ಇಲ್ಲ, ಎಲ್ಲರೂ ನೂರು- ನೂರೈವತ್ತು ವರ್ಷಗಳಷ್ಟಾದರೂ ಗಟ್ಟಿಯಾಗಿ ಇರುವಹಾಗೆ ವಿಜ್ಞಾನಿಗಳೀಗ ಪ್ರಯತ್ನಿಸುತ್ತಿದ್ದಾರೆ; ಅದರಲ್ಲಿ ಕೆಲಮಟ್ಟಿಗೆ ಯಶಸ್ಸನ್ನೂ ಪಡೆದಿದ್ದಾರೆ.

ಹೀಗೆ ಮುಪ್ಪನ್ನು ಮುಂದೂಡಲು ಪ್ರಯತ್ನಿಸುವವರಲ್ಲಿ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಮೈಕೇಲ್ ರೋಜ್ ಒಂದು ದೊಡ್ಡ ಹೆಸರು. ಹಣ್ಣಿನ ಹುಳುಗಳು (Fruit flies) ಬೇಗ ಬೇಗ ಮರಿ ಹಾಕುತ್ತವೆ; ಅವುಗಳನ್ನು ಬೆಳೆಸಲು ಹೆಚ್ಚು

• ಶ್ರೀಕಾಂತರಾವ್

(ಆಧಾರ: 'ಸ್ಪಾನ್'ನಲ್ಲಿ ರಾಬರ್ಟ್ ಲ್ಯಾಂಗ್-ರೆತ್ ಅವರ ಲೇಖನ)

ಹಣ ಬೇಕಿಲ್ಲ. ಮೇಲಾಗಿ ಅವು ಏನು ಹಾಕಿದರೂ ಅದನ್ನೇ ತಿಂದು ಬೆಳೆಯುತ್ತವೆ ಎಂಬ ಕಾರಣ ದಿಂದ ಮೈಕೇಲ್ ರೋಜ್ ಹಣ್ಣಿನ ಹುಳುಗಳನ್ನು ಆರಿಸಿಕೊಂಡು ಬೆಳೆಸಲು ಆರಂಭಿಸಿದರು. ತಡ ವಾಗಿ ಪ್ರಬುದ್ಧಾವಸ್ಥೆಗೆ ಬರುವ ಹುಳುಗಳನ್ನು ಪ್ರತಿಹಂತದಲ್ಲೂ ಬೇರ್ಪಡಿಸಿ ಅವುಗಳನ್ನೇ ಬೆಳೆ ಸುತ್ತಾ ಇಪ್ಪತ್ತು ವರ್ಷಗಳಲ್ಲಿ ನಾಲ್ಕು ನೂರನೆಯ ತಳಿಯನ್ನು ತಲುಪಿದರು. ಉಳಿದ ತಳಿಗಳಿಗೆ ಹೋಲಿಸಿದರೆ ಈ ತಳಿಯ ಹುಳುಗಳ ಜೀವ ತುಂಬಾ ಗಟ್ಟಿ. ವಾತಾವರಣದ ವೈಪರೀತ್ಯವನ್ನು ತಡೆದುಕೊಳ್ಳಬಲ್ಲವು; ಹೆಚ್ಚು ಕಾಲ ಆಹಾರವಿಲ್ಲದೆ ಇರಬಲ್ಲವು. ದೇಹದಲ್ಲಿ ನಿರ್ಜಲ ಸ್ಥಿತಿಯುಂಟಾ



ದರೆ ಅದೇ ಜಾತಿಯ ಇತರ ಹುಳುಗಳಿಗಿಂತ ಈ ನಿರ್ಜಲಸ್ಥಿತಿಯನ್ನು ಹೆಚ್ಚು ಸಮಯ ತಡೆದುಕೊಳ್ಳ ಬಲ್ಲವು. ಇದೆಲ್ಲಕ್ಕಿಂತ ಮಹತ್ವದ್ದೆಂದರೆ ಇವುಗಳ ಆಯುಷ್ಯ ಉಳಿದ ಹಣ್ಣಿನ ಹುಳುಗಳಿಗಿಂತ ಎರಡು ಪಟ್ಟು ಹೆಚ್ಚು. ಅರ್ಥಾತ್ ತುಲನಾತ್ಮಕ ವಾಗಿ ಮಾನವ ಜೀವಿತಾವಧಿಯ ಲೆಕ್ಕದಲ್ಲಿ ಈ ಹಣ್ಣಿನ ಹುಳುಗಳ ಆಯುಷ್ಯವೀಗ ಇನ್ನೂರು ವರ್ಷಗಳಿಗಿಂತ ಸ್ವಲ್ಪಮಾತ್ರ ಕಡಿಮೆ. ಮುಪ್ಪು ಇವುಗಳನ್ನು ಅಷ್ಟಾಗಿ ಬಾಧಿಸುವುದಿಲ್ಲ. ಇರುವಷ್ಟು ಕಾಲವೂ ಇವು ಗಟ್ಟಿಯಾಗಿಯೇ ಇರಬಲ್ಲವು.

ಇದಕ್ಕೇನು ಕಾರಣ? ಮೈಕೇಲ್ ರೋಜ್ ಪ್ರಯೋಗಗಳನ್ನು ಮುಂದುವರೆಸಿ ಈ ದೀರ್ಘಾ ಯಸ್ಸಿಗೆ ಕಾರಣವಾದ ನೂರಾರು ವಂಶವಾಹಿಗ ಳನ್ನು ಗುರುತಿಸಿಯೇಬಿಟ್ಟರು. ಅವುಗಳಲ್ಲಿ ಮುಖ್ಯ ವಾದವುಗಳನ್ನು ಕಂಡು ಹಿಡಿದು ಅಂತಹ ವಂಶ ವಾಹಿಗಳನ್ನು ಕೃತಕವಾಗಿ ಸೃಷ್ಟಿಸುವಂತಾದರೆ ಮಾನವರ ಆಯುಷ್ಯವನ್ನೂ ಹೆಚ್ಚಿಸಬಹುದು. ಈ ನೂರಾರು ಆಯುಷ್ಯವರ್ಧಕ ವಂಶವಾಹಿಗಳಲ್ಲಿ ಮುಖ್ಯವಾದವುಗಳನ್ನು ಹೇಗೆ ಗುರುತಿಸಬೇಕೆನ್ನು ವುದೇ ಒಂದು ಪ್ರಶ್ನೆ. ಅಕಸ್ಮಾತ್ತಾಗಿ ಗುರುತಿಸಲು ಸಾಧ್ಯವಾದರೆ ಮಾನವ ದೇಹದಲ್ಲೂ ಅದೇ ರೀತಿಯಾದ ಪ್ರತಿಕ್ರಿಯೆಗಳನ್ನು ತೋರಿಸುವ ವಂಶ ವಾಹಿಗಳನ್ನು ಆ ಮುಖ್ಯ ವಂಶವಾಹಿಗಳಿಂದ ಬೇರ್ಪಡಿಸಿ ಹೇಗೆ ಕೃತಕವಾಗಿ ನಿರ್ಮಿಸಬೇಕೆನ್ನು ವುದು ಅದರ ನಂತರ ಬರುವ ಒಂದು ದೊಡ್ಡ ಪ್ರಶ್ನೆ. ಸಮಸ್ಯೆ ಸುಲಭವಾಗಿಲ್ಲ. ಪ್ರಯೋಗಗಳು ನಡೆಯುತ್ತಾ ಇವೆ.

ಮುಪ್ಪನ್ನು ಮೋಸಗೊಳಿಸುವಲ್ಲಿ ಟಾಮ್ ಜಾನಸನ್ ಎಂಬ ವಿಜ್ಞಾನಿ ಹಿಡಿದ ಜಾಡೇ ಬೇರೆ. ಜಂತುಹುಳು ಉಭಯಲಿಂಗಿಯಾದುದರಿಂದ ಅದರ ವಂಶವಾಹಿಯನ್ನು ಸುಲಭವಾಗಿ ವ್ಯತ್ಯಸ್ತ ಗೊಳಿಸಬಹುದು ಎಂಬ ಕಾರಣದಿಂದ ಅವರು ಜಂತುಹುಳುಗಳ ಮೇಲೆ ಪ್ರಯೋಗಗಳನ್ನು ನಡೆ ಸುತ್ತಾ ಇದ್ದರು.

ಇಲ್ಲಿ ಎಜಿಈದ ಬಗೆಗೆ ಸ್ವಲ್ಪ ತಿಳಿದುಕೊಳ್ಳು ವುದು ಅವಶ್ಯ. ದೇಹದಲ್ಲಿನ ಗ್ಲೂಕೋಸು ಪ್ರೋಟೀ ನುಗಳೊಂದಿಗೆ ಸೇರಿಕೊಳ್ಳುವುದರಿಂದ ಎಜಿಈ (ಅಡ್ವಾನ್ಸ್ಡ್ ಗ್ಲೈಕೊಸೈಲೇಷನ್ ಎಂಡ್‌ಪ್ರಾಡಕ್ಟ್) ಎಂಬ ಸಾಸಿವೆ ಬಣ್ಣದ ಅಂಟು ಪದಾರ್ಥ ಶರೀರದಲ್ಲಿ ಉತ್ಪನ್ನವಾಗುತ್ತದೆ. ಇದು ದೇಹದ ಬೇರೆ ಬೇರೆ ಅಂಗಗಳ ಕಾರ್ಯವಿಧಾನವನ್ನು ಕುಂಠಿ ತಗೊಳಿಸುವುದಲ್ಲದೆ ಜೀವಕಣಗಳ ಮೇಲೂ ಅಹಿ ತಕರವಾದ ಪರಿಣಾಮಬೀರುತ್ತದೆ. ಮುಪ್ಪು ಬರಲು ಒಂದು ಮುಖ್ಯ ಕಾರಣ ಈ ಎಜಿಈ ಎಂಬ ವಸ್ತು ಎಂಬ ವಾದ ವೈಜ್ಞಾನಿಕ ವಲಯದಲ್ಲಿದೆ.

ಹೀಗಿರುತ್ತಲೊಂದು ದಿನ ಎಜಿಈಯನ್ನು ನಿಷ್ಕ್ರಿ ಯಗೊಳಿಸಲಾಗಿದೆಯೆಂದು ಹೇಳುವ ಜಂತು ಹುಳದ ಒಂದು ಪ್ಯಾಕೆಟ್ ಟಾಮ್ ಜಾನ್‌ಸನ್ನರಿಗೆ

ಅವರ ವೈಜ್ಞಾನಿಕ ಮಿತ್ರರೊಬ್ಬರಿಂದ ಬಂತು.

ಬಹುತರವಾಗಿ ಮುಪ್ಪು ಬರುವುದೇ ತಥಾಕಥಿತವಾದ ಈ ಎಜಿಈಯಿಂದ. ಎಜಿಈಯನ್ನು ನಿಷ್ಕ್ರಿಯಗೊಳಿಸಲು ಸಾಧ್ಯವಾದದ್ದು ನಿಜವೇ ಆಗಿದ್ದರೆ ಈ ಜಂತುಹುಳುಗಳು ಉಳಿದ ಜಂತುಹುಳುಗಳಿಗಿಂತ ಹೆಚ್ಚುಕಾಲ ಬದುಕಬೇಕು. ಆದರೆ ಎಜಿಈಯ ಅಸ್ತಿತ್ವದ ಬಗೆಗೇ ಅಷ್ಟಾಗಿ ವಿಶ್ವಾಸವಿಲ್ಲದ್ದರಿಂದ ಈ ಹುಳುಗಳು ಹೆಚ್ಚು ಕಾಲ ಬದುಕುತ್ತವೆಂಬುದನ್ನು ಒಪ್ಪಲು ಜಾನ್‌ಸನ್ನರ ಮನಸ್ಸು ತಯಾರಾಗಲಿಲ್ಲ.

ಆದರೂ ಅಷ್ಟು ವಿಶ್ವಾಸದಿಂದ ಮಿತ್ರರು ಇವುಗಳನ್ನು ಕಳಿಸಿದ್ದಾರೆಂದ ಮೇಲೆ ಈ ಹುಳುಗಳನ್ನು ಹಾಗೆಯೇ ಒಗೆದುಬಿಡಲೂ ಜಾನ್‌ಸನ್ನರ ಮನಸ್ಸು ಒಪ್ಪಲಿಲ್ಲ.

ಅವರು ಆ ಹುಳುಗಳನ್ನೆಲ್ಲ ತಮ್ಮ ಶಿಷ್ಯನಿಗೆ ಒಪ್ಪಿಸಿ ಅವುಗಳನ್ನು ಸೂಕ್ಷ್ಮವಾಗಿ ಗಮನಿಸುವಂತೆ ಹೇಳಿದರು. ಆತ ಕೆಲವು ಹುಳುಗಳನ್ನಾಯ್ದುಕೊಂಡು ಸೂಕ್ಷ್ಮವಾಗಿ ಗಮನಿಸಿ, ಅವು ಇನ್ನಿತರ ಸಾಮಾನ್ಯ ಜಂತುಹುಳುಗಳಿಗಿಂತ ಹೆಚ್ಚು ಕಾಲ ಬದುಕುತ್ತವೆಂದು ವರದಿ ಒಪ್ಪಿಸಿದ. ಜಾನ್‌ಸನ್‌ರಿಗೆ ವಿಶ್ವಾಸ ಬರಲಿಲ್ಲ. ಪ್ರಯೋಗವನ್ನು ಪುನರಾವರ್ತಿಸಲು ಹೇಳಿದರು. ಮತ್ತೆ ಅದೇ ಫಲಿತಾಂಶ. ಹದಿನಾಲ್ಕು ಸಲ ಪ್ರಯೋಗವನ್ನು ಪುನರಾವರ್ತಿಸಿದಾಗಲೂ ಎಜಿಈ ನಿಷ್ಕ್ರಿಯಗೊಳಿಸಲ್ಪಟ್ಟ ಈ ಜಂತುಹುಳುಗಳು ದೀರ್ಘಾಯುಷಿಗಳಾಗಿದ್ದುದು ದೃಢಪಟ್ಟಾಗ ಜಾನ್‌ಸನ್ನರ ಕುತೂಹಲ ಕೆರಳಿತು.

ಈಗ ಜಾನ್‌ಸನ್ ತಾವೇ ಪ್ರಯೋಗಗಳನ್ನು ನಡೆಸತೊಡಗಿದರು. ಕಾರನ್ನು ನಡೆಸುವಾಗ ಪೆಟ್ರೋಲು ಸುಟ್ಟು ಉಪೋತ್ಪತ್ತಿಯಾಗಿ ಹೊಗೆ ಹೊರಬೀಳುವ ಹಾಗೆ ದೇಹದ ಅಂತರವಯವಗಳು ಕಾರ್ಯನಿರ್ವಹಿಸಿದಾಗ ಉಪೋತ್ಪತ್ತಿಯಾಗಿ ಪ್ರತಿದಿನ ಸುಮಾರು ಸಾವಿರಕೋಟಿಯಷ್ಟು ಸ್ವತಂತ್ರಕಣಗಳು- ವೈಜ್ಞಾನಿಕ ಪರಿಭಾಷೆಯಲ್ಲಿ ಫ್ರೀ ರ್‍ಯಾಡಿಕಲ್ಸ್- ನಿರ್ಮಾಣಗೊಳ್ಳುತ್ತವೆ. ಶರೀರದಲ್ಲಿ ನೂರಾರುಕೋಟಿಗಳಷ್ಟಿರುವ ಜೀವಕೋಶಗಳನ್ನು ಹಾಳುಗೆಡವುವುದೇ ಇವುಗಳ ಕೆಲಸ. ಆದರೆ ಜೀವಕೋಶಗಳು ಅಪಕರ್ಷಕ (anti oxidants)ಗಳನ್ನು ಒಳಗೊಂಡಿರುವುದರಿಂದ ಸ್ವತಂತ್ರ ಕಣಗಳ ಕಾರ್ಯ ಸುಲಭಸಾಧ್ಯವಾಗುವುದಿಲ್ಲ. ಆದರೆ ವಯಸ್ಸಾದ ಹಾಗೆ ಅಪಕರ್ಷಕಗಳ ಪ್ರಮಾಣ ತಂತಾನೆ ಕಡಿಮೆಯಾಗುವುದರಿಂದ ಸ್ವತಂತ್ರ ಕಣಗಳಿಗೆ ಜೀವಕೋಶಗಳಿಗೆ ಲಗ್ಗಿಯಿಡಲು ಸುಲಭವಾಗುತ್ತದೆ. ಎಜಿಈ ನಿಷ್ಕ್ರಿಯಗೊಳಿಸಲ್ಪಟ್ಟ ಈ ಜಂತುಹುಳುಗಳಲ್ಲಿ ಅಪಕರ್ಷಕ ಅಸಾಧಾರಣ ಪ್ರಮಾಣದಲ್ಲಿತ್ತು. ಹಾಗಾದರೆ ಜಂತುಹುಳುಗಳು ಸಾವಕಾಶವಾಗಿ ವೃದ್ಧಾಪ್ಯಕ್ಕೆ ಬರಲು ಅಪಕರ್ಷಕ ಹೆಚ್ಚಿನ ಪ್ರಮಾಣದಲ್ಲಿದ್ದದ್ದೇ ಕಾರಣ ಎಂದು ಜಾನ್‌ಸನ್ ತೀರ್ಮಾನಿಸಿದರು.



ಜಂತುಹುಳುಗಳ ವಂಶವಾಹಿಯಲ್ಲಿ ಎಜಿಈ ಖಚಿತವಾಗಿ ಎಲ್ಲಿ ಇದೆ ಎನ್ನುವುದನ್ನು ಕಂಡುಹಿಡಿಯುವಲ್ಲಿಗ ಅವರು ತಲ್ಲೀನರಾಗಿದ್ದಾರೆ. ಒಮ್ಮೆ ಅದು ಗುರುತಿಸಲ್ಪಟ್ಟರೆ ಎಜಿಈ ಕಾರ್ಯವಿಧಾನವನ್ನು ಕಂಡು ಹಿಡಿಯುವ ಕೆಲಸ ವಿಜ್ಞಾನಿಗಳಿಗೆ ಸುಲಭವಾಗುವುದು. ಒಮ್ಮೆ ಅದನ್ನು ಸಾಧಿಸಿದ ನಂತರ ಎಜಿಈಯ ಕಾರ್ಯವನ್ನು ಪ್ರತಿಬಂಧಿಸುವುದು ಕಷ್ಟದ್ದಲ್ಲ. ಅದು ಸಾಧ್ಯವಾದರೆ ಮುಪ್ಪನ್ನು ಮುಂದೂಡುವುದೂ ಕಠಿಣವಲ್ಲ. ಆದರೆ ಇದೆಲ್ಲ ಹೇಳಿದಷ್ಟು ಸುಲಭವಲ್ಲ. ಈಗ ಈ ನಿಟ್ಟಿನಲ್ಲಿ ವಿಜ್ಞಾನಿಗಳು ಮೊದಲ ಹೆಜ್ಜೆಯನ್ನಿಟ್ಟಿದ್ದಾರೆ. ಅವರು ಕ್ರಮಿಸಬೇಕಾದ ದಾರಿ ಇನ್ನೂ ದೂರ.

ವಿಜ್ಞಾನಿಗಳು ಮುಪ್ಪನ್ನು ಮುಂದೂಡಲು ಬೇರೆ ಬೇರೆ ನಿಟ್ಟಿನಿಂದಲೂ ಪ್ರಯತ್ನಿಸುತ್ತಿದ್ದಾರೆ. ವಯಸ್ಸಾದಂತೆಲ್ಲ ದೇಹದಲ್ಲಿ ಬೆಳವಣಿಗೆಗೆ ಕಾರಣವಾಗುವ ಹಾರ್ಮೋನಿನ ಉತ್ಪಾದನೆ ಕುಂಠಿತಗೊಳ್ಳುವುದು ಸ್ವಾಭಾವಿಕವೆ. ಈ ಹಾರ್ಮೋನನ್ನು ಚುಚ್ಚುಮದ್ದಿನ ರೂಪದಲ್ಲಿ ಕೊಟ್ಟು ನೋಡಿದಾಗ ಆ ವೃದ್ಧರಿಗೆಲ್ಲ ಒಳ್ಳೆ ಚೈತನ್ಯ ಬಂತು. ಮಾಂಸಪೇಶಿಗಳು ಮೊದಲಿಗಿಂತ ಗಟ್ಟಿಯಾದವು; ದೇಹದಲ್ಲಿನ ಬೊಜ್ಜು ಶೇಕಡಾ ೧೪ರಷ್ಟು ಕಡಿಮೆಯಾಯಿತು. ಚರ್ಮ ಶೇಕಡಾ ೭ ರಷ್ಟು ಹೆಚ್ಚು ದಪ್ಪವಾದದ್ದಲ್ಲದೆ ನಿರಿಗೆಗಳು ಕಡಿಮೆಯಾಗಿ ನಳನಳಿಸತೊಡಗಿತು. ಒಬ್ಬಾತನಂತೂ, "ಇಷ್ಟು



ಹುರುಪು ನನಗೆ ಜೀವನದಲ್ಲಿ ಎಂದೂ ಬಂದಿರಲಿಲ್ಲ" ಅಂದ. ಆದರೆ ಈ ಹುರುಪು ಬಹಳ ಕಾಲ ಉಳಿಯಲಿಲ್ಲ. ಹಾರ್ಮೋನ್ ಕೊಡುವುದನ್ನು ನಿಲ್ಲಿಸಿದ ಕೂಡಲೆ ಹುರುಪೂ ಕಡಿಮೆಯಾಗುತ್ತಿತ್ತು. ಹುರುಪು ಕಡಿಮೆಯಾಗದಿರಲೆಂದು ಹಾರ್ಮೋನನ್ನು ಕೊಡುತ್ತಾ ಹೋದರೆ ಉಪಪರಿಣಾಮದಿಂದಾಗಿ ಹೆಂಗಸರ ಹಾಗೆ ಸ್ತನ ಬೆಳೆಯತೊಡಗುತ್ತಿತ್ತು; ಮುಂಗೈ ಊದಿಕೊಂಡು ಕೈಯನ್ನು ತಿರುಗಿಸಲೂ ಕಷ್ಟವಾಗುತ್ತಿತ್ತು. ಉಪಪರಿಣಾಮ ಕೈಡೆ ಮಾಡಿಕೊಡದಂತೆ ಈ ಹಾರ್ಮೋನನ್ನು ವಿಧಿಸುವುದು ಹೇಗೆ? ಎಂಬುದೀಗ ಆ ವಿಜ್ಞಾನಿಗಳ ಎದುರಿಗಿರುವ ಪ್ರಶ್ನೆ.

ವಯಸ್ಸಾದಂತೆಲ್ಲ ದೇಹದ ರೋಗಪ್ರತಿಬಂಧಕ ಶಕ್ತಿ ಕುಗ್ಗುತ್ತಾ ಹೋಗುತ್ತದೆ. ಹೀಗಾಗಿ ಚಿಕ್ಕಪುಟ್ಟ ವ್ಯಾಧಿಗಳನ್ನು ತಾಳಿಕೊಳ್ಳುವುದೂ ಆಗ ಕಷ್ಟವಾಗುತ್ತದೆ. ಯೌವನದಲ್ಲಿರುವಷ್ಟು ಡಿಎಚ್‌ಈಎ ಹಾರ್ಮೋನು ವೃದ್ಧಾಪ್ಯದಲ್ಲಿರುವುದಿಲ್ಲ. ಹಾಗಾದರೆ ಈ ಡಿಎಚ್‌ಈಎಯೇ ದೇಹದ ರೋಗಪ್ರತಿಬಂಧಕ ಶಕ್ತಿಯನ್ನು ಹಿಡಿದಿಟ್ಟಿರುತ್ತದೆಯೆ? ಎಂಬ ಸಂಶಯ ರೇ ಡೇನಸ್ ಎಂಬ ವಿಜ್ಞಾನಿಗೆ ಬಂತು. ಆತ ಈ ಹಾರ್ಮೋನನ್ನು ಪ್ರಯೋಗ ಪಶುಗಳಿಗೆ ಕೊಟ್ಟಾಗ ಅವು ಮೊದಲಿಗಿಂತ ಹೆಚ್ಚು ಆರೋಗ್ಯಕರವಾದವಲ್ಲದೆ ಹೆಚ್ಚು ಉತ್ಸಾಹವೂ ಆ ಪ್ರಯೋಗ ಪಶುಗಳಲ್ಲಿ ಮೂಡಿಬಂತು. ನಂತರ ಆತ ಕ್ಯಾನ್ಸರುಗ್ರಸ್ತವಾದ ಜೀವಕೋಶಗಳನ್ನು ಅವುಗಳಲ್ಲಿ ನೆಲೆಗೊಳಿಸಿದ. ಸಾಮಾನ್ಯ ಸ್ಥಿತಿಯಲ್ಲಾದರೆ ಅಂತಹ ಪರಿಸ್ಥಿತಿಯಲ್ಲಿ ಪ್ರಾಣಿ ಸತ್ತೇ ಹೋಗಬೇಕು. ಆದರೆ ಚುಚ್ಚುಮದ್ದಿನ ಮೂಲಕ ಡಿಎಚ್‌ಈಎ ಪಡೆದ ಪ್ರಯೋಗ ಪಶುಗಳು ಮಾತ್ರ ಈ ಕ್ಯಾನ್ಸರುಗ್ರಸ್ತ ಜೀವಕೋಶಗಳನ್ನು ಸಮರ್ಥವಾಗಿ ಎದುರಿಸಿದವು. ಈವರೆಗಂತೂ ಈ ಹಾರ್ಮೋನಿನಿಂದ ಅಂಥಾ ಕೆಟ್ಟ ಉಪಪರಿಣಾಮಗಳಾವವೂ ಕಂಡುಬಂದಿಲ್ಲ. ಅಲ್ಲದೆ ಡಿಎಚ್‌ಈಎ ಕೊಟ್ಟ ಪ್ರಯೋಗ ಪಶುಗಳಿಗೆ ತಡವಾಗಿ ಮುಪ್ಪು ಆವರಿಸುವುದೂ ಅವು ಈ ಹಾರ್ಮೋನನ್ನು ಪಡೆಯದ ಇದೇ ಜಾತಿಯ ಇತರ ಪ್ರಯೋಗಪಶುಗಳಿಗಿಂತ ಹೆಚ್ಚು ಕಾಲ ಬದುಕುವುದೂ ವ್ಯಕ್ತವಾಗಿದೆ. ಆದರೆ ಮಾನವರಿಗೆ ದೀರ್ಘಕಾಲದವರೆಗೆ ಈ ಹಾರ್ಮೋನನ್ನು ಕೊಟ್ಟರೆ ಉಪಪರಿಣಾಮಗಳಾವವೂ ಕಂಡುಬರುವುದಿಲ್ಲವೆ? ಹಾಗೂ ಅದು ಆಯುಷ್ಯವನ್ನು ನಿಜಕ್ಕೂ ವರ್ಧಿಸುವುದೇ? ಎಂಬುದಿನ್ನೂ ಖಚಿತವಾಗಬೇಕಿದೆ.

ಸ್ವತಂತ್ರ ಕಣಗಳನ್ನು ಎದುರಿಸುವುದು ಅಪಕರ್ಷಕಗಳಷ್ಟೇ ಅಲ್ಲ ಪಿಬಿಎನ್‌ನಂತಹ ಇನ್ನೂ ಕೆಲವು ರಾಸಾಯನಿಕಗಳೂ ಇವೆ. ಒಂದು ರೀತಿಯಲ್ಲಿ ನಮ್ಮ ದೇಹದ ರಕ್ಷಣಾ ವ್ಯವಸ್ಥೆ ಜಾರುಗುಪ್ಪೆ ಅಥವಾ ಜೀಕುಮೂಕ (See saw)ಯಂತಿದೆ. ಒಂದೆಡೆ ಅಂತರವಯವಗಳ ಚಟುವಟಿಕೆಯಿಂ

ದಾಗಿ ಮುಪ್ಪಿಗೆ ಕಾರಣವಾಗುವ ಸ್ವತಂತ್ರ ಕಣಗಳು ಕೋಟಿಗಟ್ಟಲೆಯಲ್ಲಿ ತಯಾರಾದರೆ ಈ ಸ್ವತಂತ್ರ ಕಣಗಳನ್ನು ನಿಷ್ಕ್ರಿಯಗೊಳಿಸಲು ಇನ್ನೊಂದೆಡೆ ಅಪಕರ್ಷಕಗಳೂ ಇನ್ನೂ ಕೆಲವು ರಾಸಾಯನಿಕಗಳೂ ತಯಾರಾಗುತ್ತಿರುತ್ತವೆ. ಪ್ರಾಯವಿದ್ದಾಗ ಇವೆರಡೂ ಅಷ್ಟೇ ಪ್ರಮಾಣದಲ್ಲಿ ತಯಾರಾಗುತ್ತಿರುವುದರಿಂದ ದೇಹದ ಇಡಿ ವ್ಯವಸ್ಥೆ ಒಂದು ರೀತಿಯಲ್ಲಿ ಸಂತುಲಿತವಾಗಿರುತ್ತದೆ. ಆದರೆ ಕಾಲಕ್ರಮೇಣ ಅಪಕರ್ಷಕಗಳಂತಹ ರಾಸಾಯನಿಕಗಳ ಉತ್ಪಾದನೆ ಕುಗ್ಗುವುದರಿಂದ ಸ್ವತಂತ್ರ ಕಣಗಳ ಕೈಯೇ ಮೇಲಾಗಿ ಮುಪ್ಪು ಶರೀರವನ್ನು ಆಕ್ರಮಿಸತೊಡಗುತ್ತದೆ ಎಂದು ರಾಬರ್ಟ್ ಫ್ಲಾಯ್ಡ್ ಎಂಬ ಇನ್ನೊಬ್ಬ ವಿಜ್ಞಾನಿ ಹೇಳುತ್ತಾರೆ. ಅವರೀಗ ಅಪಕರ್ಷಕಗಳ ಹಾಗೆಯೆ ಸ್ವತಂತ್ರ ಕಣಗಳ ಕಾರ್ಯವನ್ನು ನಿಷ್ಕ್ರಿಯಗೊಳಿಸುವ ಪಿಬಿಎನ್ ಎಂಬ ರಾಸಾಯನಿಕದ ಬಗೆಗೆ ಸಂಶೋಧನೆ ನಡೆಸುತ್ತಿದ್ದಾರೆ.

ಮುಪ್ಪನ್ನು ಮುಂದೂಡಲು ವಿಜ್ಞಾನಿಗಳು ಎಷ್ಟೇ ಪ್ರಯತ್ನಿಸುತ್ತಿರಲಿ, ಮುಪ್ಪಿಗೆ ಕಾರಣವಾದ ರಾಸಾಯನಿಕಗಳನ್ನು ಎಷ್ಟೇ ಭರದಿಂದ ಕಂಡುಹಿಡಿಯುತ್ತಿರಲಿ, ತೀರಾ ಕ್ಲಿಷ್ಟವಾಗಿರುವ ಇಡೀ ಮುಪ್ಪಿನ ಪ್ರಕ್ರಿಯೆಯ ರಹಸ್ಯವಂತೂ ಸದ್ಯೋಭವಿಷ್ಯದಲ್ಲಿ ಬಯಲಾಗುವ ಲಕ್ಷಣಗಳಿಲ್ಲ. ಹೀಗಾಗಿ ಈ ದಿಶೆಯಲ್ಲಿ ವಿಜ್ಞಾನಿಗಳ ಪ್ರಯೋಗಗಳ ಪ್ರಯೋಜನವೇನಾದರೂ ದೊರೆಯುವುದಿದ್ದರೆ ಅದು ಮುಂದಿನ ಎರಡು ಅಥವಾ ಮೂರನೆಯ ತಲೆಮಾರಿನವರಿಗೆ ಮಾತ್ರ.

ಅಲ್ಲಿಯವರೆಗೆ ನಮಗೇನು ಉಪಾಯ? ಲಂಗುಲಗಾಮಿಲ್ಲದೆ ತಿನ್ನುವ ಪ್ರಯೋಗ ಪಶುಗಳಿಗಿಂತ ಉಪವಾಸವಿರದ, ಆದರೆ ನಿತ್ಯದ ಚಟುವಟಿಕೆಗಳಿಗೆ ಸಾಕಾಗುವಷ್ಟು ಶಕ್ತಿಯನ್ನು ಉತ್ಪಾದಿಸುವಷ್ಟು ಆಹಾರವನ್ನು ಸೇವಿಸುವ ಪ್ರಯೋಗ ಪಶುಗಳು ಹೆಚ್ಚು ಕಾಲ ಬದುಕುತ್ತವೆಯಲ್ಲದೆ ಇರುವಷ್ಟು ಕಾಲ ಚಟುವಟಿಕೆಯಿಂದಲೆ ಇರುತ್ತವೆ ಎನ್ನುವುದನ್ನು ಈಗಾಗಲೇ ವಿಜ್ಞಾನಿಗಳು ಕಂಡುಕೊಂಡಿದ್ದಾರೆ. ಅರ್ಥಾತ್ ಮನಬಂದಂತೆ ತಿನ್ನುವ ಬದಲು, ಆದಷ್ಟು ಕಡಿಮೆ ಕೊಬ್ಬು, ಶರ್ಕರಪಿಷ್ಟಗಳಿರುವ, ಆದರೆ ಹೆಚ್ಚು ಪ್ರಮಾಣದಲ್ಲಿ ಪ್ರೋಟೀನು, ಅಗತ್ಯ ಪ್ರಮಾಣದಲ್ಲಿ ಜೀವಸತ್ವಗಳು ಹಾಗೂ ಲೋಹಾಂಶಗಳಿರುವ ಕಡಿಮೆ ಕ್ಯಾಲರಿಯ ಆಹಾರವನ್ನು ಮಿತವಾಗಿ ಸೇವಿಸುವುದೇ ದೀರ್ಘಾಯುಷಿಗಳಾಗಿರಲು ಸದ್ಯಕ್ಕಿರುವ ಉಪಾಯ. ತರಕಾರಿಗಳಲ್ಲಿ ಇವೆಲ್ಲ ಇದ್ದೇ ಇವೆ. ಸಾಲದ್ದಕ್ಕೆ ಮುಪ್ಪಿಗೆ ಕಾರಣವೆಂದು ಭಾವಿಸಲ್ಪಟ್ಟ ಸ್ವತಂತ್ರ ಕಣಗಳನ್ನು ನಿಷ್ಕ್ರಿಯಗೊಳಿಸುವ ಅಪಕರ್ಷಕಗಳೂ ತರಕಾರಿಗಳಲ್ಲಿ ಭರ್ಜರಿ ಪ್ರಮಾಣದಲ್ಲಿ ಇವೆ.

ಆದ್ದರಿಂದ ವಿಜ್ಞಾನಿಗಳು ಮುಪ್ಪನ್ನು ಮುಂದೂಡುವ ಸಿದ್ಧೌಷಧಿಯನ್ನು ಕಂಡು ಹಿಡಿಯುವವರೆಗೆ ನಿಮ್ಮ ನಿತ್ಯದ ಆಹಾರದಲ್ಲಿ ತರಕಾರಿಗಳೇ ಹೆಚ್ಚು ಪ್ರಮಾಣದಲ್ಲಿರುವ ಹಾಗೆ ನೋಡಿಕೊಳ್ಳಿ. ಸಾಧ್ಯವಾದಷ್ಟು ಮಟ್ಟಿಗೆ ಅವುಗಳನ್ನು ಕಚ್ಚಾ ಸ್ಥಿತಿಯಲ್ಲಿಯೇ ಸೇವಿಸಿರಿ. ನೀರಗ್ನಿ ಆಹಾರ ನಿಜಕ್ಕೂ ನಿಮಗೆ ಪ್ರಯೋಜನಕರವಾಗಬಲ್ಲದು. ●

## ವಿಜ್ಞಾನಿಗಳ ಸಾಧನೆ

ವರಣಾತ್ಮಕ ವಂಶಾಭಿವೃದ್ಧಿ (selective breeding)ಯಿಂದ ಈಗಾಗಲೆ ಹಣ್ಣಿನ ಹುಳಗಳ ಆಯುಷ್ಯವನ್ನು ಎರಡುಪಟ್ಟು ಹೆಚ್ಚಿಸಿದ್ದಾರೆ. ವಂಶವಾಹಿಯಲ್ಲಿ ಬದಲಾವಣೆ ಮಾಡಿ ಜಂತುಹುಳುಗಳ ಆಯುಷ್ಯವನ್ನು ಶೇಕಡಾ ೭೦ರಷ್ಟು ಹೆಚ್ಚಿಸಿದ್ದಾರೆ.

ಅತಿ ಕಡಿಮೆ ಕ್ಯಾಲೊರಿಯ ಆಹಾರ ವಿಧಿಸಿ ದಂಶಕ (rodents) ವರ್ಗಕ್ಕೆ ಸೇರಿದ ಪ್ರಯೋಗಪಶುಗಳ ಆಯುಷ್ಯವನ್ನು ಮಾನವ ಜೀವಿತಾವಧಿಯ ಲೆಕ್ಕದಲ್ಲಿ ೧೬೦ ವರ್ಷಗಳಿಗೆ ಸಮನಾಗುವಷ್ಟು ವೃದ್ಧಿಸಿದ್ದಾರೆ.

# ಕಾಣದ ಬೆನ್ನು ಕಾಯುವ ಬೆನ್ನು

**ತಾ**ನು ಮಾಡಿದ ತಪ್ಪನ್ನು ಗಮನಿಸಿ ಅದನ್ನು ಒಪ್ಪಿಕೊಳ್ಳುವವನು ಎಲ್ಲಿಯೋ ಅಲ್ಲೊಬ್ಬ, ಇಲ್ಲೊಬ್ಬ. ತನ್ನಲ್ಲಿರುವ ಅವಗುಣಗಳನ್ನು ಹೆರವರು ಎತ್ತಿ ತೋರಿಸಿದಾಗ ಅವುಗಳನ್ನು ಗಣನೆಗೆ ತೆಗೆದುಕೊಳ್ಳುವಂಥ ವ್ಯಕ್ತಿ ಬೆರಳ ಮೇಲೆ ಕೂಡ ಎಣಿಸಲು ದೊರಕದಷ್ಟು ವಿರಳ; ಇಲ್ಲವೆಂದರೂ ನಡೆದೀತು. ಇದಕ್ಕೆಂದೇ ಹೇಳುತ್ತಾರೆ- ತನ್ನ ಬೆನ್ನು ತನಗೆ ಕಾಣುವುದಿಲ್ಲ ಎಂದು ಹೌದು; ಹೇಗೆ ಕಂಡೀತು? ಪ್ರಕೃತಿ ಕೊಡಮಾಡಿರುವ ಮುಂದುಗಡೆಯಿರುವ ಕಣ್ಣಿನ ಜೋಡಿಯಲ್ಲಿ ಒಂದನ್ನಾದರೂ ಹಿಂದುಗಡೆ ಇರಿಸಿದ್ದರೆ ಚೆನ್ನಾಗಿರುತ್ತಿತ್ತು. ಆಗ ಅಂತಹ ಕಣ್ಣಿನ ಸಹಾಯದಿಂದ ತನ್ನ ಬೆನ್ನು ತನಗೇ ಕಾಣುವಂತಾಗುತ್ತಿತ್ತು- ಇರುಳು ಹೊತ್ತು ವಾಹನದ ಹಿಂದುಗಡೆ ಮಿನುಗುವ ದೀಪದ ಬೆಳಕಿನಲ್ಲಿ ಅದರ ಸಂಖ್ಯಾಫಲಕ ಎದ್ದುಕಾಣುವಂತೆ! ಆದರೆ ಹಾಗಾಗಲಿಲ್ಲವಲ್ಲ!

ಸೃಷ್ಟಿಕರ್ತ ಸ್ವಯಂಭೂ ಭಗವಂತ ಬಲುಸ್ವಾರ್ಥಿ. ತನಗೆ ಮಾತ್ರ ನಾಲ್ಕು ಮುಖಗಳನ್ನು ಕಲ್ಪಿಸಿಕೊಂಡ. ಚತುರ್ಮುಖ ಬ್ರಹ್ಮನೆನಿಸಿದ. ತನ್ನ ಸೃಷ್ಟಿಯಲ್ಲಿಯ ನಾಲ್ಕೂ ನಿಟ್ಟನಲ್ಲಿ ನಡೆಯುತ್ತಿರುವ ಪ್ರತಿಯೊಂದು ಘಟನೆಯೂ ತನ್ನ ದೃಷ್ಟಿಪಥದಲ್ಲಿ ಗೋಚರಿಸುವಂತೆ ನೋಡಿಕೊಂಡ. ಇದರಿಂದಾಗಿ ಸರ್ವದರ್ಶಿ, ಸರ್ವಚಕ್ಷು, ಸರ್ವಸಾಕ್ಷಿ ಎಂದೆನಿಸಿಕೊಂಡ. ಆದರೆ ಹುಲುಮಾನವನ ಪಾಲಿಗೆ? ತನ್ನ ಬೆನ್ನೇ ತನಗೆ ಕಾಣದಂತೆ ಮಾಡಿಬಿಟ್ಟ. ಭಗವಂತನೇನೋ ಬಲು ದೊಡ್ಡವ, ದೊಡ್ಡವರ ತಪ್ಪೂ ದೊಡ್ಡದು. ಅವರ ಚಿಕ್ಕದಾದ ಅಲಕ್ಷ್ಯದಿಂದ ದೊಡ್ಡ ದೊಡ್ಡ ಅನಾಹುತಗಳೇ ಸಂಭವಿಸುತ್ತವೆ ಎನ್ನುವುದಕ್ಕೆ ಈ ಒಂದು ನಿದರ್ಶನ ಸಾಕಲ್ಲವೆ?

ಭಾರ ಹೊರಲೆಂದೇ ನಿರ್ಮಾಣವಾದಂತಿದೆ ಈ ಹರವಾದ ಬೆನ್ನು. ಶಾಲೆಗೆ ಹೋಗುವ ಎಳೆಯ ಮಕ್ಕಳು ಬೆನ್ನುಮೂಳೆ ಮುರಿಯುವಂತಹ ಪುಸ್ತಕ, ಟಿಪ್ಪಣಿ ಪುಸ್ತಕ ಮುಂತಾದವುಗಳು ಕಿಕ್ಕಿರಿದು ತುಂಬಿದ ದೊಡ್ಡ ಮೂಟೆಯನ್ನೇ ದಿನಾಲು ಬೆನ್ನಮೇಲೆ ಹೊರುತ್ತವೆ. ಆದಿಶೇಷ ತನ್ನ ಹೆಡೆಯ ಮೇಲಿನ ಭೂಮಿಯ ಭಾರದಿಂದ ಎಂದಿಗೂ ವಿಮುಕ್ತಿಯನ್ನು ಪಡೆಯದಂತೆ ಸಾಕಷ್ಟು ಸಮಯ ಚರ್ಚೆ ನಡೆದರೂ ಮಕ್ಕಳ ಈ ಬೆನ್ನಿನ ಭಾರಕ್ಕೆ ಕೊನೆಯೆಂಬುದು ಕಾಣುತ್ತಿಲ್ಲ. ಬಹುಶಃ ಮುಂದೊಂದು ದಿನ ಇವರು ಪ್ರತ್ಯಕ್ಷ ಪ್ರಪಂಚದಲ್ಲಿ ಕಾಲಿರಿಸಿದಾಗ ಹೊರಬೇಕಾದ ಭಾರದ ಪೂರ್ವಸಿದ್ಧತೆ ಇದಾಗಿದೆಯೋ ಏನೋ? ಕಾಳುತುಂಬಿದ ಚೀಲಗಳನ್ನು ಗುದಾಮುಗಳಿಂದ ಟ್ರಕ್ಕುಗಳಿಗೆ, ಟ್ರಕ್ಕುಗಳಿಂದ ಇನ್ನು ಬೇರೆಡೆಗೆ ಸಾಗಿಸುವಾಗ ಹಮಾಲರ ನೆರವಿಗೆ ಬರುವುದು ಅವರ ಬೆನ್ನು. ಹಳ್ಳಿಗಳಲ್ಲಿ ಒಂದು ಕ್ವಿಂಟಲ್ ಧಾನ್ಯ ತುಂಬಿಕೊಂಡ ಮೂಟೆಯನ್ನು ಕಷ್ಟವಿಲ್ಲದೆ ಬೆನ್ನಮೇಲೆ ಹೊತ್ತುಕೊಂಡು ಊರಿಂದ ಊರಿಗೆ ನಡೆದು ಹೋಗುವ ಕಸರತ್ತು ಮೆರೆಯುವ ಸ್ಪರ್ಧಾಳುಗಳಿಗೂ ಕೊರತೆಯಿಲ್ಲ. ಮಹಾಭಾರತದ ಭೀಮಸೇನ ಉರಿಯುವ ಅರಗಿನ ಮನೆಯಿಂದ ತನ್ನವರನ್ನು ಪಾರುಮಾಡಲೆಂದು ಯೋಚಿಸಿ, ತಾಯಿ ಕುಂತಿ, ನಾಲ್ವರು ಅಣ್ಣ-ತಮ್ಮಂದಿರು- ಒಟ್ಟಾರೆ ಐವರನ್ನು ಹೊತ್ತುಕೊಳ್ಳಲು ಸಮರ್ಥವಾದುದು ಆತನ ಭದ್ರವಾದ ಬೆನ್ನೆ ಅಲ್ಲವೆ?

ಬೆನ್ನು ಇರುವುದು ಭಾರ ಹೊರಲೆಂದೆ- ಎಂಬುದಕ್ಕೆ ಪಾಠ ಹಾಕಿಕೊಟ್ಟವ ಪರಮಾತ್ಮನೆ. ಎಂದಮೇಲೆ ಅದಕ್ಕೆ ಬಿಡುಗಡೆ ಎಲ್ಲಿಂದ ಬಂದೀತು?

"ಜಗದಾಣ್ಮನು ಶ್ರೀಕೂರ್ಮನ ರೂಪವ ತಳೆದಿರಲು
ಬೆನ್ನಿನ ಮೇಲ್ ಅತಿ ಭಾರದ ಮಂದರಗಿರಿ ಹೊರಲು
ಕಡಗೋಲಿನ ಪರಿ ಆ ಗಿರಿ ಗರಗರ ತಿರುಗಿರಲು
ಬೆಟ್ಟದ ಹೆಬ್ಬಂಡೆಯ ತುದಿಬೆನ್ನಿಗೆ ತಗಲಿರಲು

ನೆಮ್ಮದಿಯಲಿ ಕೂರ್ಮನು ಗುರುಗುರು ನಿದ್ರಿಸುತಿರಲು
ಭರದಲ್ಲಿ ಹೊರಹೊಮ್ಮಿದ ಆ ಆಮೆಯ ಉಸಿರಾಟ
ಕಡಲಿನ ನೀರೊಳು ಎದ್ದಿತು ಅಲೆ ಅಲೆ ಅಲೆದಾಟ!"

ಕೂರ್ಮಾವತಾರ ತಳೆದ ಭಗವಂತ, ತನ್ನ ಬಲಿಷ್ಠವಾದ ಬೆನ್ನ ಮೇಲೆ ಬೃಹದ್ ಗಾತ್ರದ ಮಂದಾರಗಿರಿಯ ಭಾರವನ್ನು ಹೊತ್ತು ಸಮುದ್ರ ಮಂಥನಕ್ಕೆ ಅನುವು ಮಾಡಿಕೊಟ್ಟ. ಕಡೆಗೋಲಿನಂತೆ ಗರಗರ ತಿರುಗುತ್ತಿರುವ ಮಂದಾರಗಿರಿಯಿಂದಾಗಿ ಆತನಿಗೆ ನವಿರಾಗಿ ಬೆನ್ನು ತುರಿಸಿದಂತಾಯಿತಂತೆ. ಆಗ ಉಂಟಾದ ನೆಮ್ಮದಿಯ ಭಾವನೆಯಿಂದಾಗಿ ಗುರುಗುರು ನಿದ್ದೆ ಹೋದನಂತೆ ಆ ಕೂರ್ಮ. ಅಂತಹ ನೀಳವಾದ ಉಸಿರಾಟದ ಪರಿಣಾಮವಾಗಿ ಹೊರಹೊಮ್ಮಿದ ಹೆದ್ದೆರೆಗಳ ಹೊಯ್ದಾಟ ಕಡಲಿನಲ್ಲಿ ಇಂದಿಗೂ ನಿಂತಿಲ್ಲ ಎಂದು ಬಲುಮನೋಜ್ಞವಾಗಿ ಭಾಗವತದಲ್ಲಿ ಬಣ್ಣಿಸಲಾಗಿದೆ.

ಭಗವಂತನಿಗೆ ಅಷ್ಟೇ ಏಕೆ? ಮಕ್ಕಳು ಕೂಡ ಮಲಗುವಾಗ ತಾಯಿಂದಿರಿಂದ ಬೆನ್ನು ತುರುಸಿಕೊಂಡು ಬಲುಬೇಗ ನಿದ್ರೆ ಹೋಗುತ್ತವೆ. ಅದರಂತೆಯೆ ಸಾಕುಪ್ರಾಣಿಗಳಾದ ಹಸು, ಎಮ್ಮೆಗಳ ಬೆನ್ನು ತುರಿಸಿದರೆ ಅವಕ್ಕೆ ಎಲ್ಲಿಲ್ಲದ ಖುಷಿ, ಎಲ್ಲೆ ಇಲ್ಲದ ಸಮಾಧಾನ. ಅಂಥ ಸಮಯಕ್ಕೆ ತಮ್ಮ ಯಜಮಾನ, ಇಲ್ಲವೆ ಯಜಮಾನಿಯ ಕಡೆಗೆ ಕೃತಜ್ಞತೆಯ ದೃಷ್ಟಿ ಬೀರುವುದು ಯಾರ ದೃಷ್ಟಿಗೆ ಬಿದ್ದಿಲ್ಲ? ಬಂಡಿಗೆ ಹೂಡಿದ ಎತ್ತು ಇಲ್ಲವೆ ಕುದುರೆಯ ಬೆನ್ನು ಚಪ್ಪರಿಸಿದರೆ ಸಾಕು, ಅವುಗಳಿಗೆ ಬಲು ಹುರುಪು, ಹುಮ್ಮಸ್ಸು.

ನಾಲಿಗೆ ಚಪ್ಪರಿಸಿ, ಶುಚಿರುಚಿಯಾದ ತಿಂಡಿತಿನಿಸುಗಳನ್ನು ಸೇವಿಸುವುದು ಅವುಗಳ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸುವ ರೀತಿ. ಅದೇ ತೆರನಾಗಿ ಇನ್ನೊಬ್ಬರ ಬೆನ್ನು ಚಪ್ಪರಿಸುವುದು ಇಲ್ಲವೆ ತಟ್ಟುವುದು ಅವರ ಬಗೆಗಿನ ಪ್ರಶಂಸೆಯನ್ನು ಪ್ರಕಟಗೊಳಿಸುವ ಪದ್ಧತಿ, ಮೆಚ್ಚುಗೆಯನ್ನು ಸೂಚಿಸುವ ರೀತಿ. ವಿಶೇಷವಾಗಿ ಹಿರಿಯರು ಕಿರಿಯರ ಬೆನ್ನು ಚಪ್ಪರಿಸುವುದೆಂದರೆ ಅವರಿಗೆ ಪ್ರೋತ್ಸಾಹವನ್ನು ನೀಡುವುದರ ಅಭಿವ್ಯಕ್ತಿ. ಬೆನ್ನಿಗಿರುವ ಹುರಿಯನ್ನು ಲಕ್ಷಿಸಿಯೇ ಹೆರವರನ್ನು ಹುರಿದುಂಬಿಸುವ ಸಂದರ್ಭಗಳಲ್ಲಿ ಹೂಡುವ ತಂತ್ರವೇ ಇಂಥದು.

ಬೆನ್ನು ರಕ್ಷಾ ಕವಚ. ಹೃದಯ ಪುಪ್ಪುಸಗಳಂತಹ ಸೂಕ್ಷ್ಮ ಅಂಗಾಂಗಗಳಿಗೆ ಇದರಿಂದಲೆ ಭದ್ರತೆ. ಮೂಳೆಗಳ ಪಂಜರದಂತಿರುವ ಇದರ ಮಧ್ಯದಲ್ಲಿ ಮೇಲಿನಿಂದ ಕೆಳಕ್ಕೆ ಇಳಿಬಿದ್ದಿರುವ ಬೆನ್ನುಹುರಿ ಜ್ಞಾನತಂತುಗಳ ಉಗಮಸ್ಥಾನ. ಅತಿ ಮಹತ್ವವಾದ ಈ ಹುರಿಯನ್ನು ಕಾಪಾಡಲು ೩೩ ಮಣಿಗಳ ಜೋಡಣೆ. ಮಣಿಗಳ ಈ ಸಂಖ್ಯೆ, ೩೩ ಸಾವಿರ ದೇವತೆಗಳ ಸಂಖ್ಯೆಗೆ ಸರಿಹೋಗುವುದು ಬರಿ ಕಾಕತಾಳೀಯವೋ ಅಥವಾ ಅರ್ಥಪೂರ್ಣವೋ ಎಂಬುದನ್ನು ಬಲ್ಲವರೇ ಊಹಿಸಬೇಕು. ಏನಿದ್ದರೂ ಇಂಥ ವ್ಯವಸ್ಥೆ ಜಗದಾಣ್ಣನ ಜಾಣ್ಮೆಗೆ ಹಿಡಿದ ಕೈಗನ್ನಡಿ.

ಹಸುಳೆಯನ್ನು ಮುದ್ದಾಡುವಾಗ ತಾಯಿಗೆ ಅದರ ಹವಳದಂತಹ ತುಟಿಯತ್ತ ಗಮನ. ಮುತ್ತಿಡುವಾಗ ಅದರ ಹಾಲುಗಲ್ಲಗಳ ನೆನಹು. ಮಗು ದೊಡ್ಡದಾದ ಮೇಲೆ ಯಾವುದೋ ಕಾರಣಕ್ಕಾಗಿ ಆಕೆ ಕೋಪಿಸಿಕೊಂಡಾಗ ಅವಳ ನೆನಪಿಗೆ ಬರುವುದು ಮಗುವಿನ ಬಡಪಾಯಿ ಬೆನ್ನು ರಮ್ಮೆಂದು ಗುಮ್ಮಿಸಿಕೊಳ್ಳಲು ಸಿದ್ಧವಾಗಬೇಕು, ಒಮ್ಮೊಮ್ಮೆ ಫಟಾರೆಂದು ಹೊಡೆತ ತಿನ್ನಲು ಮುಂದುಗಡೆಯ ಕೆನ್ನೆ ಇರುವಂತೆ. ಭೂರಿ ಭೋಜನದ ಸಮಯದಲ್ಲಿ ಸವಿಯಾದ ಉಂಡೆಗಳನ್ನು ಒಂದರಮೇಲೊಂದರಂತೆ ಸೇವಿಸಿ ಹೊಟ್ಟೆ ಸಂತಸಪಟ್ಟರೆ, ಈ ದುರ್ದೈವಿ ಬೆನ್ನು ಬಾಸುಂಡೆ ಉಂಡು ಕಸಿವಿಸಿಪಡಬೇಕು. ಇದೆಂತಹ ನ್ಯಾಯ?

ಭಾರ ಹೊರುವುದು ಬೆನ್ನಿಗಿರುವ ಕಠೋರ ಕರ್ತವ್ಯವಾದರೆ, ಮಣಿಯುವುದು ಅದು ತೋರುವ ಕೌಶಲ. ಯೋಗಾಭ್ಯಾಸದಲ್ಲಿಯ ಆಸನಗಳನ್ನು ಸಲೀಸಾಗಿ ಪ್ರದರ್ಶಿಸುವವರು, ಹಾಗೆಯೇ ದೊಂಬರಾಟದಲ್ಲಿಯ ಕಸರತ್ತುಗಳನ್ನು ಮೆರೆಯುವವರು ಬೆನ್ನನ್ನು ಎಷ್ಟು ಬಗೆಯಾಗಿ ಮಣಿಸಬಲ್ಲರು ಎಂಬುದನ್ನು ಕಣ್ಣಾರೆ ಕಂಡೇ ಅರಿಯಬೇಕು, ತಲೆದೂಗಬೇಕು.

ನಿನ್ನೆ ರಾತ್ರಿ ಏನು ತಿಂದಿದ್ದೇನೆ ಎಂದು ಹುಡುಗ ಜ್ಞಾಪಿಸಿಕೊಳ್ಳಲು ಪ್ರಯತ್ನಿಸಿದ. ನೆನಪು ಬರಲಿಲ್ಲ. ರೊಟ್ಟಿ ತಿಂದಿರಬಹುದು ಎಂದುಕೊಂಡ. ಊ ಹುಂ... ಇರಲಿಕ್ಕಿಲ್ಲ. ನುಚ್ಚು.....? ಅಂಬಲಿ......? ಯಾವುದು ಇದ್ದೀತು? ಹಸಿದ ಹೊಟ್ಟೆ, ನಿನ್ನೆಯ ವಿವರ ಹೇಳಲು ಬುದ್ಧಿಗೆ ಸಹಕರಿಸಲಿಲ್ಲ. ಬಹುಶಃ ಏನೂ ತಿಂದಿರಲಿಕ್ಕಿಲ್ಲ. ಅದಕ್ಕಾಗಿಯೇ ಇಷ್ಟೊಂದು ಹಸಿವೆ ಎಂದುಕೊಂಡ ಹುಡುಗ. ನಿನ್ನೆ ಏನೂ ತಿಂದಿಲ್ಲ ಎಂಬ ಅನುಮಾನ ಬಂದದ್ದೇ ತಡ. ತಿಂದೇ ಇಲ್ಲ ಎಂದು ತೀವ್ರವಾಗಿ ಅನಿಸಲು ಶುರುವಾಯಿತು. ಅನಿಸಿಕೆ ಎನ್ನುವುದು ಕೆಟ್ಟ. ಅದು ಹುಡುಗನ ಹಸಿವನ್ನು ಒಮ್ಮೆಲೆ ಹೆಚ್ಚು ಮಾಡಿತು. ನಿನ್ನೆ ರಾತ್ರಿ ಹತ್ತುಗಂಟೆಯವರೆಗೂ ರೊಟ್ಟಿಗಾಗಿ ಕಾದು ಹುಡುಗ ಕುಳಿತಲ್ಲೆ ನಿದ್ದೆ ಹೋಗಿದ್ದ. ಒಡತಿ ಸೋನುಬಾಯಿ ಇವನನ್ನು ಎಬ್ಬಿಸುವ ಗೊಡವೆಗೆ ಹೋಗದೆ ತಾನೊಬ್ಬಳೆ ಸ್ವಸ್ಥ ಊಟ ಮಾಡಿ ಮಲಗಿದ್ದಳು- ಇವನ ಪಾಲಿನ ಒಂದು ರೊಟ್ಟಿ, ಉಳಿದರೆ ಉಳಿಯಲಿ ಎನ್ನುವ ಧೋರಣೆಯಿಂದ. ಈಗ ಮುಂಜಾನೆಯ ಹತ್ತು ಗಂಟೆ. ಯಥಾಪ್ರಕಾರ ನಸುಕಿನಲ್ಲೆ ಎದ್ದ ಹುಡುಗ ಹಸಿದ ಹೊಟ್ಟೆಯಲ್ಲಿಯೇ ಎಮ್ಮೆಯನ್ನು ಮನೆಯ ದಾಬಿಯಿಂದ ಬಿಚ್ಚಿ ದೊಡ್ಡಿಯಲ್ಲಿ ಕಟ್ಟಿ ಬಂದಿದ್ದ. ದಾಬಿಯಲ್ಲಿಯ ಹೆಂಡಿ ಕಸ ತೆಗೆದು ತಿಪ್ಪೆಗೆ ಒಯ್ದು ಚೆಲ್ಲಿ ಬಂದಿದ್ದ. ಒಡತಿ ಸೋನುಬಾಯಿಯ ಅಡುಗೆ ಮನೆಗೆ ಬೇಕಾಗುವಷ್ಟು ಉರುವಲನ್ನು ದೊಡ್ಡಿಯಲ್ಲಿ ಒಟ್ಟಿದ್ದ ಚೊಗಚಿ ಬಣವಿಯಿಂದ ಮುರಿದು ತಂದಿದ್ದ. ಪ್ರತಿ ಕೆಲಸ ಮುಗಿದಾಗಲೂ ಹುಡುಗ ಅಡುಗೆ ಮನೆ ಕಡೆಗೆ ನೋಡುತ್ತಿದ್ದ. ಹುಡುಗ ನಿನ್ನೆ ಊಟ ಮಾಡಿಲ್ಲ ಎಂದು ತಿಳಿದಿದ್ದರೂ ಸೋನುಬಾಯಿ ಸುಲಭವಾಗಿ ಊಟಕ್ಕೆ ಕೊಡುವ ಹೆಂಗಸಲ್ಲ. ಯಾವಾಗಲೂ ಅವಳದು ಒಂದೇ ಮಾತು:



**ಹೊಟ್ಟೆಗೆ ಏನಾದರೂ ಒಂದಷ್ಟು ಬೀಳಬೇಕು. ಆದರೆ ಕಂಡ ಕಣ್ಣಿನ ಜತೆಗೆ ಆಡುವ ಬಾಯಿಯೂ ಇರುತ್ತದಲ್ಲ!**

# ಹುಡುಗ, ಸ್ವಾಮಿ ಮತ್ತು ರೊಟ್ಟಿ

"ರೊಟ್ಟಿ, ಹಂಗss ಬರತೈತಿ? ಹರಾಮಿ ತಿನ್ನಾಕ? ರೊಟ್ಟಿ ಬೇಕಾದ್ರ ದುಡಿಬೇಕು. ದುಡಿ!" ಎನ್ನುತ್ತಿದ್ದಳು.

ಹತ್ತು ವರ್ಷದ ಹುಡುಗನಿಗೆ ಸೋನು ಬಾಯಿಯ ಅರ್ಥಶಾಸ್ತ್ರ ಹೇಗೆ ತಿಳಿಯಬೇಕು? ಆತನಿಗೆ ಗೊತ್ತಿರುವದು ರೊಟ್ಟಿ ಅಡುಗೆಮನೆಯಿಂದ ಬರುತ್ತದೆ ಎನ್ನುವದು ಮಾತ್ರ.

ಈ ಸೋನುಬಾಯಿ ಮಹಾ ಗಟವಾಣಿ ಹೆಂಗಸು. ಊರಲ್ಲಿ ಒಂದು ಅಂಗಡಿ ಇಟ್ಟು ವ್ಯಾಪಾರ ಮಾಡುತ್ತಿದ್ದಳು. ಗಂಡ ತಿಪ್ಪಣ್ಣ ಸೋನುಬಾಯಿಗೆ ಅಂಜಿ ನಡಗುತ್ತಿದ್ದ. ಆವಳು ಹೇಳಿದ್ದಕ್ಕೆಲ್ಲಾ ಇಲ್ಲ ಎನ್ನದೆ ನಸುಕಿನಲ್ಲಿ ಹೊಳೆಗೆ ಹೋಗಿ ಅವಳ ಸೀರೆಯನ್ನು ಕೂಡಾ ಒಗೆದುಕೊಂಡು ಬರುತ್ತಿದ್ದ. ಮೊದಮೊದಲು ತನ್ನ ಹಸಿ ಧೋತರದಲ್ಲಿ ಮುಚ್ಚಿಕೊಂಡು ಬರುತ್ತಿದ್ದ. ಬರುಬರುತ್ತಾ ಎಲ್ಲರಿಗೂ ತಿಳಿದ ಮೇಲೆ ಹುಚೆ ಹುಚೆ ಎಲ್ಲರಿಗೂ ಕಾಣುವಂತೆ ಹೆಗಲ ಮೇಲೇ ಹಾಕಿಕೊಂಡು ಬರಲು ಸುರು ಮಾಡಿದ್ದ. ಇವಳು ತನ್ನ ಅಂಗಡಿಯಲ್ಲಿ ಗಲ್ಲೇದ ಮೇಲೆ ಟಕ್ಕೇಗೆ ಆಧಾರ ಆಗಿ ರೊಕ್ಕದ ಪೆಟ್ಟಿಗೆ ಮೇಲೆ ಕೈ ಊರಿ ಕುಳಿತುಕೊಂಡರೆ ತಿಪ್ಪಣ್ಣ ಬಂದ ಗಿರಾಕಿಗಳಿಗೆ ಸಂತಿಕೊಡುವದು, ಸೋನುಬಾಯಿಗೆ ಚಹ ಮಾಡಿಕೊಂಡು ತಂದು ಕೊಡುವದು ಮಾಡುತ್ತಿದ್ದ.

ಇವಳ ಬಾಯಿ ಹರಕು ಬಾಯಿ; ಲಂಗು ಲಗಾಮು ಇಲ್ಲದೆ ಬೈಯುತ್ತಾಳೆ ಎನ್ನುವ ಕಾರಣಕ್ಕಾಗಿ ಊರಲ್ಲಿ ಯಾರೂ ಸೋನುಬಾಯಿ ಜೊತೆ ಜಗಳ ತೆಗೆಯುತ್ತಿರಲಿಲ್ಲ. ಊರಲ್ಲಿ ಬರ ಬಿದ್ದಾಗ



• ಬಾಳಾಸಾಹೇಬ ಲೋಕಾಪುರ

ಸಾಂಗ್ಲಿ ಕಡೆ ಸುಗ್ಗಿ ಹೋಗಿದ್ದ ತಿಪ್ಪಣ್ಣ ಇವಳನ್ನು ಉಡುಕಿ ಮಾಡಿಕೊಂಡು ಬಂದಿದ್ದ. ಕೆಲವೊಬ್ಬರು ಸೋನುಬಾಯಿ ತಿಪ್ಪಣ್ಣನನ್ನು ಮದುವೆಯೇ ಆಗಿಲ್ಲ ಸುಮ್ಮನೆ ಬಂದು ಇದ್ದಾಳೆ ಎನ್ನುತ್ತಿದ್ದರು. ಇನ್ನು ಕೆಲವರು ಸೋನುಬಾಯಿ ತನ್ನ ಮೊದಲ ನೆಯ ಗಂಡನನ್ನು ಕೊಂದು ಜೈಲು ಬಿದ್ದು ಬಿಡುಗಡೆಯಾಗಿ ಬಂದಾಗ ತಿಪ್ಪಣ್ಣನನ್ನು ಕೂಡಿಕೊಂಡು ಉಡುಕಿ ಮಾಡಿಕೊಂಡಿದ್ದಾಳೆ ಎನ್ನುತ್ತಿದ್ದರು. ಇನ್ನು ಕೆಲವರು ಸೋನುಬಾಯಿ ತಿಪ್ಪಣ್ಣನ ಜಾತಿಯೇ ಅಲ್ಲ, ಹೆಂಡತಿ ಸತ್ತ ಮೇಲೆ ತಿಪ್ಪಣ್ಣ ಪೌಹಾರಿ ಇವಳನ್ನು ಕಟ್ಟಿಕೊಂಡಿದ್ದಾನೆ ಎನ್ನುತ್ತಿದ್ದರು. ಅಂದರೆ ಖರೆ ಹಕೀಕತ್ ಯಾರಿಗೂ ತಿಳಿದಿಲ್ಲ. ತಿಪ್ಪಣ್ಣ ಯಾರ ಜೊತೆಯೂ ಮಾತಾಡುವ ಸ್ವಭಾವದವನಲ್ಲ ಸೋನುಬಾಯಿಯನ್ನು ಯಾರೂ ಕೇಳುವ ಧೈರ್ಯ ಮಾಡಲಿಲ್ಲ.

ಆದರೆ ಸೋನುಬಾಯಿಯ ಹತ್ತಿರ ಅವಳ ಮೊದಲನೆಯ ಗಂಡನ ಆಸ್ತಿ ಮಾರಿದ ಸುಮಾರು ನಾಲ್ವತ್ತು-ಐವತ್ತು ಸಾವಿರ ರೂಪಾಯಿ ಇವೆ ಎಂದು ಜನ ಮಾತಾಡುತ್ತಿದ್ದರು. ಇವಳ ಹತ್ತಿರ ಹಣ ಇದೆ ಎಂದು ತಿಳಿದಿದ್ದರಿಂದಲೇ ಜನ ಇವಳಿಗೆ ಮರ್ಯಾದೆ ಕೊಡುತ್ತಿದ್ದರು. ಇದಲ್ಲದೆ ಊರ ಕೆಲ ಜನ ಅನೇಕ ಅಡಚಣೆ ಹಾಗೂ ಹರತಾಟಕ ಜೀವನ ಸಾಗಿಸುತ್ತಿದ್ದುದರಿಂದ ಇವಳ ಅಂಗಡಿಯಲ್ಲಿ ಚೂರು ಪಾರು ಉದ್ರಿ ಒಯ್ಯುತ್ತಿದ್ದರು. ಏನಾದರೂ ಅಂದರೆ ಉದ್ರಿ ಬಂದ್ ಮಾಡಬಹುದು ಎನ್ನುವ ಅಂಜಿಕೆಯಿಂದ ಎಲ್ಲರೂ ಇವಳನ್ನು ಹೊಗಳಿ ಹೊಗಳಿ ಮಾತಾಡುತ್ತಿದ್ದರು.

ಸೋನುಬಾಯಿಗೆ ಬರೇ ಅಂಗಡಿ ಧಂಧೆ ಪಸಂದ ಬರಲಿಲ್ಲ. ಅಂಗಡಿ ಸೋನುಬಾಯಿ ಎನ್ನುವ ಹೆಸರು ಅವಳಿಗೆ ಚಂದಾಗಿ ಕಾಣಲಿಲ್ಲ. ಸಾವಕಾರ್ತಿ ಸೋನುಬಾಯಿ ಆಗಬೇಕಾದರೆ ಹೊಲ ಮನಿ ಇರಬೇಕು. ಆಳು ಕಾಳು ಇರಬೇಕು. ಹಿಂಗಾಗಿ ನಾಲ್ಕು ಎಕರೆ ಬೀಳು ಬಿದ್ದ ಭೂಮಿಯನ್ನು ಬಡ್ಡಿಯಲ್ಲಿ ಹಿಡಿದಳು. ಅದು ಬೆಳೆಯುಲಿ ಬಿಡಲಿ ಗಂಡನನ್ನು ತಿವಿದು ಹೊಲಕ್ಕೆ ಕಳಿಸುವ ದಕ್ಕೆ ಒಂದು ನೆಪವಾಯಿತು. ಇದರಿಂದಾಗಿ ಗಂಡ ತಿಪ್ಪಣ್ಣ ಹೊಲಕ್ಕೂ ಮನೆಗೂ ಎಡತಾಕಲು ಸುರು ಮಾಡಿದ.

ಹೊಲದ ಯಜಮಾನಿ ಆದ ಮೇಲೆ ಒಂದು ಆಳು ಇದ್ದರೆ ತನ್ನ ವರ್ಚಸ್ಸು ಹೆಚ್ಚಾಗುತ್ತದೆ ಎಂದು ಭಾವಿಸಿ, 'ನಮಗೊಂದ ಆಳ ಬೇಕಾಗೇತಿ ಇದ್ರ ಹೇಳ್ರಿ' ಎಂದು ಬಂದವರ ಮುಂದೆಲ್ಲಾ ಹೇಳಲು ಸುರುಮಾಡಿದಳು. ನಮ್ಮೂರ ವೆಂಕಪ್ಪನ ಹೆಂಡತಿ ತನ್ನ ಗಂಡನಿಗೆ ಒರಿಬ್ಯಾನಿ ಇದೆ ಎಂದು ಹೇಳಿ ಐದಾರು ವರ್ಷದ ಗಂಡು ಮಗುವನ್ನು ಬಿಟ್ಟು, ಯಾರದೋ ಜೋಡಿ ಓಡಿ ಹೋಗಿದ್ದಳು. ಹೋಗುವಾಗ ಮಗುವನ್ನು ಒಯ್ಯುಬೇಕು ಎಂದು ಕಕ್ಕುಲಾತಿ ಏನೂ ಅವಳು ತೋರಿರಲಿಲ್ಲ. 'ಅವನ ಬೀಜ ಅವ ಬೆಳಸಲಿ' ಅನ್ನುವ ಧೋರಣೆಯಿಂದ ಉಡ್ಯಾಗಿನ ಕೂಸನ್ನು ನಡುಮನೆಯಲ್ಲಿ ಉರುಳಿಸಿ ಓಡಿ ಹೋಗಿದ್ದಳು. ವೆಂಕಪ್ಪ ಹ್ಯಾಂಗೋ ನಾಲ್ಕೈದು ವರ್ಷ ಹುಡುಗನನ್ನು ಜೋಪಾನ ಮಾಡಿ ಈಗ ಐದಾರು ತಿಂಗಳ ಹಿಂದೆ ಸತ್ತು ಹೋಗಿದ್ದ. ಹುಡುಗ ಕಂಡವರ ಮನೆಯಲ್ಲಿ ತಿನ್ನುತ್ತ ತಿರುಗಾಡುತ್ತಿತ್ತು.

ಸೋನುಬಾಯಿಗೆ ಆಳು ಬೇಕಾಗಿದೆ ಎನ್ನುವ ಮಾತು ಕೇಳಿ ಹ್ಯಾಂಗಾದರೂ ಸೋನುಬಾಯಿಗೆ ಸಹಾಯ ಮಾಡಿ ಅವಳನ್ನು ಬುಟ್ಟಿಗೆ ಹಾಕಿಕೊಳ್ಳಲು ಹುನ್ನಾರ ಮಾಡಿದ್ದ ಸಾಹುಕಾರ ತಿಮ್ಮಣ್ಣಪ್ಪ ಸೋನುಬಾಯಿ ಅಂಗಡಿಗೆ ಹೋಗಿ, ದೇಶಾವರಿ ನಗೆಯನ್ನು ನಗುತ್ತ, "ನಿನಗ ಆಳ ಬೇಕಾಗೇತಿ ಅಂತ ಗೊತ್ತ ಆತು. ಕೈ ಬಾಯಿ ಪಚ್ಚಿ ಇರು ಆಳ ಸಿಗೂವದು ಕಠಿಣ ಐತಿ ಈಗಿನ ಕಾಲದಾಗ. ವೆಂಕಪ್ಪನ ಮಗಾ ಭರಮ್ಯಾನ ಹೊಟ್ಟಿ ನೆತ್ತಿ ನೋಡಿಕೊಂಡ ಇಟ್ಕೊಂಡ ಬಿಡು ಸೋನಾ! ನಿನಗೂ ಪುಣ್ಯಾ ಬರತೈತಿ. ಹುಡುಗ್ಗೂ ಚಲೋ ಆಕ್ಕೈತಿ." ಅಂದ.

ಸೋನುಬಾಯಿಗೆ ಸ್ವರ್ಗ ಮೂರುಗೇಣು ಉಳಿಯಿತು. ಒಂದು ಕಡೆ ತಮ್ಮಣ್ಣಪ್ಪ ಸಾಹುಕಾರ ಅಂಗಡಿಗೆ ಬಂದಿದ್ದ. ಇನ್ನೊಂದು ಕಡೆ ಪಗಾರ ಇಲ್ಲದೆ ಬರೀ ಊಟ ಹಾಕಿ ದುಡಿಸಿಕೊಳ್ಳಬಹುದಾದ ಆಳು ಅನಾಯಾಸ ಸಿಕ್ಕಿದ್ದ.

"ಇರ್ಲಿ ಸಾವಕಾರ್‍ರ, ಇರ್ಲಿ," ಎಂದು ಸಾಕ ಮಾಡಿ, "ದೇವ್ರು ಕೊಟ್ಟಾನ ನನಗೂ. ಹುಡುಗ ತಿಂದ್ರ ಹಾಳಲ್ಲ." ನಾಯಾನ ಹಾಳರಿ ಮಾಡಾಕಿ ಅಲ್ಲ. ಬೇಕಾದ್ರ ಅಂಗಡ್ಯಾನ ಕೊಬ್ಬರಿ ಬೆಲ್ಲ ತಿಂದ

ಬೆಳೀಲಿ, ಕಳಿಸಿ ಕುಡ್ರಿ.'' ಎಂದಳು.

ಹೀಗೆ ಹುಡುಗ ಭರಮ್ಯಾ ಸೋನುಬಾಯಿಯ ಮನೆಯಲ್ಲಿ ನಿಂತ. ಸಾಹುಕಾರ ತಮ್ಮಣ್ಣಪ್ಪ ಹುಡುಗನ ಕಾಳಜಿ ನೋಡಲು ವಾರದಲ್ಲಿ ಒಂದೆರಡು ದಿನವಾದರೂ ಅಂಗಡಿಗೆ ಬಂದು ಸೋನುಬಾಯಿಯ ಮುಂದೆ ಕೂಡ್ರಲು ಸುರು ಮಾಡಿದ.

ಹುಡುಗ ಭರಮ್ಯಾ ಸೋನುಬಾಯಿಯ ಮನೆಯಲ್ಲಿ ನಿಂತ ಮೊದಲು ಅಂಗಡಿಯಲ್ಲಿ ಚೂರು ಪಾರು ಕೆಲಸ ಮಾಡುವದು, ಉರುವಲು ತಂದು ಕೊಡುವದು ಮಾಡುತ್ತಿದ್ದ. ಸೋನುಬಾಯಿಗೆ ಈ ಹುಡುಗ ತಿನ್ನುವ ಊಟಕ್ಕೆ ಇಷ್ಟು ಸಣ್ಣ ಕೆಲಸ ಅತಿ ಕಡಿಮೆ ಎನ್ನುವ ವಿಚಾರ ಬಂದಿತು. ಹುಡುಗ ಹರಾಮಿ ತಿನ್ನುತ್ತಿದ್ದಾನೆ ಎಂದೆನಿಸಲು ಸುರು ವಾಯಿತು. ಹೀಗಾಗಿ ಹುಡುಗನಿಗೆ ಕೆಲಸ ಹಚ್ಚುವದಕ್ಕಾಗಿಯೇ ಒಂದು ಎಮ್ಮೆ ಕೊಂಡು ತಂದಳು. ಇದರಿಂಗಾಗಿ ಹತ್ತು ವರ್ಷದ ಹುಡುಗ ಎಮ್ಮಿ ಕೆಲಸವನ್ನು ಕೂಡಾ ನಿಭಾಯಿಸಬೇಕಾಯಿತು. ಮುಂಜಾನೆಯಿಂದ ಸಾಯಂಕಾಲದ ವರೆಗೂ ಹುಡುಗ ಓಡಾಡುತ್ತ ಕೆಲಸ ಮಾಡುತ್ತಲೇ ಇದ್ದ. ಆದರೆ ಸೋನುಬಾಯಿಗೆ ಯಾವುದು ಮನಸ್ಸಿಗೆ ಬರುತ್ತಿಗ್ಗಿಲ್ಲ. 'ಭರಮ್ಯಾ' ಎಂದು ಅದರ ಏನಾದರೂ ಒಂದೆ ವಿಶೇಷಣ ಹಚ್ಚಿಯೇ ಕರೆಯುತ್ತಿದ್ದಳು.

ಇದೆಲ್ಲದರ ಜೊತೆ ಸೋನುಬಾಯಿ ಒಂದು ನಾಯಿ ಸಾಕಿದ್ದಳು ಸದಾ ಹೊಲದ ಗುಡಿಸಲು ಮುಂದೆ ಜಾಲಿ ಗಿಡಕ್ಕೆ ಸರಪಣಿ ಹಚ್ಚಿ ನಾಯಿಯನ್ನು ಕಟ್ಟಿರುತ್ತಿದ್ದಳು. ಇದು ಇವಳ ಹೊಲದ ಕಾವಲು ಮಾಡದೇ ಯಾರು ಬಂದರೂ ಎದ್ದು ಬೊಗಳದೇ ಜಾಲಿ ಗಿಡದ ನೆರಳಲ್ಲಿ ಸುರುಳಿಯಾಗಿ ಸುಮ್ಮನೆ ಬಿದ್ದಿರುತ್ತಿತ್ತು. ಕುನ್ನಿ ಇದ್ದಾಗಿನಿಂದಲೂ ಅದನ್ನು ಗೂಟಕ್ಕೆ ಕಟ್ಟಿಯೇ ಇಟ್ಟದ್ದರಿಂದ ಅದರ ಕಾಲುಗಳು ಡೊಂಕಾಗಿ ನಡೆಯುವಾಗ ಕುಂಟುತ್ತ ಸಾಗಿ ಓಡಿ ಹೋಗಲು ಪ್ರಯತ್ನಿಸಿದರೆ ಬೀಳುತ್ತಿತ್ತು. ಹೀಗಾಗಿ ಊರವರೆಲ್ಲಾ 'ಸೋನುಬಾಯಿಯ ತಿರಪಕಾಲಿನ ನಾಯಿ' ಎಂದು ಕರೆಯುತ್ತಿದ್ದರು.

ಸೋನುಬಾಯಿ ಮನೆಯಲ್ಲಿ ಆಳು ಭರಮ್ಯಾ,




"ಅಲ್ಲಾ ಅಮ್ಮಾ, ನೀನು ಇಷ್ಟು ಸಣ್ಣ ಪೆಟ್ಟಿಗೆಯಲ್ಲಿ ಕುಳಿತು ಮಾತಾಡಿದ್ದು ಹೇಗೆ?"

ಗಂಡ ತಿಪ್ಪಣ್ಣ ಮತ್ತು ನಾಯಿ ಯಾರೂ ಹೆಚ್ಚು ಕಮ್ಮಿ ಅಲ್ಲ. ಎಲ್ಲರೂ ಬಿಟ್ಟಿಕೂಳು, ಸರಾಮಿ ಕೂಳು ತಿನ್ನುವವರು ಎಂದು ಸೋನುಬಾಯಿ ತೀರ್ಮಾನಿಸಿಬಿಟ್ಟಿದ್ದಳು. ಹೀಗಾಗಿ ಸ್ವತಃ ಗಂಡ ನೆನಿಸಿದ ತಿಪ್ಪಣ್ಣನೇ ಮನೆಯಲ್ಲಿ 'ಊಟ' ಎನ್ನುವ ಶಬ್ದ ನುಡಿಯುತ್ತಿರಲಿಲ್ಲ. ಇಂತಹದರಲ್ಲಿ ಆಳು ಹುಡುಗ ಭರಮ್ಯಾ ಊಟ ಎನ್ನುವ ಶಬ್ದ ಉಚ್ಚರಿಸುವದು ಹೇಗೆ ಸಾಧ್ಯ? ಆದ್ದರಿಂದ ಯಾವತ್ತೂ ಇದ್ದರೂ ಅವನು 'ರೊಟ್ಟಿ, ಕುಡ್ರಿ' ಎಂದು ಬೇಡುತ್ತಿದ್ದ. ಹುಡುಗ ದೀನನಾಗಿ ಹೀಗೆ ಬೇಡಿದರೆ ಅವಳಿಗೆ ಆನಂದವಾಗುತ್ತಿತ್ತು. ತಂಗಳ ತುಣುಕುಗಳು ಇದ್ದರೆ ಸೋನುಬಾಯಿ ಅಕ್ಕರತಿಯಿಂದಲೇ ಕೊಡುತ್ತಿದ್ದಳು. ಅಕಸ್ಮಾತ್ ತಂಗಳ ರೊಟ್ಟಿ ಇರದೆ ಬಿಸಿ ರೊಟ್ಟಿ ಬಡಿದು ಇಟ್ಟಿದ್ದರೆ ಭರಮ್ಯಾ ಅವು ತಂಗಳಾಗುವವರೆಗೂ ತಿನ್ನುವದಕ್ಕಾಗಿ ಕಾಯಬೇಕಾಗುತ್ತಿತ್ತು. ಆಳುಗಳಿಗೆ ಬಿಸಿ ರೊಟ್ಟಿ ಹಾಕಿದರೆ ಹ್ಯಾಂಗ? ಅನ್ನುವ ಸಿದ್ಧಾಂತ ಅವಳದು.

ಸೋನುಬಾಯಿಯ ಹೊಲದ ದಾರಿಯಲ್ಲಿಯೇ ರೇಣವ್ವ ಮುದುಕಿಯ ಗುಡಿಸಲಿತ್ತು. ಮುದುಕಿಗೆ ತನ್ನವರೆಂದು ಯಾರೂ ಇರಲಿಲ್ಲ. ದಿನಾ ಊರಲ್ಲಿ

ಬಂದು, ಅವರಿವರ ಮನೆಯಲ್ಲಿ ಹೆಂಡಿಕುಳ್ಳು ಹಚ್ಚಿ ಅವರು ಕೊಟ್ಟ ರೊಟ್ಟಿ ತೆಗೆದುಕೊಂಡು ಹೋಗುತ್ತಿದ್ದಳು. ಊರಲ್ಲಿ ಯಾರದಾದರೂ ಮದುವೆ-ಮುಂಜಿವೆ ಆದರೆ ಓಣಿಯೆಲ್ಲಾ ಕಸಗುಡಿಸುತ್ತಿದ್ದಳು. ಅಮವಾಸ್ಯೆ ಮರುದಿನ ತಂಗಳ ಹೋಳಿಗೆಯನ್ನು ಕೇಳಿ ಇಸಿದುಕೊಂಡು ಹೋಗುತ್ತಿದ್ದಳು. ಭರಮ್ಯಾ ದಿನಾ ಅವಳ ಗುಡಿಸಲು ಮುಂದೆ ಹಾದು ಹೋಗುವಾಗ ಮುದುಕಿ ಪ್ರೀತಿಯಿಂದ ಹುಡುಗನನ್ನು ಮಾತಾಡಿಸುತ್ತಿದ್ದಳು. ಬಿಸಿಲು ದಿನವಾದರೆ ಒಂದೊಂದು ಸಲ ಹುಡುಗ ಮುದುಕಿಯ ಗುಡಿಸಲು ಮುಂದೆ ನಿಲ್ಲುತ್ತಿದ್ದ. ಹುಡುಗ ಹಸಿದಿದ್ದಾನೆ ಎನ್ನುವದು ಅವಳಿಗೆ ತಿಳಿಯುತ್ತಿತ್ತು. ಆದರೆ ಅವಳು ಹುಡುಗನಿಗೆ ರೊಟ್ಟಿ ಕೊಡುವ ಹಾಗಿಲ್ಲ. ಏಕೆಂದರೆ ಭರಮ್ಯಾ ಊರ ಮನಿ ಹುಡುಗ. ರೇಣವ್ವ ಮುದುಕಿಯ ರೊಟ್ಟಿಯನ್ನು ತಿನ್ನುವಂತಿಲ್ಲ. ಹುಡುಗ ಉಪವಾಸ ಬಿದ್ದರೂ ಸರಿ, ಜಾತಿ ಕೆಡಬಾರದು ಇದು ಮೂರ್ಖ ಸಮಾಜದ ನಡತೆ. ಆದರೂ ಒಂದೊಂದು ಸಲ ಮುದುಕಿಗೆ ಕಳ್ಳು ಚುರಕ್ ಎಂದು ಭರಮ್ಯಾನನ್ನು "ರೊಟ್ಟಿ ತಿಂತೀಯಾ ಬಾಳಾ?" ಎಂದು ಕೇಳುವಳು.

ಈತ ಚಕಮಕ ಮುಖ ಮಾಡಿ ನಿಂತು ಹಿಂದೆ ಮುಂದೆ ನೋಡಿ "ಒಲ್ಲೆ" ಎನ್ನುತ್ತಿದ್ದ.

"ಯಾರ ಮುಂದೂ ಹೇಳೂದುಲ್ಲ. ತಿನ್ನ ಕೂಸ," ಎನ್ನುತ್ತಿದ್ದಳು ರೇಣವ್ವ. ಆದರೆ ಹುಡುಗನಿಗೆ ರೇಣವ್ವ ಮುದುಕಿಯ ರೊಟ್ಟಿ ತಿನ್ನುವ ಧೈರ್ಯ ಆಗುತ್ತಿರಲಿಲ್ಲ. "ಹೆಂತಾ ನಸೀಬ ಪಡಕೊಂಡ ಬಂದೀಪಾ ನೀ" ಎನ್ನುತ್ತಿತ್ತು ಮುದುಕಿ. ಹುಡುಗ ಸಪ್ಪಗೆ ಮುಖಮಾಡಿ ಸೋನುಬಾಯಿ ಕಡೆಯಿಂದ ಬೈಸಿಕೊಂಡು ಕೆಲಸ ಮಾಡುತ್ತಲೇ ಇದ್ದ.

ಆದರೆ ಇಂದು ಸೋನುಬಾಯಿ ಮುಂಜಾನೆಯಿಂದಲೇ ದುಮುಗುಡುತ್ತ ಮಧ್ಯಾಹ್ನ ಸೂರ್ಯ ನೆತ್ತಿಯ ಮೇಲೆ ಬಂದರೂ ಹುಡುಗ ಭರಮ್ಯಾನಿಗೆ ಊಟ ಹಾಕಿರಲಿಲ್ಲ. ನಿನ್ನೆ ರಾತ್ರಿ ಕೂಡಾ ಏನೂ ತಿಂದಿಲ್ಲ ಎಂದು ಭೇಷಕ್ ತೀರ್ಮಾನ ಮಾಡಿದ್ದ ಭರಮ್ಯಾ ಬಹಳ ಹಸಿದುಕೊಂಡೇ ಅಂಗಡಿ ಕಟ್ಟೆಯ ಮೇಲೆ ಸೋನುಬಾಯಿಯನ್ನು ನೋಡುತ್ತ ಕೂತಿದ್ದ.

"ಇಲ್ಯಾಕ ಬಿಕ್ಕೊಂಡ ಕುಂತದಿ? ಎಮ್ಮಿಗಿ ಮೆವ್ವ ಅರೆ ಹಾಕಿ ಬಾ" ಎಂದಳು.

"ಇದೇ ಈಗ ಹಾಕೇನ್ರಿ."

"ಸುಳ್ಳ ಹೇಳ್ತಿ? ಹಾದರಕ ಹುಟ್ಟಿದಾವನ."

ಭರಮ್ಯಾನಿಗೆ ಸಿಟ್ಟು ಬರಲಿಲ್ಲ. ಮನಸ್ಸಿಗೆ ನೋವು ಆಗಲಿಲ್ಲ. ಏಕೆಂದರೆ ಹಾದರ ಎನ್ನುವದು ಸೋನುಬಾಯಿಯ ಪ್ರೀತಿಯ ಶಬ್ದ. ಭರಮ್ಯಾನಿಗೆ ಆ ಶಬ್ದ ಅರ್ಥವಾಗದ ಬೈಗುಳ ಮಾತ್ರ.

ಇಷ್ಟಾಗುವದರಲ್ಲಿಯೇ ಸೋನುಬಾಯಿ ಅಂಗಡಿಗೆ ಸಂತೆಗೆ ಬಂದ ಹೆಂಗಸೊಬ್ಬಳು "ಹೊಲದಾಗ ನಿಮ್ಮ ನಾಯಿ ಹಸದ ಕುಂಯ್‌ಗುಡಾಕ ಹತ್ತೇತಿ. ಬಿಸಲಾಗ ಬ್ಯಾರೆ ಕಟ್ಟೇರಿ." ಅಂದಳು.

ಸೋನುಬಾಯಿಗೆ ನಿನ್ನೆ ಮುಂಜಾನೆಯಿಂದಲೂ ನಾಯಿಗೆ ಏನೂ ಹಾಕಿಲ್ಲ ಎನ್ನುವದು ನೆನಪಿಗೆ ಬಂತು. "ಭರಮ್ಯಾ," ಎಂದು ಚೀರಿ ಒಳಗೆ ಹೋದಳು. ಅಡುಗೆ ಮನೆಗೆ ಹೋಗಿ ತಂಗಳ ರೊಟ್ಟಿ ತುಣುಕು ಹಾಗು ನಿನ್ನೆ ಮುಂಜಾನೆ ಮಾಡಿದ ಹೊತ್ತಕ ನುಚ್ಚ ಅಲ್ಯುಮಿನಿಯಂ ಕಿಟ್ಟಲಿಯಲ್ಲಿ ಹಾಕಿ ಮೇಲೆ ಹಳಸಿದ ಕಾರಬ್ಯಾಳಿ ಸುರಿದಳು. ಕಿಟ್ಟಲಿಯನ್ನು ಹೊರಗೆ ತಂದು,

"ಹೋಗ, ನಾಯಿಗೆ ರೊಟ್ಟಿ ಹಾಕಿ ಬಾ," ಎಂದು ಆಜ್ಞಾಪಿಸಿದಳು.

ಹುಡುಗ "ಹೂನ್ರಿ" ಎಂದು ಹೇಳಿ, "ನನಗ ರೊಟ್ರಿ?" ಎಂದ.

"ಮದಲ ನಾಯಿಗೆ ಹಾಕಿ ಬಾ. ನೀ ಮೂರಕೂಳ ಬಿಗದ ಇರತಿ. ಹೊಟ್ಟಿ ಐತೊ? ಯಾನ ರಾಕ್ಷಸ ಐತೊ?"

"ನಾ ಹರ್‍ಯಾನ ಹಿಡುದು ಯಾನೂ ತಿಂದಿಲ್ಲರಿ."

"ಮತ್ತ ಸುಳ್ಳ ಹೇಳ್ತಿ? ತಿನಲಾರದ ಇಂಥಾ ಮಾತ ಬರತಾವ ಯಾನ? ಹೋಗ ನಾಯಿಗೆ ಪಹಲೇ ಹಾಕಿ ಬಾ. ನೀ ಹಿಂದಾಗಡೆ ತಿನ್ನಕ್ಯಾ."

"ನನಗ ಹಸೂ ಆಗ್ಯಾವರಿ," ಎಂದ ಹುಡುಗ.

"ನಮಗ ಆಗಿಲ್ಲಾ ಹಸು? ಹೋಗ ದೌಡ ಹೋಗಿ ಬಾ," ಅಂದಳು.

ಭರಮ್ಯಾ ನಿಧಾನ ಕಿಟ್ಟಲಿ ತೆಗೆದುಕೊಂಡು

ಹೊಲದ ಕಡೆ ನಡೆದ. ಬ್ಯಾಸಗಿ ದಿನ. ನೆತ್ತಿಯ ಮೇಲೆ ಸುಡುವ ಬಿಸಿಲು. ಸತ್ತವರ ಮನೆಯಂತೆ ನಿಶ್ಶಬ್ದ ವಾತಾವರಣ. ಒಂಚೂರೂ ಗಾಳಿ ಇಲ್ಲ. ಜ್ವಾಳಾ ಕಿತ್ತ ಒಗದ ಹೊಲಾ. ಬಟಾಬಯಲ. ರಣಾರಣಾ ಹೊಡೆಯುತ್ತಿತ್ತು. ಹುಡಿ ಮಣ್ಣಿನ ರಸ್ತೆ ಎಲ್ಲಾ ಕಾಯ್ದು ಸುಡುತ್ತಿತ್ತು. ಬರಿಗಾಲಿನಲ್ಲಿ ಹುಡುಗ ಕೈಯಲ್ಲಿ ಕಿಟ್ಲಿ ಹಿಡಿದುಕೊಂಡು ರಸ್ತೆಯ ಮೇಲೆ ನಡೆದ. ಎಳೆಯ ಕಾಲುಗಳು ಹುರು ಪುಡಿಸಿ ಹೋದವು. ಹೀಗೆ ಹೋದರೆ ಕಾಲುಗಳಿಗೆ ಗುಳ್ಳೆ ಏಳುವದೇನು ಅಚ್ಚರಿ ಅಲ್ಲಾ. ಹುಡುಗ ಬಿಸಿ ತಾಳಲಾರದೆ ರಸ್ತೆಯ ಮೇಲೆ ಎತ್ತು ಎಮ್ಮಿಗಳು ಹಾಕಿದ ಹೆಂಡಿಯ ಮೇಲೆ ಕಾಲಿಟ್ಟು ಕಾಯ್ದ ಕಾಲು ಗಳನ್ನು ತಂಪು ಮಾಡಿಕೊಳ್ಳುತ್ತಿದ್ದ. ಮುಂದೆ ಹೆಂಡಿ ಬರುವವರೆಗೂ ರಸ್ತೆಯ ಮೇಲೆ ದುಡು ದುಡು ಓಡುತ್ತಿದ್ದ. ಒಮ್ಮೊಮ್ಮೆ ಬೇಲಿ ಮಗ್ಗುಲದ ಹುಲ್ಲುಗರಿಯ ಮೇಲೆ ಕಾಲು ಇಟ್ಟು ನಿಲ್ಲುತ್ತಿದ್ದ. ಹೊಟ್ಟೆಯಲ್ಲಿ ಹಸಿವು. ನೆತ್ತಿಯ ಮೇಲೆ ಬಿಸಿಲು. ನೆಲದ ಮೇಲೆ ಬೆಂಕಿ ಆತಪ ಮಣ್ಣು. ಹುಡುಗ ಹ್ಯಾಂಗೋ ಹೆಂಡಿ ತುಳಿಯುತ್ತ, ಹುಲ್ಲು ಗರಿಯ ಮೇಲೆ ಕಾಲಿಡುತ್ತ, ಓಡುತ್ತ ಗುಡಿಸಲು ಮುಟ್ಟಿದ.

ಆದರೆ ಸೋನುಬಾಯಿಯ ನಾಯಿ ಹಸಿದು ಹಸಿದು ಒದರಿ, ಜಗ್ಗಾಡಿ ಸರಪಳಿಯನ್ನು ಕಿತ್ತು ಕೊಂಡು ಓಡಿಹೋಗಿತ್ತು. ಕಿಟ್ಲಿಯನ್ನು ನಾಯಿ ಕೊಪ್ಪರಿಗೆಯಲ್ಲಿ ಡಬ್ಬು ಮಾಡಿ ರೊಟ್ಟಿ ಸುರುವಿದ ಭರಮ್ಯಾ. ನಾಯಿ ಇಲ್ಲೇ ಎಲ್ಲೊ ಇರಬೇಕೆಂದು ಗುಡಿಸಲು ಮುಂದೆ ಬಂದು, "ಹುಲು....ಲು...ಲು..... ಬಾ....ಬಾ..." ಎಂದು ಕರೆದ. ಹುಡುಗ ಎಷ್ಟು ಕರೆದರೂ ನಾಯಿ ಅಲ್ಲಿ ಇರದೇ ಇದ್ದುದರಿಂದ ಬರಲಿಲ್ಲ. ಬೇಲಿ ದಂಡೆಯ ಜಾಲಿ ಗಿಡದ ಕೆಳಗೆ ಹುಡುಗ ಕುಳಿತ. ತಾಳಲಾರದ ಹಸಿವೆ. ನಿಧಾನವಾಗಿ ಕೊಪ್ಪರಿಗೆಗೆ ಕೈ ಹಾಕಿ ಹಳಸಿದ ಕಾರಬ್ಯಾಳಿಯಲ್ಲಿ ನೆನೆದ ಒಂದು ತುತ್ತು ರೊಟ್ಟಿಯನ್ನು ಎಳೆದು ಬಾಯಿಗಿಟ್ಟ. ಬಾಯಿಗೆ ಒಂದು ತುತ್ತು ಬಿದ್ದದ್ದೆ ತಡ, ತಿನ್ನ ಬಾರದು ಎನ್ನುವ ಸಂಕಲ್ಪ ಹೋಗಿ ನಿಧಾನವಾಗಿ ತಿನ್ನುತ್ತಲೇ ಹೋದ....

ಅದೇ ಹಾದಿಯಲ್ಲಿ ಹೋಗುವ ಬ್ಯಾಡರ ಯಮನ್ನಾ ಹುಡುಗ ನಾಯಿ ರೊಟ್ಟಿ ತಿನ್ನುವುದನ್ನು ನೋಡಿದ.

"ಯಾನೋ ಭರಮ್ಯಾ, ನಾಯಿ ರೊಟ್ಟಿ ತಿನ್ನಾಕ ಹತ್ತಿ? ದನಾ ಅದಿ ಯಾನಲೆ?" ಅಂದ.

ಹುಡುಗ ಹೆದರಿ, "ಇಲ್ಲ..... ಇಲ್ಲ..." ಎಂದ.

"ನಾ ನೋಡೇನಿ ಮಗನ. ಸುಳ್ಳ ಹೇಳ್ತಿ?"

"ಇಲ್ಲ, ನಾ ಯಾನ ತಿಂದಿಲ್ಲ," ಎಂದು ಹುಡುಗ ಮತ್ತೆ ಮತ್ತೆ ಹೇಳಿದ. ಬ್ಯಾಡರ ಯಮ ನ್ನಾನಿಗೆ ಇದೊಂದು ಮೋಜಾಯಿತು. ಮಜಾ ಎನಿ ಸಿತು. ಎದುರಿಗೆ ಬಂದವರಿಗೆಲ್ಲಾ ಇದೊಂದು ಮಹಾ ಸುದ್ದಿ ಎಂಬಂತೆ. "ಭರಮ್ಯಾ ನಾಯಿ ಕೊಪ್ಪರಿಗ್ಯಾಂದ ರೊಟ್ಟಿ ತಿಂದಾನ" ಎಂದು ಹೇಳು ತ್ತಲೇ ಹೋದ.

"ಐ, ಹ್ಯಾಂಗ ಅದು?" ಎಂದು ಉದ್ಗಾರ ತೆಗೆ ದರು ಹೆಂಗಸರು. "ಬಿಸಾರಿ ಚೋಟ" ಎಂದರು ಗಂಡಸರು.

## ಹತ್ತಿ ಕಾಳಿಗೀಗ ಉಚ್ಛ್ರಾಯದ ಕಾಲ

ಹತ್ತಿಕಾಳಿನಿಂದ ಎಣ್ಣೆ ತೆಗೆಯಬಹುದೆಂ ಬುದು ಎಲ್ಲರಿಗೂ ಗೊತ್ತಿದ್ದದ್ದೆ. ಆದರೆ ಈ ಎಣ್ಣೆಯಲ್ಲಿ ಗೋಸಿಪೋಲ್ ಎಂಬ ವಿಷಪದಾ ರ್ಥವಿರುತ್ತಿದ್ದುದರಿಂದ ಹತ್ತಿಕಾಳಿನ ಎಣ್ಣೆ ಸೇವ ನೆಗೆ ಯೋಗ್ಯವಲ್ಲವೆಂದು ಡಾಕ್ಟರರು ನಿರ್ಧರಿಸಿ ದ್ದರು.

ಆದರೆ ಅದೆಲ್ಲ ಹಳೆಯ ಮಾತು. ಗೋಸಿ ಪೋಲ್ ಇಲ್ಲದ ತಳಿಗಳನ್ನೇ ಈಗ ಬೆಳೆಯಲಾ ಗುತ್ತಿರುವುದರಿಂದ ಹತ್ತಿಕಾಳಿನ ಎಣ್ಣೆಯನ್ನು ಸೇವಿ ಸಲು ಡಾಕ್ಟರರೇ ಹೇಳುತ್ತಿದ್ದಾರೆ. ಏಕೆ ಎನ್ನು ತ್ತೀರಾ? ಹತ್ತಿಕಾಳಿನ ಎಣ್ಣೆ ಪ್ರೋಟೀನಿಂದಲೂ ವಿಟಮಿನ್ ಇ ಇಂದಲೂ ಸಮೃದ್ಧವಾಗಿದೆ. ಕೊಬ್ಬಿನ ಅಂಶ ಕಡಿಮೆ ಇದೆ. ಎಣ್ಣೆ ರುಚಿಕರವೂ ಆಗಿದೆ. ಪಶ್ಚಿಮ ಆಫ್ರಿಕದ ದೇಶಗಳಲ್ಲೀಗ ಹತ್ತಿ ಕಾಳಿನ ಎಣ್ಣೆಯಷ್ಟೇ ಅಲ್ಲ, ಹತ್ತಿಕಾಳಿನ ಹಿಟ್ಟಿ ನಿಂದ ತಯಾರಿಸಿದ ಬ್ರೆಡ್ ಹಾಗೂ ಶಿಶು ಆಹಾರಗಳಿಗೂ ಭಾರಿ ಬೇಡಿಕೆ.

ಹುಡುಗ ಭರಮ್ಯಾ ನಾಯಿ ರೊಟ್ಟಿ ತಿಂದ ಸುದ್ದಿಯನ್ನು ಸೀದಾ ಸೋನುಬಾಯಿ ಅಂಗಡಿಗೆ ಹೋಗಿ ಹೇಳಿದ ಬ್ಯಾಡರ ಯಮನ್ಯಾ. ಹೀಗೆ ಹೇಳು ವದರಿಂದ ತಾನು ಯಾವಾಗಾರೆ ಉದ್ರಿ ಬೇಡಿದರೆ ಇಲ್ಲ ಅನ್ನಲಿಕ್ಕಿಲ್ಲ ಎನ್ನುವ ದೂರದ ಆಶೆ ಹಾಗೂ ಒಂದಿಷ್ಟು ಸೋನುಬಾಯಿ ಜೊತೆ ಹರಾಮಿ ಮಾತಾಡಿ ಪುಕ್ಕಟೆಯಾಗಿ ಒಂದು ಬೀಡಿ ಇಸ ಕೊಂಡು ಸೇದಿ ಅವಳಿಗೆ ಒಳ್ಳೆಯವನಾಗಬೇಕೆಂದು ಹುನ್ನಾರ ಇತ್ತು ಯಮನ್ಯಾನಿಗೆ. ಹುಡುಗ ನಾಯಿ ರೊಟ್ಟಿ ತಿಂದ ವಿಷಯ ಅಷ್ಟೇ ಅಲ್ಲ, ಅವಳ ನಾಯಿ ಸರಪಳಿ ಸಮೇತ ಎಲ್ಲಿಯೋ ಹೋಗಿದೆ ಎಂದು ಹೇಳಿದ. ಸೋನುಬಾಯಿಗೆ ಸಿಟ್ಟು ತಡೆಯುವುದು ಸಾಧ್ಯವಾಗಲಿಲ್ಲ.

"ಬರ್ಲಿ ಆ ಹಾಟ್ಯಾ" ಎಂದು ಕಾಯ್ದಳು.

ಅಷ್ಟರಲ್ಲಾಗಲೇ ಹೊಲದಿಂದ ಭರಮ್ಯಾ ಮನಿಗೆ ಬಂದ. ಅವನನ್ನು ನೋಡಿದ್ದೇ ತಡ ಸೋನುಬಾಯಿ,

"ಹಾಟ್ಯಾ ನನ್ನ ನಾಯಿ ಎಲ್ಲಿ ಹೋತ? ರೊಟ್ಟಿ ತಿನ್ನೂ ಸಲವಾಗೆ ನಾಯಿ ಓಡಿಸಿದಿ ಯಾನ?" ಎಂದು ಚೀರಿದಳು.

"ನಾ ಹೊಲಕ್ಕ ಹೋಗೂದರಾಗ ನಾಯಿ ಇದ್ದಿಲ್ಲರಿ."

"ಎಲ್ಲಿ ಹೊಕ್ಕೈತೋ ಭಾಡ್ಯಾ ನನ್ನ ನಾಯಿ? ನನ್ನ ಬಂಗಾರದಂತ ಸರಪಣಿ, ನಿನ್ನ ಮಾರಿದ್ರೂ ಬರಂಗಿಲ್ಲೊ, ಆ ಸರಪಳಿ ಕಿಮ್ಮತ್ತಾ." ಎಂದು ಒದರ್ಯಾಡಲು ಸುರು ಮಾಡಿದಳು.

ಹುಡುಗ ಭರಮ್ಯಾ ಏನೂ ಮಾಡಲು ತಿಳಿಯದೆ ಅಲ್ಲೇ ನಿಂತ. ಸೋನುಬಾಯಿ ಎದೆ ಎದೆ ಬಡಿದುಕೊಂಡು,

"ಮನ್ನಿ ಎಲ್ಲಾಮ ಜಾತ್ಯಾಗ ತಂದೀನೋ ಸರಪಳೀನಾ, ಇಪ್ಪತ್ತ ರೂಪಾಯಿ ಹ್ಯಾದುವೊ ನನ್ನ...." ಎಂದು ಎತ್ತರದ ದನಿಯಲ್ಲಿ ಹೇಳುತ್ತ ಹೋದಳು. ಅಷ್ಟರಲ್ಲಾಗಲೇ ಅಂಗಡಿಯ ಮುಂದೆ ಜನ ಜಮಾಯಿಸಿದ್ದರು. ಸಾವಕಾರ ತಮ್ಮಣ್ಣಪ್ಪನು ಬಂದ.

"ಭರಮ್ಯಾ.... ಬೇಕಂತ್ಲೆ ನಾಯಿ ಬಿಚ್ಚಿ ಓಡ್ಸಿ ಸರಪಳಿ ಮಾರಕೊಂಡ ತಿಂದಿಯಾನೋ?" ಎನ್ನುತ್ತಿದ್ದಳು.

ಭರಮ್ಯಾನ ನಿರೀಕ್ಷೆಗೆ ಮೀರಿ ಇವೆಲ್ಲಾ ಮಾತುಗಳು ಸೋನುಬಾಯಿ ಕಡೆಯಿಂದ ಬರುತ್ತಿದ್ದವು. ಹತ್ತು ವರ್ಷದ ಹುಡುಗ ಭರಮ್ಯಾ ಇವಳ ಬಾಯಿಗೆ ಹೆದರಿ ಮುಂದೇನಾಗುತ್ತದೋ ಎನ್ನುವ ದಿಗಿಲಿನಲ್ಲಿ ಬಿದ್ದಿದ್ದ.

ಆದರೆ ಸೋನುಬಾಯಿಯ ಸಿಟ್ಟು ಬರೀ ಬೈಯುವುದರಲ್ಲಿ ಮುಗಿಯಲಿಲ್ಲ. ಮನೆಯ ಒಳಗೆ ಹೋಗಿ ಚೊಗಚಿ ಕಟ್ಟಿಗೆ ತಂದು ಹುಡುಗನನ್ನು ಉಳ್ಳಿಸ್ಯಾಡಿ ಬಡಿಯಲು ಸುರು ಮಾಡಿದಳು. ಭರಮ್ಯಾ "ಅಯ್ಯೊ... ಅಯ್ಯೊ..." ಎನ್ನುತ್ತ ಪೆಟ್ಟು ತಿನ್ನುತ್ತಿದ್ದ. ಹೊಡೆಯುವದನ್ನು ನೋಡುತ್ತಿದ್ದವರು, "ಯಾಕ ಹೊಡೀತಿ ಸೋನುಬಾಯಿ?" ಎಂದು ಕೇಳಲಿಲ್ಲ. ತಮಗೆ ಸಂಬಂಧ ಇಲ್ಲದ ಹುಡುಗ ತಾವ್ಯಾಕೆ ಸೋನುಬಾಯಿಗೆ ಕೆಟ್ಟಾಗಬೇಕು? ಎನ್ನುವ ಧೋರಣೆ ಅವರದು. ಇದೆಲ್ಲದರಕ್ಕಿಂತ ಹೆಚ್ಚಾಗಿ ತಮ್ಮಣ್ಣಪ್ಪ ಸೋನೂಬಾಯಿಗೆ ಹೊಡೆಯಬೇಡ ಎಂದು ಹೇಳಬಹುದಾಗಿತ್ತು. ಆದರೆ ಇಷ್ಟು ಕೂಡಿದ ಮಂದಿಯಲ್ಲಿ ಸೋನುಬಾಯಿಯನ್ನು ಬೆದರಿಸಿದರೆ ಎಲ್ಲಿ ಅವಳ ಮರ್ಜಿ ಹಾಳು ಮಾಡಿಕೊಳ್ಳಬೇಕಾಗುತ್ತದೆಯೋ ಎನ್ನುವ ಆತಂಕ ಅವನದು. ಇದೀಗ ತಮ್ಮಿಬ್ಬರ ಸ್ನೇಹ ಕುದುರುತ್ತಿರುವ ವೇಳೆಯಲ್ಲಿ ಈ ಅನಾಥ ಹುಡುಗನಿಗಾಗಿ ಏಕೆ ಅವಳೊಡನೆ ವಿರಸ ಕಟ್ಟಿಕೊಳ್ಳಬೇಕು? ಎಂದು ಸುಮ್ಮನಾದ. ಇವಳು ಬಗ್ಗಿ ಹುಡುಗನನ್ನು ಹೊಡೆಯುವಾಗ ಸೆರಗು ಜಾರಿ ಕೆಳಗೆ ಬಿದ್ದರೂ ಅದರ ಖಬರ ಇಲ್ಲದೆ ಬೀಸಿ ಬೀಸಿ ಹೊಡೆಯುತ್ತಿದ್ದಳು. ನೋಡುತ್ತ ನಿಂತ ಜನ ಇನ್ನೊಂದಿಷ್ಟು ಹುಡುಗನನ್ನು ಹೊಡೆಯಲಿ ಎನ್ನುವ ಒಳ ಆಶೆಗಳನ್ನು ಇಟ್ಟುಕೊಂಡೇ ನೋಡುತ್ತಿದ್ದರು.

ಇದೆಲ್ಲಾ ನಡೆಯುತ್ತಿದ್ದಾಗ ಇನ್ನೇನು ಹುಡುಗ ಸತ್ತೇ ಹೋಗುತ್ತಾನೆ ಎನ್ನುವ ಸ್ಥಿತಿಯಲ್ಲಿದ್ದಾಗ ರೇಣವ್ವ ಮುದುಕಿ ಓಡೋಡಿ ಬಂತು.

"ಸೋನುಬಾಯಾರ, ಸಾಕ ಬಿಡ್ರಿ, ಕೊಂದೀರಿ ಕೂಸಾ," ಅಂದಳು.

"ನೀ ಯಾವಕ್ಕೆ ಗದಡಿ ನನ್ನ ಕೇಳಾಕ್ಕಿ?"

"ಯವ್ವಾ ನಾ ಯಾರss ಇರ್ಲಿ, ಹರ್ಯಾನಿಂದ ಹಸದ ಕೂಸ್ಗಿ ರೊಟ್ಟಿ ಕೊಡೂದು ಬಿಟ್ಟು ಬಡ್ಯಾಕ

ಹತ್ತೀದಿ. ತಾಯ ಸತ್ತ ಪರದೇಶಿ ಐತಿ ಅದು."

"ಔ ಸಾಕ! ಕೇಳ್ರೇನೆ ಮಂದ್ಯಾರ್ಯಾ ಹೆಂಡಿ ಕುಳ್ಳ ಬಡಿ ಬಿದ್ದಾಡಿ ಮಾತs" ಎಂದು ನೇರವಾಗಿ ಮುದುಕಿಗೆ, "ನೀ ಕೊಡತಿ ಯಾನ ಸರಪಳಿ?" ಎಂದಳು.

"ಸರಪಳೀದು ಯಾನ ಎಂತಾ ಕೇಳಾಕ ದಿನಾ ಯಾನ ಸತ್ತಿಲ್ಲ ಎವ್ವಾ," ಎಂದು ಕೂಡಿದ ಮಂದಿಗೆ, "ನಿಮ್ಮ ಕಣ್ಣಾಗ ಕೂಸಿನ ಕಳ್ಳ ಕಣೂದಿಲ್ಲ ಯಾನ್ರೆಪಾ?" ಎಂದಳು. ಜನ ಸುಮ್ಮನಾದರು ಮುದುಕಿ ಹುಡುಗನ ಕೈ ಓಡಿದು ಎದೆಗೆ ಅವುಚಿಕೊಂಡು,

"ಬಾ ಬಾಳಾs, ನನ್ನ ಗುಡಿಸಲಿಗಿ," ಅಂತು.

"ಏಯ್ ಮುದುಕಿ, ಉತ್ತಮರ ಹುಡುಗ್ಗಾ ಗುಡುಸಲ್ಕ ಕರೀತಿ, ಮೈಯಾಗ ಖಬರ ಐತೊ ಇಲ್ಲೊ?" ಅಂದ ಒಬ್ಬ.

ಈ ಮಾತಿನಿಂದ ಇಲ್ಲಿಯವರೆಗೂ ನಡೆಯುತ್ತಿರುವುದೇ ಬೇರೆ, ಈಗ ನಡೆಯುವದೇ ಬೇರೆ ಎಂಬ ಸ್ಥಿತಿ ಮನವರಿಕೆ ಆಯಿತು ಎಲ್ಲ ಜನರಿಗೆ. ಓಗಾಗಿ ತಮ್ಮ ತಮ್ಮಲ್ಲೇ ಮಾತಾಡಲು ಸುರು ಮಾಡಿದರು. ಸೋನೂಬಾಯಿ ಊರಲ್ಲಿ ಎಲ್ಲರಿಗೂನೂ ಬೇಕಾಗಿರಲಿಲ್ಲ. ಅವಳ ಅಂಗಡಿಯಲ್ಲಿ ಉದ್ರಿ ಉಚಾಪತಿ ಮಾಡುವ ಜನ ಹಾಗೂ ಅವಳಿಂದ ಬಡ್ಡೀಲೆ ರೂಪಾಯಿ ತರುವ ಜನ ಮಾತ್ರ ಅವಳಿಗೆ ತಿರುಗಿ ಏನೂ ಅನ್ನುತ್ತಿರಲಿಲ್ಲ. ಆದರೆ ತಮ್ಮಣ್ಣಪ್ಪ ಸಾಹುಕಾರ ಸೋನೂಬಾಯಿ ಅಂಗಡಿಯಲ್ಲಿ ದಿನ ಬಿಟ್ಟು ದಿನ ಕೂಡ್ರಲು ಸುರು ಮಾಡಿದ ಮೇಲೆ ಕೆಲವರ ದ್ವೇಷವನ್ನು ಸೋನೂಬಾಯಿ ಕಟ್ಟಿಕೊಳ್ಳಲೇಬೇಕಾಗಿತ್ತು. ಓಗಾಗಿ ಈ ಸಂದರ್ಭದಲ್ಲಿ ಕೆಲವರು ಸೋನೂಬಾಯಿಯ ವಿರುದ್ಧ, ರೇಣವ್ವ ಮುದುಕಿ ಪರವಾಗಿ ಮಾತಾಡಲು ಸುರು ಮಾಡಿದರು.

"ಹರ್‍ಯಾನಿಂದ ಹುಡುಗ್ಗಾ ಉಪಾಸ ಇಟ್ಟಾಳ, ಸೋನೂಬಾಯಿ. ರೇಣವ್ವ ಮುದುಕಿ ಉಟಾನರೆ ಹಾಕ್ಯಾಳ. ಜ್ಯಾತ್ಯಾಗ ಯಾನೈತಿ?" ಅಂದ ಒಬ್ಬ.

"ಯಾನ ಮಾತಾಡತೀರಿ ನೀವಾ? ಲೋಕಲಯಾ ಆದೀತ ಓಂಗ ಆದ್ರ. ಊಟದ ಹೊತ್ತಿನಾಗ ಹೆಚ್ಚು ಕಮ್ಮಿ ಆಗೂದ." ಎಂದ ಇನ್ನೊಬ್ಬ.

"ಮಧ್ಯಾಹ್ನ ಮೂರರತಕ್ಕ ನೀ ಉಪಾಸ ಇರತಿ ಯಾನ ನೋಡೂನು."

"ನನ್ನ ವಿಷಯಕ್ಕ ಬರಬ್ಯಾಡ ನೀ."

"ನೋಡ ಈಗ ಹ್ಯಾಂಗ ಬಿಸಿ ಹತ್ತು."

ಓೀಗೆ ಮಾತಿಗೆ ಮಾತು ಬೆಳೆದು ಕೈ ಕೈ ಮಿಲಾಯಿಸುವಷ್ಟರತನಕ ಜಗಳ ಹತ್ತಿತು. ಈ ಮಧ್ಯೆ ಸೋನುಬಾಯಿ ತನ್ನ ಅಂಗಡಿ ಗಲ್ಲೇದ ಮೇಲೆ ಹೋಗಿ ಏನೂ ಆಗೇ ಇಲ್ಲ ಎನ್ನುವವರಂತೆ ಕುಳಿತು ಬಿಟ್ಟಳು. ಜನ ತಮ್ಮಷ್ಟಕ್ಕೆ ಧರ್ಮಾಧರ್ಮದ ಸೂಕ್ಷ್ಮತೆಯನ್ನು ಚರ್ಚಿಸಲು ಸುರು ಮಾಡಿದರು.

ಇದೆಲ್ಲಾ ನಡೆಯುತ್ತಿರುವ ಹೊತ್ತಿನಲ್ಲಿಯೇ ರೇಣವ್ವ ಮುದುಕಿ ಭರಮ್ಯಾನ ಕೈ ಓಡಿದು, "ನಡಿ ಬಾಳಾ, ಬ್ಯಾರೆ ಊರಿಗೆ ಹೋಗಿ ನುಚ್ಚು ತಿನ್ನೂಣು. ಧರ್ಮ ಸತ್ತಿಲ್ಲ," ಎಂದು ಹೇಳಿ ಹೊಂಟಳು. ಭರಮ್ಯಾ ಸಾವಕಾಶ ಅವಳ ಜೊತೆ ಬಿಕ್ಕುತ್ತ ಹೆಜ್ಜೆ ಇಟ್ಟ. ನೆತ್ತಿ ಮ್ಯಾಲಿನ ಸೂರ್ಯ ಕೆಳಗ ಇಳದ ಕೈಮಾರ ಅಡ್ಡಿ ಬಂದಿದ್ದ. ಮಧ್ಯಾಹ್ನ ಉರಿಬಿಸಲ ಕಡಿಮಿಯಾಗಿ ಪುಡಿಮಣ್ಣ ನೊದಲಿನಷ್ಟು ಸುಡತಿರಲಿಲ್ಲ. ಇವರು ಗುಡಿಸಲ ಹತ್ತಿರ ಹೋದಂಗ ಹೋದಂಗ ಊರಾಗಿನ ಮಾತು, ಬಾಯಿ ಕ್ರಮೇಣ ಕೇಳಿಸುವುದು ಕಡಿಮಿ ಆಗಿ ನಿಧಾನ ನಿಂತ ಹೋದವು.

ಇವರು ಗುಡಿಸಲ ಮುಂದ ಹೋಗಿ ನೋಡಿದರ ಸೋನುಬಾಯಿಯ ನಾಯಿ ಸರಪಳಿ ಸಮೇತ ರೇಣವ್ವ ಮುದುಕಿ ಗುಡಸಲ ಮುಂದ ತಣ್ಣಗ ಮಲಗಿತ್ತು.

●

## ಉಪಾಯ

**ತಾ**ಹಿತಿ ದ್ವೀಪದ ಒಂದು 'ಕೇಶಕರ್ತನಾಲಯ'ದಲ್ಲಿ ನೀವು ಪಾಳಿಯಲ್ಲಿ ಬಹು ಹಿಂದೆ ಇದ್ದರೆ ಚಿಂತೆ ಮಾಡಬೇಡಿ. ಅಂಗಡಿಯಾತ ಕೂಡಲೇ ನಿಮಗೆ ಹೊತ್ತುಗಳೆಯಲು ಗಿಟಾರೊಂದನ್ನು ಕೊಡುತ್ತಾನೆ.

# ನಮ್ಮ ಊರಿನ ಪುಣ್ಯ ಜೀವಿಗಳು

## ಶ್ರೀಪಾದ ಹೆಗಡೆ ಕಡವೆ

ಉತ್ತರ ಕನ್ನಡ ಜಿಲೆಯ ಸಹಕಾರಿ ರಂಗದ ಭೀಷ್ಮರೆಂದೇ ಖ್ಯಾತರಾಗಿರುವ ಕಡವೆ ಶ್ರೀಪಾದ ಹೆಗಡೆಯವರು ಜಿಲ್ಲೆಯಲ್ಲಿ ಆಬಾಲವೃದ್ಧರೆಲ್ಲರಿಗೂ ಚಿರಪರಿಚಿತರು.

ಸ್ವಾತಂತ್ರ್ಯಾನಂತರ ದೇಶದಲ್ಲೆಲ್ಲ ಆರಂಭವಾದ ಸಹಕಾರಿ ಚಳುವಳಿಯನ್ನು ಉತ್ತರ ಕನ್ನಡ ಜಿಲ್ಲೆಗೂ ತಂದ ಕೀರ್ತಿ ಅವರಿಗೆ ಸಲ್ಲುತ್ತದೆ. ಜಿಲ್ಲೆಯ ಮಾಲಿಕರ ಕಪಿಮುಷ್ಟಿಯಲ್ಲಿ ಸಿಲುಕಿ ತಮ್ಮ ಬೆಳೆಗೆ ಯೋಗ್ಯ ಬೆಲೆಯನ್ನು ಪಡೆಯಲಾರದೆ ನಲುಗಿ ಹೋಗಿದ್ದ ಸಮಯದಲ್ಲಿ ಶಿರಸಿಯಲ್ಲಿ "ದಿ ತೋಟಗಾರ್ಸ್ ಸೊಸೈಟಿ"ಯನ್ನು ಪುನರ್ ಸ್ಥಾಪಿಸಿ (ಇದು ಮೊದಲೇ ಮೋಟೆನ್ಸರ ತಿಮ್ಮಪ್ಪ ಹೆಗಡೆಯವರಿಂದ ಸ್ಥಾಪಿತವಾಗಿದ್ದರೂ ಅವನತಿಯ ಹಾದಿಯಲ್ಲಿತ್ತು) ಜನಮಾನಸದಲ್ಲಿ ಸಹಕಾರಿ ತತ್ವವನ್ನು ಬಿತ್ತಿದರು. ನಂತರ "ದಿ ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಸೊಸೈಟಿ"ಯನ್ನು ಸ್ಥಾಪಿಸಿ, ಈ ಎರಡೂ ಸಂಘಗಳ ಮೂಲಕ ರೈತರಿಗೆ ಸಾಲ ಸೌಲಭ್ಯಗಳು ಹಾಗೂ ಅವರ ಬೆಳೆಗೆ ಯೋಗ್ಯ ಬೆಲೆಗಳು ದೊರೆಯುವಂತೆ ಮಾಡಿ ಶಿರಸಿಯ ಭಾಗ ಅಭಿವೃದ್ಧಿಗೊಳ್ಳಲು ಕಾರಣರಾದರು. ಸ್ಥಳೀಯ ಕೆ.ಡಿ.ಸಿ.ಸಿ. ಬ್ಯಾಂಕಿನ ಅಧ್ಯಕ್ಷರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ.

ಶಿರಸಿ ತಾಲೂಕಿನ ಭೈರುಂಬೆ ಪಂಚಾಯತ ವ್ಯಾಪ್ತಿಯಲ್ಲಿನ ಮಕ್ಕಳ ಅನುಕೂಲಕ್ಕಾಗಿ ಇವರು ಸ್ಥಾಪಿಸಿದ ಶ್ರೀ ಶಾರದಾಂಬಾ ಪ್ರೌಢಶಾಲೆಯು ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನದ ಬೆಳಕನ್ನು ನೀಡಿದೆ. ಶಿರಸಿಯ ಮೋಟೆನ್ಸರ ಸ್ಮಾರಕ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ಅಧ್ಯಕ್ಷರಾಗಿಯೂ ಶ್ರೀಪಾದರಾಯರು ಗಣನೀಯ ಸೇವೆ ಸಲ್ಲಿಸಿದ್ದಾರೆ.

೧೯೮೩ ರಿಂದ ೮೫ರ ವರೆಗೆ ವಿಧಾನ ಸಭೆಯ ಸದಸ್ಯರಾಗಿ ಅಂಕೋಲಾ ಕ್ಷೇತ್ರವನ್ನು ಪ್ರತಿನಿಧಿಸಿದ್ದ ಇವರು ತಮ್ಮ ಅವಧಿಯಲ್ಲಿ ಕ್ಷೇತ್ರದ ಸಮಸ್ಯೆಗಳಿಗೆ ಕ್ರಿಯಾಶೀಲರಾಗಿ ಸ್ಪಂದಿಸಿದರು. ಅವರಿಗೀಗ ೭೫ ವರ್ಷ ತೀವ್ರ ಅನಾರೋಗ್ಯದ ನಡುವೆಯೂ ಶಿರಸಿ ಡೆವಲಪ್‌ಮೆಂಟ್ ಸೊಸೈಟಿಯ ಅಧ್ಯಕ್ಷರಾಗಿ ಶ್ರಮಿಸುತ್ತಿದ್ದಾರೆ.

• ನಾಗಪತಿ ಹೆಗಡೆ

## ರೇ.ಚ. ರೇವಡಿಗಾರ

ಅರವತ್ತಕ್ಕೆ ಅರಳು-ಮರಳು ಎಂಬ ಗಾದೆಯಿದೆ. ಆದರೆ ಅರವತ್ತನ್ನೆ ಮರುಳು ಮಾಡುವ ಸಿಂದಗಿಯ ರೇ.ಚ. ರೇವಡಿಗಾರನೆಂಬ ಮೋಡಿಗಾರ ಪತ್ರಿಕಾಕರ್ತನನ್ನು ಅರವತ್ತರ ಹುಟ್ಟುಹಬ್ಬದಂದು ಊರ ಜನತೆ ಸನ್ಮಾನಿಸಿತು.

ಒಂದು ಊರಿನ, ನಾಡಿನ, ದೇಶದ ಸುದ್ದಿ ಪ್ರಚಾರದಲ್ಲಿ ಸುದ್ದಿಗಾರರದೇ ಪಾರುಪತ್ಯ. ಹಲವಾರು ನಿಯತಕಾಲಿಕಗಳಲ್ಲಿ ನಮ್ಮೂರಿನ ಸುದ್ದಿಗಳಿಗೆ ಅಗ್ರಸ್ಥಾನ. ಇದಕ್ಕೆಲ್ಲ ರೇವಡಿಗಾರರ ಪ್ರಾಮಾಣಿಕತೆಯ, ಶಿಸ್ತಿನ, ಪರಿಶ್ರಮದ ದುಡಿಮೆಯೇ ಕಾರಣ.

ಹುಟ್ಟಿನಿಂದ ಅಖಂಡ ಬ್ರಹ್ಮಚಾರಿಯಾಗಿದ್ದುಕೊಂಡು ಸಮಾಜದ ಸೇವೆಗಳಲ್ಲಿಯೇ ಸುಖ ಕಾಣುತ್ತಿರುವ ಇವರು, ಸಿಂದಗಿ ತಾಲೂಕಿನ ಬಸವ ಸಮಿತಿಯ ಕಾರ್ಯದರ್ಶಿ, ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಕ್ರೀಯ ಸದಸ್ಯ, ಬಿ.ಜೆ.ಪಿ. ಅಧ್ಯಕ್ಷ ಮತ್ತು ಅಖಿಲ ಕರ್ನಾಟಕ ಕನ್ನಡ ಕ್ರಿಯಾ ಸಮಿತಿಯ ಸಂಘಟನಾ ಕಾರ್ಯದರ್ಶಿಯಾಗಿ ಹಾಗೂ ಪತ್ರಕರ್ತರ ಸಂಘದ ಅಧ್ಯಕ್ಷ, ಕನ್ನಡ ಬಳಗದ ಸಂಚಾಲಕ, ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಸಂಸ್ಥಾಪಕ, ವಿದ್ಯಾರ್ಥಿ ಜಾಗೃತ ವೇದಿಕೆಯ ಸಂಸ್ಥಾಪಕ ಅಲ್ಲದೆ ರಾಷ್ಟ್ರೀಯ ಬಸವದಳದ ಚಾಲನಶಕ್ತಿಯಾಗಿ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ.

೧೯೯೪ರಲ್ಲಿ ಸಿಂದಗಿಯ ನೂತನ ಕಲಾ ಮಹಾವಿದ್ಯಾಲಯವು ಚಿತ್ತರಗಿ ಮಹಂತ ಸ್ವಾಮೀಜಿಗಳ ದಿವ್ಯ ಸನ್ನಿಧಿಯಲ್ಲಿ ಅತ್ಯುತ್ತಮ ಕಾರ್ಯಕರ್ತನೆಂದೂ ಇತ್ತೀಚೆಗೆ ಗದಗಿನ ತೋಂಟದ ಸಿದ್ಧಲಿಂಗ ಸ್ವಾಮಿಗಳವರು ಪ್ರಾಮಾಣಿಕ ಪತ್ರಕರ್ತನೆಂದೂ ಹಾಗೂ ಅದೇ ವರ್ಷ ರೋಟರಿ ಕ್ಲಬ್ ಸಿಂದಗಿ ಪತ್ರಿಕಾರಂಗದ ಸಿಂಹಧ್ವನಿ, ಶ್ರೇಷ್ಠ ಸಮಾಜ ಕಾರ್ಯಕರ್ತನೆಂದೂ ಗೌರವಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಹೆಂಡತಿ, ಮನೆ, ಮಕ್ಕಳಿಂದು ಜೀವನವಿಡೀ



ದುಡಿದರೂ ತೃಪ್ತಿಕಾಣದೆ ಬದುಕುವ ಬವಣಿಗರ ಮಧ್ಯದಲ್ಲಿ ತಮ್ಮ ಇಡೀ ಜೀವನವನ್ನೆಲ್ಲ ಸಮಾಜ ಸೇವೆಗೆ ಮುಡಿಪಾಗಿಟ್ಟು ಸಾರ್ಥಕ ಬದುಕನ್ನು ಕಂಡಿರುವ ಇವರು, ಕನ್ನಡನಾಡು, ನುಡಿಯ ಬಗೆಗೆ ಅಪಾರ ಹೆಮ್ಮೆಯಿರಿಸಿಕೊಂಡವರು. ಹೆಣ್ಣನ್ನು ತಾಯಿ, ಸೋದರಿಯೆಂದೇ ಕಾಣುವ ಪರಿಶುದ್ಧ ಮನಸ್ಸಿನ ಇಂಥ ಅಪರೂಪದ ವ್ಯಕ್ತಿಯನ್ನು ಪಡೆದದ್ದು ನಮ್ಮೂರಿನ ಒಂದು ಹೆಮ್ಮೆ.

• ಭಾರತಿ ಪಾಟೀಲ, ಸಿಂದಗಿ.

# ಮಹಾನ್ ಆಡಳಿತಗಾರ

ಜನಾಭ್ಯುದಯವನ್ನೇ ಗುರಿಯಾಗಿಟ್ಟುಕೊಂಡು, ಅಹರ್ನಿಶಿ ದುಡಿದವರಲ್ಲಿ ಮೈಸೂರಿನ ಮೊದಲನೇ ದಿವಾನರಾದ ರಂಗಾಚಾರ್ಲು ಅವರಿಗೆ ಅಗ್ರತಾಂಬೂಲ ಸಲ್ಲಬೇಕು. ಮದರಾಸಿನಿಂದ ಬಂದು ಸಣ್ಣ ಹುದ್ದೆಯಿಂದ ಹಂತಹಂತವಾಗಿ ಮೇಲಕ್ಕೇರಿ ದಿವಾನರಾಗಿ ಆದರ್ಶ ಆಡಳಿತಕ್ಕೆ ನಾಂದಿಯನ್ನು ಹಾಡಿದರು. ಅವರ ದೂರದೃಷ್ಟಿಯ ಪರಿಣಾಮವಾಗಿ ೧೪೪ ಪ್ರತಿನಿಧಿಗಳುಳ್ಳ ಪ್ರಜಾಪ್ರತಿನಿಧಿ ಸಭೆ ರೂಪುಗೊಂಡಿತು. ರೈತರು, ವರ್ತಕರು ಬುದ್ಧಿ ಜೀವಿಗಳು ಇದರಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವಂತಾಯಿತು. ನಿಜವಾದ ಅರ್ಥದಲ್ಲಿ ಅದು ಪ್ರಜಾಪ್ರತಿನಿಧಿಗಳಿಂದ ಕೂಡಿದ ಸಭೆಯಾಗಿತ್ತು.

ಒಬ್ಬ ಕ್ರಿಯಾಶೀಲ ಪ್ರಾಮಾಣಿಕ ಅಧಿಕಾರಿ ಜನಕ್ಕೆ ಹೇಗೆ ಸೇವೆ ಸಲ್ಲಿಸಬಹುದೆಂಬುದಕ್ಕೆ ರಂಗಾಚಾರ್ಲು ಅವರು ಮಾದರಿಯಾದರು. ಒಂದು ವಿದ್ಯಾಭ್ಯಾಸವೇ, ಭ್ರಷ್ಟಾಚಾರ ಮೂಲೋತ್ಪಾಟನೆಯೇ, ಸ್ತ್ರೀಯರ ಹಕ್ಕು ಬಾಧ್ಯತೆಗಳ ರಕ್ಷಣೆಯೇ, ಸಾಹಿತ್ಯ ಕಲೆಗಳ ಪ್ರೋತ್ಸಾಹವೇ, ರಾಜಭಕ್ತಿಯೇ, ಪ್ರಜಾವಾತ್ಸಲ್ಯವೇ ಎಲ್ಲದರಲ್ಲಿಯೂ ಅವರು ಮುಂದಿದ್ದರು. ಕಲಾಭಿಮಾನಿಗಳಾದ ಅವರು ಸಾಹಿತ್ಯ ಸಂಸ್ಕೃತಿಗೆ ವಿಶೇಷ ಉತ್ತೇಜನವನ್ನು ಕೊಟ್ಟರು. ಬಸವಪ್ಪ ಶಾಸ್ತ್ರಿಗಳ 'ಶಾಕುಂತಲಾ' ನಾಟಕ ರಚಿತವಾದದ್ದು ಇವರ ಪ್ರೇರಣೆಯಿಂದಲೇ. ಇಷ್ಟೇ ಅಲ್ಲದೆ ಇವರ ಪ್ರೋತ್ಸಾಹದಿಂದ 'ಶಾಕುಂತಲಾ ನಾಟಕ ಕಂಪನಿ' ಎಂಬ ವೃತ್ತಿ ನಾಟಕ ಸಂಸ್ಥೆ ಪ್ರಾರಂಭವಾಯಿತು.

ವಿದ್ಯಾಭ್ಯಾಸವೇ ಎಲ್ಲ ಪ್ರಗತಿಗೆ ಮೂಲ ಎಂದು ನಂಬಿದ್ದ ಅವರು ಅದಕ್ಕೆ ವಿಶೇಷ ಪ್ರೋತ್ಸಾಹವನ್ನು ನೀಡಿದರು. ಬೆಂಗಳೂರು-ತಿಪಟೂರು ನಡುವೆ ರೈಲು ಸಂಚಾರಕ್ಕೆ ಅನುವುಮಾಡಿದರು. ಹೀಗೆ ಪ್ರಜಾವತ್ಸಲರಾಗಿ ಪ್ರಜೆಗಳಿಗೆ ಅತ್ಯಗತ್ಯವಾಗಿ ಬೇಕಾದ ಸಾರಿಗೆ ವ್ಯವಸ್ಥೆ, ಕೆರೆಕಟ್ಟೆಗಳ ನಿರ್ಮಾಣ, ಉಳಿತಾಯ, ಉದ್ಯಮ ಸ್ಥಾಪನೆ ಮುಂತಾದ ಪ್ರಜಾಹಿತ ಕಾರ್ಯಗಳನ್ನು ಜಾರಿಗೆ ತಂದರು.

ಈ ಮಹಾನ್ ಆಡಳಿತಗಾರ ಅಧಿಕಾರದಲ್ಲಿದ್ದದ್ದು ಕೇವಲ ೨೨ ತಿಂಗಳು. ಆದರೆ ರಚನಾತ್ಮಕ ದೃಷ್ಟಿಯಿಂದ ಕೂಡಿದ ಇವರ ಕಾರ್ಯಗಳು ಇತಿಹಾಸದ ಪುಟದಲ್ಲಿ ಅಮರವಾಗಿ ಉಳಿಯುತ್ತವೆ. ಅವರೊಬ್ಬ ನಿಷ್ಕಾಮಕರ್ಮಿ. ಸದಾ ಪ್ರಜಾಹಿತಕ್ಕಾಗಿ ಮಿಡಿಯುತ್ತಿದ್ದ ಅವರ ಜೀವ ೧೮೮೩ರಲ್ಲಿ ಪಂಚಭೂತಗಳಲ್ಲಿ ಲೀನವಾಗಿಹೋಯಿತು.

• ಡಿ. ಗುಂಡೂರಾವ್

## ರಹಸ್ಯ

**ಆತ ಏಕೆ**

**ವಿಷ**

**ತೆಗೆದುಕೊಂಡ?**



# ರೋಮೆಲ್ಲನಿಗೆ ಮೃತ್ಯು ಬಂತು

● 'ಎಂ. ದೀಪಾ'

ಹೌದು. ಹಿಟ್ಲರನ ಬಲಗೈ ಬಂಟನಾದ, ಮಿತ್ರ ಸೈನ್ಯದಲ್ಲಿ ಸದಾ ಭಯದ ಅಲೆಗಳನ್ನೇ ಎಬ್ಬಿಸುತ್ತಿದ್ದ ರೋಮೆಲ್ಲನಿಗೆ ಮೃತ್ಯು ಬಂತು. ಮೃತ್ಯುವೆಂಬುದು ವಿಧಿನಿಯಮವೇ ಆಗಿದ್ದರಿಂದ ಅದು ಬಂದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಬಂದ ರೀತಿ ಮಾತ್ರ ಶತ್ರುಪಾಳಯದಲ್ಲೂ ಆಶ್ಚರ್ಯದ, ಆಶಂಕೆಯ ಅಲೆಗಳನ್ನೆಬ್ಬಿಸಿದ್ದು ಸುಳ್ಳಲ್ಲ.

ನೋಡಲೇನೂ ಆತ ಭಯಂಕರನಾಗಿರಲಿಲ್ಲ. ಆದರೆ ಯುದ್ಧತಂತ್ರಗಳನ್ನು ನಿರ್ಮಿಸುವಲ್ಲಿ ಮಾತ್ರ ಅವನದು ಎತ್ತಿದ ಕೈ. ತಂತ್ರಗಳನ್ನು ರೂಪಿಸುವುದಷ್ಟೇ ಅಲ್ಲ, ಸ್ವತಃ ರಣಾಂಗಣದಲ್ಲಿ ನಿಂತು ಅದನ್ನು ಕಾರ್ಯಗತಗೊಳಿಸಿ, ಸೇನಾಪತಿಯಾದರೂ ಸಾಮಾನ್ಯ ಸೈನಿಕನ ಹಾಗೆ ಹೋರಾಡಿ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸುವಲ್ಲಿ ರೋಮೆಲ್ ಸದಾ ಮುಂದು. ಹೀಗಾಗಿ ಶತ್ರುಸೈನ್ಯದಲ್ಲಿಯೂ ರೋಮೆಲ್ಲನ ಬಗ್ಗೆ ಅಪಾರ ಗೌರವದ ಭಾವನೆ. ಯಾರಾದರೂ ಸೈನಿಕನೊಬ್ಬ ಪರಾಕ್ರಮದ ಕೆಲಸವನ್ನು ಸಾಧಿಸಿದಾಗ ಅವನ ಮೇಲಧಿಕಾರಿಗಳು, "ನೀನು ರೋಮೆಲ್ಲನ ಹಾಗೆ ಮಾಡಿದ್ದೀ ನೋಡು," ಎಂದರೆ ಅದು ಪರಮ ಗೌರವದ ಮಾತೆಂದೇ ಆ ಸೈನಿಕ ಭಾವಿಸುತ್ತಿದ್ದ.

ಜರ್ಮನ್ ಸೈನ್ಯದ ಏಳನೆಯ ಪದಾತಿದಳದ ಅಧಿಪತಿಯಾಗಿ ೧೯೪೦ರ ಮೇ ತಿಂಗಳಿನಲ್ಲಾತ

ಇಡಿ ಫ್ರಾನ್ಸನ್ನು ಗೆದ್ದು ಓಟ್ಲರನಿಗೆ ಅರ್ಪಿಸುವ ವರೆಗೆ ಓಟ್ಲರನಿಗೆ ರೋಮೆಲ್ಲನ ಬಗ್ಗೆ ಅಂಥಾ ಅತಿಯಾದ ಗೌರವದ ಭಾವನೆಯೇನೂ ಇರಲಿಲ್ಲ. ಆದರೆ ಫ್ರಾನ್ಸ್ ವಿಜಯದ ನಂತರ ಆತ ಓಟ್ಲರನ ಕಣ್ಮಣಿಯೇ ಆದ. ಆಫ್ರಿಕದ ರಣರಂಗದಲ್ಲಿ ಯುದ್ಧ ಮುಂದುವರೆಸುವುದು ಜರ್ಮನಿಗೆ ಕಷ್ಟಕರ ವಾಗಿ ತೋರಿದಾಗ ಓಟ್ಲರ ಸೈನ್ಯದ ಆಧಿಪತ್ಯ ವಹಿಸಿಕೊಳ್ಳಲು ರೋಮೆಲ್ಲನನ್ನೇ ಕಳಿಸಿದ. ಆತ ಬಂದ ನಂತರ ರಣಾಂಗಣದ ಸ್ಥಿತಿಯೇ ಬೇರೆ ಯಾಯಿತು.

ಬೇರೆ ಬೇರೆ ಭಾಗಗಳಲ್ಲಿ ಜರ್ಮನಿಯ ಮೇಲೆ ವಿಜಯ ಸಾಧಿಸಿ ಮುನ್ನುಗ್ಗುತ್ತಿದ್ದ ಬ್ರಿಟಿಶ್ ಸೈನ್ಯ ಜರ್ಮನ್ ಸೈನ್ಯಕ್ಕೆ ಶರಣಾಯಿತು. ಆದರೆ ಇಜಿಪ್ತ ದಲ್ಲಿ ಬ್ರಿಟಿಶರ ಕೈ ಜೋರಾಯಿತು. ಓಟ್ಲರ್ ರೋಮೆಲ್ಲನನ್ನು ಇಜಿಪ್ತಿಗೆ ಕಳಿಸಿದ. ಇನ್ನೇನು, ಹತ್ತೇಹತ್ತು ಕಿಲೋಮೀಟರು ಕ್ರಮಿಸಿದರೆ ಅಲೆಕ್ಸಾಂಡ್ರಿಯ ಬಂದರು ಬ್ರಿಟಿಶರ ವಶವಾಗು ವುದು ಎನ್ನುವುದರಲ್ಲಿದ್ದಾಗ ರೋಮೆಲ್ ಸೈನ್ಯಸಮೇತನಾಗಿ ಬಂದಿಳಿದು ಬ್ರಿಟಿಶ್ ಸೈನ್ಯವನ್ನು ಹಿಮ್ಮೆಟ್ಟಿಸಿದ.

ಆಫ್ರಿಕದಲ್ಲಿ ಮತ್ತೆ ಮಿತ್ರಸೈನ್ಯ ಸಜ್ಜಾಗಿತ್ತು. ಜರ್ಮನ್ ಸೈನ್ಯ ಸೋಲನ್ನನುಭವಿಸುತ್ತಿತ್ತು. ಇಂಥಾ ಪ್ರಸಂಗದಲ್ಲಿ ಮತ್ತೆ ರೋಮೆಲ್ಲನೇ ಗತಿ ಎಂದು ಭಾವಿಸಿದ ಓಟ್ಲರ ಆತನನ್ನು ಮತ್ತೆ ಆಫ್ರಿ ಕಕ್ಕೆ ಕಳಿಸಿದ. ಆದರೆ ಈ ಸಲದ ಪರಿಸ್ಥಿತಿ ಬೇರೆಯೇ ಆಗಿತ್ತು. ಮಿತ್ರಸೈನ್ಯ ಬಲವನ್ನು ಹೆಚ್ಚಿಸಿಕೊಂಡಿ ದ್ದರೆ ಜರ್ಮನ್ ಸೈನ್ಯ ಕುಗ್ಗಿತ್ತು. ಯುದ್ಧ ಸಾಮ ಗ್ರಿಯೂ ಸಾಕಷ್ಟಿರಲಿಲ್ಲ. ಆದರೂ ರೋಮೆಲ್ ಧೃತಿಗೆಡಲಿಲ್ಲ. ಪರಿಸ್ಥಿತಿಯನ್ನು ವಿವರಿಸಿ, ಇನ್ನಷ್ಟು ಸೈನ್ಯವನ್ನೂ, ಸಾಮಗ್ರಿಗಳನ್ನೂ ಕಳಿಸಿಕೊಟ್ಟರೆ ಈ ಸಲವೂ ಬ್ರಿಟಿಶರನ್ನು ಹಿಮ್ಮೆಟ್ಟಿಸುವುದಾಗಿ ಓಟ್ಲರ ನಿಗೆ ಬರೆದ. ಆದರೆ ಯುದ್ಧಸಾಮಗ್ರಿಯಂತೂ ದೂರ ಉಳಿಯಿತು, ಒಂದಿಷ್ಟು ಹೆಚ್ಚಿನ ಸೈನ್ಯವೂ ಅವನ ನೆರವಿಗೆ ಬರಲಿಲ್ಲ. ರೋಮೆಲ್ ಓಟ್ಲರನಿಗೆ ಮತ್ತೆ ಬರೆದ. "ನನ್ನ ಬಳಿಯೇ ಸಾಕಷ್ಟು ಸೈನ್ಯ ವಿಲ್ಲ. ಅಂಥದರಲ್ಲಿ ನಿನಗೆಲ್ಲಿ ಕಳಿಸಲಿ? ಇದ್ದ ಸೈನ್ಯ ಕಟ್ಟಿಕೊಂಡೇ ಯುದ್ಧ ಮಾಡು ಅಥವಾ ಹಾಳಾಗಿ ಹೋಗು." ಎಂಬ ಉತ್ತರ ಓಟ್ಲರನಿಂದ ಬಂತು. ರೋಮೆಲ್ಲನಿಗೀಗ ಯುದ್ಧ ಮುಂದುವರೆಸುವುದರ ಹೊರತು ಬೇರೆ ದಾರಿಯೇ ಉಳಿಯಲಿಲ್ಲ.

೧೯೪೩ರ ಮೇ ತಿಂಗಳಿನಲ್ಲಿ ಜರ್ಮನಿಗೆ ಒಂದಿ ರುಗಬೇಕೆಂದು ಓಟ್ಲರನಿಂದ ಕರೆಬಂತು. ರೋಮೆಲ್ ತಾಯ್ನಾಡಿಗೆ ಮರಳುವಷ್ಟರಲ್ಲಿ ಟ್ಯುನೀಶಿಯಾ ಜರ್ಮನಿಯ ಕೈಬಿಟ್ಟಿತ್ತು. ಆರ್ಥಿಕ ವಾಗಿ ದೇಶ ದಿವಾಳಿಯ ಅಂಚಿಗೆ ಬಂದು ಮುಟ್ಟಿತ್ತು. ಯಹೂದ್ಯರನ್ನೂ ಓಟ್ಲರನಿಗೆ ವಿರೋಧವಾಗಿದ್ದಾರೆಂದು ಪರಿಗಣಿಸ ಲ್ಪಟ್ಟವರನ್ನೂ ನಿರ್ದಯವಾಗಿ ಕೊಲ್ಲಲಾಗು ತ್ತಿತ್ತು. ಯುದ್ಧದಲ್ಲಿ ಸಿಕ್ಕುಬಿದ್ದ ಶತ್ರುಸೈನಿಕರನ್ನು ಗುಲಾಮರನ್ನಾಗಿ ದುಡಿಸಿಕೊಳ್ಳಲಾಗುತ್ತಿತ್ತು. "ಛೇ! ಏನಿದು ಇದೆಲ್ಲ? ಶತ್ರು ಸೈನ್ಯದವರಾದರೇನಾಯಿತು? ಅವರಿಗೇನಾದರೂ ಮಾನಮರ್ಯಾದೆ ಇಲ್ಲವೆ? ಹೀಗೆ ಸೈನಿಕರನ್ನು ಗುಲಾಮರನ್ನಾಗಿ ನಡೆಸಿಕೊಳ್ಳುವುದೆ? ಯುದ್ಧದ ನಿಯಮಗಳನ್ನು ಸ್ವಲ್ಪವಾದರೂ ಪಾಲಿಸಬೇಡವೆ?" ಎಂದಾತ ಒದರಾಡಿದ.

ಜರ್ಮನಿಗೀಗ ದುರ್ಭರ ಸ್ಥಿತಿ. ಎಲ್ಲ ಕಡೆ ಯಲ್ಲಿಯೂ ಸೈನ್ಯ ಹಿಮ್ಮೆಟ್ಟುತ್ತಿತ್ತು. ಶತ್ರುಗಳನ್ನು ಎದುರಿಸುವಷ್ಟು ತ್ರಾಣ ಈಗ ಜರ್ಮನಿಯ ಬಳಿ ಉಳಿದಿರಲಿಲ್ಲ. "ಬ್ರಿಟನ್, ಅಮೆರಿಕ ಹಾಗೂ ರಶಿಯ ಹೀಗೆ ಮೂವರು ಶತ್ರುಗಳನ್ನು ಎದುರಿ ಸಲು ಇಂಥಾ ಪರಿಸ್ಥಿತಿಯಲ್ಲಿ ಸಾಧ್ಯವೇ ಇಲ್ಲ. ಹೇಗೂ ಅಮೆರಿಕ, ಬ್ರಿಟನ್ನುಗಳು ಮೂಲತಃ ಕಮ್ಯು ನಿಸ್ಟ್ ವಿರೋಧಿಗಳೇ. ಅನುಕೂಲಕ್ಕಾಗಿ ಮಾತ್ರ ಈಗ ರಶಿಯದೊಡನೆ ಕೈಗೂಡಿಸಿವೆ. ಯುದ್ಧವನ್ನು ಹೀಗೆಯೇ ಮುಂದುವರೆಯಗೊಟ್ಟರೆ ಜರ್ಮನಿಯಂತೂ ಸೋಲುವುದು - ಖಚಿತ. ಬ್ರಿಟನ್ ಅಮೆರಿಕಗಳು ಈಗಾಗಲೇ ಸಾಕಷ್ಟು ಜರ್ಮನ್ನರಿಗೆ ಆಶ್ರಯ ಕೊಟ್ಟಿದ್ದರಿಂದ ಮತ್ತು ಅವೆರಡೂ ಯುರೋಪಿಯನ್ ಸಂಸ್ಕೃತಿಯ ದೇಶ ಗಳೇ ಆಗಿದ್ದರಿಂದ ಅನ್ಯ ಸಂಸ್ಕೃತಿಯ ರಶಿಯವನ್ನು ಬಿಟ್ಟು ಅವು ನಮ್ಮೊಡನೆ ರಾಜಿಮಾಡಿಕೊಳ್ಳಬಹುದು. ಆಗ ನಾವೆಲ್ಲ ಒಟ್ಟಾಗಿ ರಶಿಯವನ್ನು ಮುಗಿಸುವಾ. ಜರ್ಮನಿ ಸಶಕ್ತವಾದ ನಂತರ ಬ್ರಿಟನ್, ಅಮೆರಿಕಗಳ ಕೈ ನೋಡಿಕೊಂಡರಾಯಿತು' ಎಂದಾತ ತನ್ನ ವಿಚಾರ

ವನ್ನು ಹಿಟ್ಲರನಿಗೆ ತಿಳಿಸಿದಾಗ ಹಿಟ್ಲರ್, "ಎಂಥಾ ಅಳುಬುರುಕನೋ ನೀನು!" ಎಂದು ರೋಮೆಲ್ಲ ನನ್ನೇ ಮೂದಲಿಸಿದ.

೧೯೪೪ರ ಜುಲೈ ೨೦ರಂದು ಹಿಟ್ಲರ್ ತನ್ನ ಕಾರ್ಯಾಲಯದಲ್ಲಿದ್ದಾಗ ಅವನಿಂದ ಕೇವಲ ಆರು ಅಡಿಗಳ ಅಂತರದಲ್ಲಿ ಬಾಂಬು ಎಸೆಯಲ್ಪಟ್ಟು, ನಾಲ್ವರು ಸತ್ತರು, ಇಪ್ಪತ್ತು ಜನ ಗಾಯಗೊಂಡರು. ಹಿಟ್ಲರ್ ಮಾತ್ರ ಆಶ್ಚರ್ಯಕರ ರೀತಿ ಯಲ್ಲಿ ಪಾರಾದ. ಸ್ಫೋಟ ಸಂಭವಿಸಿ ೨೪ ಗಂಟೆಗಳಲ್ಲೇ ಸಂಚಿನಲ್ಲಿ ಭಾಗಿಗಳಾದ ಸೈನ್ಯಾಧಿಕಾರಿಗಳನ್ನೆಲ್ಲ ಕಂಡುಹಿಡಿದು ಗುಂಡಿಕ್ಕಿ ಕೊಲ್ಲಲಾಯಿತು.

ಇದಾಗಿ ಕೆಲವೇ ದಿನ ಕಳೆದಿರಬಹುದು, ರೋಮೆಲ್ ರಣಾಂಗಣದಿಂದ ಹಿಂದಿರುಗುತ್ತಿದ್ದಾಗ ಎರಡು ಬ್ರಿಟಿಶ್ ವಿಮಾನ ಗಳು ಮೇಲಿನಿಂದ ಗುಂಡಿನ ಮಳೆಗರೆದಾಗ ರೋಮೆಲ್ ಇದ್ದ ಕಾರು ಉರಿಯತೊಡಗಿತು. ಒಮ್ಮೆಲೆ ನಡೆದ ಈ ದಾಳಿಯಿಂದ ಆಘಾತ ಗೊಂಡ ಬೀದಿಯ ಜನ ಚೇತರಿಸಿಕೊಂಡು ಧೈರ್ಯದಿಂದ ಮುನ್ನುಗ್ಗಿ ರೋಮೆಲ್ಲನ ಅರೆಬೆಂದ ದೇಹವನ್ನು ಕಾರಿನಿಂದೆಳೆದು ಆಸ್ಪತ್ರೆಗೆ ಸಾಗಿಸಿದಾಗ ಎಚ್ಚರ ದಪ್ಪಿದ್ದರೂ ಅವನ ಹೃದಯ ಇನ್ನೂ ತುಡಿಯುತ್ತಿತ್ತು. ಆದರೆ ಹಣೆಯ ಎಲುವು ಮುರಿದಿತ್ತು. ಕಣ್ಣಿನ ಕೆಳಗಿನ ಎಲುವಿಗೆ ಸೀಳು ಬಿದ್ದಿತ್ತು. ಒಂದು ಕಣ್ಣು ಸೀದುಹೋಗಿತ್ತು. ಬ್ರಿಟಿಶ್ ವಿಮಾನಗಳ ಈ ದಾಳಿಯನ್ನು ಖಂಡಿಸಿ ಹಿಟ್ಲರ್ ಹೇಳಿಕೆ ಹೊರಡಿಸಿದಾಗ ತನಗೂ ಈ ದಾಳಿಗೂ ಸಂಬಂಧವೇ ಇಲ್ಲ ಎಂದು ಬ್ರಿಟನ್ ಪ್ರತಿ ಹೇಳಿಕೆ ನೀಡಿತು. ವಾಸ್ತವವಾಗಿ ಹಿಟ್ಲರನೇ ಎರಡು ವಿಮಾನಗಳಿಗೆ ಬಣ್ಣ ಬಳಿಸಿ, ಬ್ರಿಟಿಶ್ ವಿಮಾನಗಳಂತೆ ಕಾಣುವ ಹಾಗೆ ಮಾಡಿ ರೋಮೆಲ್ಲನನ್ನು ಕೊಲ್ಲಲು ಹಾಗೂ ಆ ಮೂಲಕ ಬ್ರಿಟನ್ನಿನ ಮೇಲೆ ಗೂಬೆ ಕೂರಿಸಲು ಸಂಚು ಹೂಡಿದ ವಿಷಯ ನಂತರದಲ್ಲಿ ಹೊರಬಿತ್ತು. ರೋಮೆಲ್ಲನ ದೈವವೂ ಗಟ್ಟಿಯಾದುದರಿಂದ ಈ ಬಾಂಬ್ ದಾಳಿಯಿಂದ ಬದುಕಿಕೊಂಡ. ಆದರೆ ಒಂದು ಕಣ್ಣನ್ನು ಮಾತ್ರ ಕಾಯಂ ಆಗಿ ಕಳೆದು ಕೊಂಡ.

೧೯೪೪ರ ಅಕ್ಟೋಬರ್ ಹದಿಮೂರು. ಮರು ದಿನ ಹಿಟ್ಲರನಿಂದ ಒಂದು ಸಂದೇಶ ತರುವುದಾಗಿ ಜನರಲ್ ವೆಗ್‌ಡಾರ್ಫ್‌ನಿಂದ ರೋಮೆಲ್ಲನಿಗೆ ಟೆಲಿಫೋನ್ ಸಂದೇಶ ಬಂತು. ನಾಳೆಯೇ ಮಗನ ಹುಟ್ಟುಹಬ್ಬ. ಅದಕ್ಕಾಗಿ ಮನೆಯಲ್ಲಿ ತರಾತುರಿ ಯಿಂದ ತಯಾರಿ ನಡೆಯುತ್ತಿದೆ. ಆದರೆ ಸ್ವತಃ ಹಿಟ್ಲರನೇ ಕಳಿಸುತ್ತಾನೆಂದ ಮೇಲೆ ಬೇಡವೆಂದು ಹೇಗೆ ಹೇಳುವುದು? ರೋಮೆಲ್ಲನ ಮುಖದ ಮೇಲೆ ಒಂದು ಕ್ಷಣ ಚಿಂತೆಯ ಮೋಡ ಹಾಯ್ದು ಹೋಯಿತು. " ಆಗಲಿ. ಫ್ಯೂಹರ್ ಹೇಳಿದ ಮೇಲೆ ಕೇಳುವುದೇನಿದೆ? ಹೇಗೂ ನಾಳೆ ಮ್ಯಾನ್‌ಫ್ರೆಡ್ಸ್‌ನ ಹದಿನಾರನೆ ಹುಟ್ಟುಹಬ್ಬ. ತಪ್ಪದೆ ಬನ್ನಿ." ಎಂದು ಹೇಳಿ ರೋಮೆಲ್ ರಿಸೀವರನ್ನು ಕೆಳಗಿಟ್ಟ.

ಬೇರೆ ಊರಿನಲ್ಲಿರುತ್ತಿದ್ದ ಮ್ಯಾನ್‌ಫ್ರೆಡ್ ಹುಟ್ಟು ಹಬ್ಬದಂದೇ ಊರಿಗೆ ಬಂದ. ಬಂದವನೇ ತಂದೆ ಯನ್ನು ಪ್ರೀತಿಯಿಂದ ಆಲಿಂಗಿಸಿಕೊಂಡ. ಆ ದಿನ ರೋಮೆಲ್ ಸ್ವಲ್ಪ ಸಪ್ಪಗಾಗಿಯೇ ಇದ್ದ. ಚಹ ಕುಡಿಯುತ್ತ, "ಏಕೆ ಡ್ಯಾಡಿ ಅಷ್ಟು ಸಪ್ಪಗಾಗಿ ದ್ದೀರಿ? ಏನು ತೊಂದರೆ?" ಎಂದು ಕೇಳಿದ ಮ್ಯಾನ್‌ಫ್ರೆಡ್. "ತೊಂದರೆಯೆ? ಏನೂ ಇಲ್ಲವಲ್ಲ." ಅಂದ ರೋಮೆಲ್ ದುಗುಡವನ್ನು ಮರೆಮಾಚುತ್ತಾ.

"ಇಲ್ಲ ಡ್ಯಾಡಿ ಇಲ್ಲ; ನೀವು ಸುಳ್ಳು ಹೇಳುತ್ತೀ ದ್ದೀರಿ. ಪ್ರತಿಸಲ ಹುಟ್ಟುಹಬ್ಬ ಆಚರಿಸುವಾಗ ಎಷ್ಟು ಹುರುಪಿನಿಂದ ಇರುತ್ತಿದ್ದೀರಿ, ಎಷ್ಟು ಖುಷಿ ಯಾಗಿರುತ್ತಿದ್ದಿರಿ, ಈ ಸಲ ಹೀಗೇಕೆ?"

"ಈ ಸಲವೂ ಖುಷಿಯಾಗಿಯೇ ಇದ್ದೀನಪ್ಪಾ," ಅಂದ ರೋಮೆಲ್ ಸಂತೋಷದ ಕಳೆಯನ್ನು ತಂದು ಕೊಳ್ಳುತ್ತ.

"ಇಲ್ಲ ಡ್ಯಾಡಿ, ನೀವು ಅಷ್ಟು ಖುಷಿಯಾಗಿ ಇಲ್ಲ. ನಿಜ ಹೇಳಿ. ಏನು ತೊಂದರೆ?" ಅಂದ ಮ್ಯಾನ್‌ಫ್ರೆಡ್.

ರೋಮೆಲ್ ಅತ್ತಿತ್ತ ಕಣ್ಣಾಡಿಸಿದ. ಯಾರೂ ಇರಲಿಲ್ಲ. ಹೆಂಡತಿ ಅಡುಗೆಮನೆಯಲ್ಲಿ ಅಡುಗೆ ಯವರ ಮೇಲೆ ಪಾರುಪತ್ಯ ನಡೆಸುತ್ತಿದ್ದರು.

"ಯಾರಿಗೂ ಹೇಳುವುದಿಲ್ಲ ತಾನೆ?" ಕೇಳಿದ ರೋಮೆಲ್.

"ಇಲ್ಲ. ಯಾರಿಗೂ ಹೇಳುವುದಿಲ್ಲ."

"ನಿನ್ನ ತಾಯಿಗೂ?"

"ಹಾಗಂತ ಮಾತುಕೊಟ್ಟೆ."

"ನಿನ್ನೆ ಜನರಲ್ ವೆಗ್‌ಡಾರ್ಫ್‌ನಿಂದ ಫೋನು ಬಂದಿತ್ತು. ಹಿಟ್ಲರನ ಸಂದೇಶ ತೆಗೆದುಕೊಂಡು ಈ ದಿನ ನಮ್ಮ ಮನೆಗೆ ಬರುತ್ತಾನಂತೆ."

"ಬರಲಿಬಿಡಿ. ಒಳ್ಳೆಯದೇ ಆಯಿತಲ್ಲ."

"ಹಾಗಲ್ಲ. ನಾನು ಶತ್ರು ಪಕ್ಷದತ್ತ ವಾಲುತ್ತಿದ್ದೇನೆಂದು ಹಿಟ್ಲರನಿಗೆ ಗುಮಾನಿ. ಹೇಗಾದರೂ ಮಾಡಿ ನನ್ನನ್ನು ಮುಗಿಸಿಬಿಡಬೇಕೆಂದು ಸಂಚು ಹೂಡುತ್ತಲೇ ಇದ್ದಾನೆ. ಮೊನ್ನಿನ ವಿಮಾನ ದಾಳಿಯ ಪ್ರಕರಣ ನಿನಗೆ ಗೊತ್ತೇ ಇದೆಯಲ್ಲ."

"ಆದರೆ ಇಷ್ಟು ಬೇಗ ಮತ್ತೆ ಪ್ರಯತ್ನಿಸಲಿಕ್ಕಿಲ್ಲ."

"ನೋಡುವಾ. ದೇವರ ಇಚ್ಛೆ ಹೇಗೆ ಇದೆಯೋ ಹಾಗೇ ಆಗುತ್ತದೆ." ಎಂದ ರೋಮೆಲ್.

ಮರುದಿನ ಸಂಜೆ ಜನರಲ್ ವೆಗ್‌ಡಾರ್ಫ್ ಬಂದ. ಬರುವಾಗ ಜನರಲ್ ಮಿಸ್ಸೆಲ್ಲನನ್ನೂ ಕರೆದುಕೊಂಡು ಬಂದಿದ್ದ. ಲೋಕಾಭಿರಾಮವಾಗಿ ಆ ಮಾತು ಈ ಮಾತು ಆಡಿದ ಮೇಲೆ ವೆಗ್‌ಡಾರ್ಫ್,

"ರೋಮೆಲ್, ಸ್ವಲ್ಪ ಇತ್ತ ಕಡೆ ಬರುತ್ತೀರಾ? ಖಾಸಗೀಯಾಗಿ ಮಾತಾಡಬೇಕಿದೆ," ಅಂದ.

ಅವರಿಬ್ಬರೂ ಕಾರಿನ ಹತ್ತಿರ ಸಮೀಪಿಸಿದಾಗ ವೆಗ್‌ಡಾರ್ಫ್ ಹೇಳಿದ: "ಬಾಂಬ್ ಸ್ಫೋಟದಲ್ಲಿ ನಿಮ್ಮ ಕೈವಾಡವಿದ್ದದ್ದೂ ಹಿಟ್ಲರ್‌ಗೆ ಗೊತ್ತಾಗಿಬಿಟ್ಟಿದೆ. ಹಾಗೆಂದು ಸಂಚಿನಲ್ಲಿ ಭಾಗವಹಿಸಿದವರು ಈಗಾಗಲೇ ಹೇಳಿಯೂ ಇದ್ದಾರೆ. ಈಗ ನಿಮಗೆ ಇರುವ ಮಾರ್ಗಗಳು ಎರಡೇ ಎರಡು: ನಾನು ತಂದ ವಿಷವನ್ನಾದರೂ ಕುಡಿಯುವುದು ಇಲ್ಲವೆ ರಾಜದ್ರೋಹದ ಆಪಾದನೆಯನ್ನಾದರೂ ಎದುರಿಸುವುದು. ವಿಷ ಕುಡಿಯುವುದಾದರೆ ಸಕಲ ಮರ್ಯಾದೆಗಳೊಡನೆ ನಿಮ್ಮ ಅಂತ್ಯಸಂಸ್ಕಾರವನ್ನು ಮಾಡಲಾಗುತ್ತದೆ. ಕುಡಿಯದಿದ್ದರೆ ರಾಜದ್ರೋಹಕ್ಕಾಗಿ ಕೋರ್ಟನ್ನು ಎದುರಿಸಬೇಕಾಗುತ್ತದೆ. ನ್ಯಾಯಾಲಯದಲ್ಲಿ ರಾಜದ್ರೋಹದ ಆಪಾದನೆ ಸಿದ್ಧವಾದರೆ ನೀವೊಬ್ಬರೇ ಅಲ್ಲ, ನಿಮ್ಮ ಹೆಂಡತಿ ಹಾಗೂ ಮಗ ಕೂಡ ನೇಣುಗಂಬ ಏರಬೇಕಾಗುತ್ತದೆ. ಯೋಚಿಸಿ ನೋಡಿ. ನೀವು ಏನು ನಿರ್ಣಯ ತೆಗೆದುಕೊಂಡರೂ ಸಂತೋಷ." ಅಂದ ವೆಗ್‌ಡಾರ್ಫ್.

ಹಿಟ್ಲರನ ವಿರುದ್ಧ ನಿರ್ಣಯ ಕೊಡುವ ಧೈರ್ಯವಾದರೂ ಯಾವ ನ್ಯಾಯಾಧೀಶನಿಗಿದ್ದೀತು? ಇಷ್ಟಕ್ಕೂ ತನಗಾಗಿ ಹೆಂಡತಿ ಹಾಗೂ ಇರುವ ಏಕಮಾತ್ರ ಮಗ ಏಕೆ ಜೀವ ಕಳೆದುಕೊಳ್ಳಬೇಕು? ಎಂಬ ವಿಚಾರ ರೋಮೆಲ್ಲನಿಗೆ ಬಂದಿರಬೇಕು. ವೆಗ್‌ಡಾರ್ಫ್‌ನ ಮೊದಲನೆ ಸೂಚನೆಯನ್ನು ಒಪ್ಪಿಕೊಂಡ.

ವಿಷ ಕುಡಿದು ಕುಸಿದುಬಿದ್ದ ರೋಮೆಲ್ಲನನ್ನು ಕೂಡಲೇ ಆಸ್ಪತ್ರೆಗೆ ಸಾಗಿಸಲಾಯಿತು. ಅಪಘಾತವೊಂದರಲ್ಲಿ ರೋಮೆಲ್ ಅಸುನೀಗಿದನೆಂಬ ಹೇಳಿಕೆ ಮುಂದರ್ಧ ಗಂಟೆಯಲ್ಲೇ ಆಸ್ಪತ್ರೆಯಿಂದ ಹೊರಬಂತು.

ಮುಂದೆ ನಾಲ್ಕು ದಿನಗಳ ನಂತರ, ೧೯೪೪ರ ಅಕ್ಟೋಬರ್ ೧೮ರಂದು ಸಕಲ ಮಿಲಿಟರಿ ಗೌರವದೊಂದಿಗೆ ರೋಮೆಲ್ಲನ ದೇಹವನ್ನು ದಫನು ಮಾಡಲಾಯಿತು.

ಹಿಟ್ಲರ್ ಮಾತ್ರ ಅಂತ್ಯಸಂಸ್ಕಾರಕ್ಕೆ ಬಂದಿರಲಿಲ್ಲ.

●

**ಅಂತಃಕರಣ ಅಂಜುಗುಳಿಯಾಗಿರುತ್ತದೆ. ಯಾವ ದೋಷಗಳನ್ನು ನಿವಾರಿಸುವ ಶಕ್ತಿ ಅದಕ್ಕಿರುವುದಿಲ್ಲವೋ ಅಂಥ ದೋಷವುಳ್ಳವನನ್ನು ಅಪರಾಧಿ ಎಂದು ಪರಿಗಣಿಸಲು ಬೇಕಾದ ನ್ಯಾಯೋಚಿತ ಬುದ್ಧಿಯೂ ಅದಕ್ಕಿರುವುದಿಲ್ಲ.**

**- ಗೋಲ್ಡ್ ಸ್ಮಿತ್**

# ಅಳಿದ ಮೇಲೆ

**ಅಪಾರವಾದ ವೈಚಾರಿಕತೆ, ಆಳವೂ ಗಾಢವೂ ಆದ ಜೀವನಾನುಭವ, ಮಾನವ ಸಂಬಂಧಗಳ ಎಳೆಗಳನ್ನು ನವಿರಾಗಿ ಬಿಡಿಸುವ ಶೈಲಿಗೆ ಕನ್ನಡದ ಅಮೂಲ್ಯ ಸಾಹಿತಿ ಕೋಟ ಶಿವರಾಮ ಕಾರಂತರು ಅದ್ವಿತೀಯರು. ಅವರು ಬರೆದ 'ಅಳಿದ ಮೇಲೆ' ಕಾದಂಬರಿಯ ಈ ಪುಟಗಳು ನಮ್ಮೆಲ್ಲರನ್ನು ದೀರ್ಘ ಚಿಂತನೆಗೊಳಪಡಿಸುತ್ತವೆ.**

ಜೀವನವೆಂಬುದು ಬಹುದೀರ್ಘ ಕಾಲದ ಒಂದು ಯಾತ್ರೆ. ಅದು ತೊಡಗುವ ದಿನದಿಂದ ಆರೆಂಟು ವರ್ಷಗಳ ತನಕವೂ ನಮ್ಮ ಅರಿವೇ ನಮಗಾಗಿರುವುದಿಲ್ಲ. ತಾಯಿ, ತಂದೆ, ಅಣ್ಣ ತಮ್ಮ ಬಂಧುಜನ - ಇಂಥ ಅನೇಕರ ಸಂಪರ್ಕವು ಎಳೆತನದ ನಮ್ಮ ಮೊದ್ದು ಜೀವನದಲ್ಲಿ ಉಂಟಾಗುತ್ತದಾದರೂ, ಪರಾಶ್ರಯವಿಲ್ಲದೆ ನಮ್ಮ ಅಂದಿನ ಬಾಳೇ ಸಾಗದಾದರೂ, ಅವೆಲ್ಲವುಗಳ ವಿಚಾರದಲ್ಲಿ ಉಳಿಯುವ ನೆನಪುಗಳು ತೀರಾ ಕಡಿಮೆ. ಹೀಗೆ ಶೈಶವ ಕಳೆದು, ಬಾಲ್ಯ ತೊಡಗಿತೆಂದರೆ, ಶಾಲೆಯ ಒಳಗೂ ಹೊರಗೂ ಸಮವಯಸ್ಕರಾದವರ ಒಡನಾಟ ನಮಗೆ ದೊರಕಿತೆಂದರೆ, ಆಗ ನಮ್ಮ ಗೆಳೆಯರ ವಿಚಾರದಲ್ಲಿ ಹೆಚ್ಚಿನ ನೆನಪು ಉಳಿಯುತ್ತದೆ. ಆ ನೆನಪುಗಳು ಕೂಡ ತಾತ್ಕಾಲಿಕವಾದುವೇ. ವಿದ್ಯಾರ್ಥಿ ದೆಸೆ ಮುಗಿದು, ತಾರುಣ್ಯದಿಂದ ಯೌವನಕ್ಕೆ ಕಾಲಿರಿಸುವಾಗ, ನಮ್ಮ ಬದುಕು ಸಾಕಷ್ಟು ವಿಶೇಷವಾದ ಸವಿ ನೆನಪುಗಳಿಂದ ಕೂಡಿದ್ದರೂ, ಮುಂದೆ ಯೌವನ ಬಂದು, ಸಂಸಾರದ ಜಂಜಾಟದಲ್ಲಿ ಕಾಲಿಟ್ಟೆವೆಂದರೆ, ನೆನಪಿನ ಭಂಡಾರದಲ್ಲಿ ಉಳಿಯುವ ಗೆಳೆಯರ ಸಂಖ್ಯೆಯೆಂಬುದು ಒಂದೋ, ಎರಡೋ; ಹೆಚ್ಚೆಂದರೆ ಹತ್ತೋ, ಹನ್ನೆರಡೋ. ಮುಂದಣ ಪ್ರಪಂಚವೇ ಬೇರೆ. ಜೀವನ ರಂಗದಲ್ಲಿ ಸಂಧಿಸುವ ಮಿತ್ರವರ್ಗವೇ ಬೇರೆ. ಆಗಲೂ ಗಾಢವಾದ ನೆನಪಿಗೆ ಸಿಗುವ, ಬದುಕಿಗೆ ಒದಗುವ ಅಥವಾ ಬದುಕಿಗೆ ವಿಘ್ನಕಾರಿಯಾಗಿ ಬಂದು, ಬಡಿದು, ಮನಸ್ಸಿನಲ್ಲಿ ನೆನಪನ್ನು ಕೆತ್ತಿ ಇರಿಸಬಲ್ಲ ಜನಗಳ ಸಂಖ್ಯೆ ವಿಶೇಷವಿರದು. ಅಲ್ಲಿಂದ ಮುಪ್ಪಿಗೆ ಕಾಲಿರಿಸಿದರೆ, ಹಳೆಯ ನೆನಪಿನ ಉಗ್ರಾಣ ಬಟ್ಟಬರಿದಾಗುತ್ತದೆ. ಮುಪ್ಪಿನ ದಿನಗಳಲ್ಲಿ, ಸಮವಯಸ್ಕರಲ್ಲದವರೊಡನೆ ನಮ್ಮ ವ್ಯವಹಾರ ಕಡಿಮೆಯಾಗುತ್ತದೆ. ನಮ್ಮ ಸುಖಕ್ಕೋ ದುಃಖಕ್ಕೋ ಸಮಾಧಾನಕ್ಕೋ ಒದಗುವಂಥವರ ಸಂಖ್ಯೆ ಮುಪ್ಪಿಯ ಪರಿಮಿತಿಯೊಳಗೆ ನೆಲಸಿಬಿಡುತ್ತದೆ. ಅರವತ್ತು-ಎಪ್ಪತ್ತು ವರ್ಷಗಳ ಜೀವನ ಯಾತ್ರೆಯಲ್ಲಿ ಕಂಡು ಮಾತನಾಡಿಸಿದವರ ಸಂಖ್ಯೆ, ಒಡನಾಡಿದವರ ಸಂಖ್ಯೆ, ವ್ಯವಹಾರ ಕ್ಷೇತ್ರದಲ್ಲಿ ಬೆರೆತು ಬೇರೆಯಾದವರ ಸಂಖ್ಯೆ-ಇವನ್ನೆಲ್ಲ ಕೂಡಿಸಿದರೆ ಸಾವಿರ ಕುದುರೆ ಸರದಾರನಷ್ಟು ವಿಪುಲ ಪರಿಚಯ. ಬಂದ ಬಾಳನ್ನು ಬಿಟ್ಟು ತೊಲಗುವಾಗ ಅದೇ ಸರದಾರ ಮನೆಯ ಹೆಂಡತಿಯ ಕಾಸ್ತಾರನಂತೆ ಅಜ್ಞಾತವ್ಯಕ್ತಿಯಾಗಿ, ಅಲ್ಪನಾಗಿ ತೊಲಗಲೂ ಬಹುದು. ಬಹು ಭಾಗ್ಯಶಾಲಿಯೆಂದರೆ ಹತ್ತೆಂಟು ಮಂದಿ ಗೆಳೆಯರು ಅವನ ಅವಸಾನವನ್ನು ನೆನೆದು, 'ಪಾಪ ! ತೀರಿಕೊಂಡನೆ ? ವಯಸ್ಸಾಯಿತು; ಇನ್ನೇನಂತೆ ?' ಎಂದು ಅವನ ಸಾವಿನ ಸ್ಮರಣೆಯಿಂದ ಒಂದೊಂದು ತೊಟ್ಟು ಕಣ್ಣೀರನ್ನೂ ಕೆಡವಲೂಬಹುದು; ಕೆಡವದೆ ಮಾತುಗಳಿಂದಲೇ ಮುಗಿಸಲೂಬಹುದು. ಎಷ್ಟು ದೊಡ್ಡದಾದ ಪಯಣ ? ಎಷ್ಟುಕಾಲ ನಡೆಸಿದ್ದು ? ಏನೆಲ್ಲ ಪುರುಷಾರ್ಥ ಸಾಧಿಸಿದ್ದು ? ಏನು ದುಡಿದದ್ದು ? ಏನು ಬಿಟ್ಟದ್ದು ? ಇವುಗಳನ್ನೆಲ್ಲ ಲೆಕ್ಕ ಹಾಕಿದರೆ ಮನೆ, ಮಾರು, ಹಣ, ಕಾಸು, ಒಂದಿಷ್ಟಾದರೂ ಉಳಿಯಬಹುದು. ಪರರ ನೆನಪಿನ ಭಿತ್ತಿಯಲ್ಲಿ 'ಇಂಥ ಒಂದು ಜೀವ ಇದ್ದಿತ್ತು; ಅದು ಹೋಯಿತಲ್ಲ. ಅದು ಹೋದುದರಿಂದ ನಮ್ಮ ಬಾಳ್ವೆಯ ಸಂಪತ್ತು ಅಷ್ಟೇ ಕ್ಷೀಣವಾಯಿತಲ್ಲ, ಎಂದು ಬರೆಯಿಸಿ ಹೋಗಬಲ್ಲಂಥ ಬಾಳ್ವೆಯ ಭಾಗ್ಯ ಎಷ್ಟು ಮಂದಿಗಿರುತ್ತದೆ ? ಜೀವನ ಯಾತ್ರೆಯೇ ಹಾಗಂತೆ ! ಆ ನಾಟಕದಲ್ಲಿನ ಕ್ಷಣಿಕ ದೃಶ್ಯ- ನಾವು ಊರೂರಿಗೆ ಮಾಡುವ ಪಯಣ.

## ಅಚ್ಚಳಿಯದ ಪುಟಗಳು

ಸಂಗ್ರಹ: **ಹಾಲಸ್ವಾಮಿ ಮಲ್ಲನಗೌಡರ**



# ಚಿತ್ರಜಗತ್ತಿನ ಚಿರಂಜೀವಿ

# ಚಾರ್ಲಿ ಚಾಪ್ಲಿನ್

● ಖಜಾನೆ ಕೃಷ್ಣಮೂರ್ತಿ

ಅಸ್ತವ್ಯಸ್ತ ಕೊಳಕು ಶರಟು; ಇಸ್ತ್ರಿಗೆ ಬಗ್ಗದ ನೆಕ್ ಟೈ; ಮೇಲ್ತುಟಿಯ ಮೇಲೆ ಮೆತ್ತಿದಂತಿರುವ ಟೂತ್‌ಬ್ರಷ್ ಮಾದರಿಯ ನೊಣ ಮೀಸೆ; ಸೊಂಟದ ಮೇಲಿರಲು ನಿರಾಕರಿಸುವ ದೊಗಲೆ ಷರಾಯಿ, ಚಿಕ್ಕ ಪಾದಗಳನ್ನು ಮುಚ್ಚಲು ಇಮ್ಮಡಿ ಉಳತೇಯು ಬೂಟುಗಳು; ಹೆಂಗಸರು ಧರಿಸುವಂತಹ ಚಿಕ್ಕಕೋಟು, ಹಳೆಗಾಲದ ಛತ್ರಿಗಳ ತುದಿಯಲ್ಲಿ ಕೊಂಕಿನಂತೆ ಬಾಗು ಇರುವ, ಹೇಗೆಂದರೆ ಹಾಗೆ ತಿರುಗಿಸಬಿರುವ ಒಂದು ಬೆತ್ತ; ತಲೆಯ ಮೇಲೊಂದು ಡರ್ಬಿ ಹ್ಯಾಟು; ಈ ವಿಶಿಷ್ಟ ವೇಷದ ಚಾರ್ಲಿ ಚಾಪ್ಲಿನ್ ಯಾರಿಗೆ ಗೊತ್ತಿಲ್ಲ? ಅನುಕರಣೆಗೆ ಮೀರಿದ ಅವನ ನಡಿಗೆಯೇ ಸಾಕು. ಅದೊಂದು ವಿಚಿತ್ರ ವಿಶಿಷ್ಟ ನಡಿಗೆ! ಈ ಜಗತ್ತಿಗೆ ಬಂದಾಗ ಅವನ ಬಾಯಲ್ಲಿ ಬೆಳ್ಳಿಯ ಚಮಚವಿರದಿದ್ದರೂ ಇಲ್ಲಿಂದ ಹೊರಟಾಗ ಮಾತ್ರ ಅವನ ದೇಹ ಬೆಳ್ಳಿಯ ಶವಸಂಪುಟದಲ್ಲಿತ್ತು! 'ಚಿಂದಿಯಿಂದ ಚಿನ್ನಕ್ಕೆ' ಅಂತಾರಲ್ಲ, ಹಾಗೇ ಅವನ ಜೀವನ ಕೂಡ!

೧೮೮೯ರ ಏಪ್ರಿಲ್ ೧೬ರಂದು ಲಂಡನ್ನಿನ ವೂಲ್‌ವರ್ತ್ ಭಾಗದ ಈಸ್ಟ್‌ಲೇನ್‌ನಲ್ಲಿ ಇವನ ಜನನ. ತಂದೆ ಚಾರಲ್ಸ್ ಚಾಪ್ಲಿನ್; ತಾಯಿ ಹಾನಾ ಚಾಪ್ಲಿನ್. ಜೀವನದಲ್ಲಿ ಎದುರಾದ ಕಷ್ಟಗಳಿಗೋ ಏನೋ ತಂದೆ ರಿಪೇರಿಗೆ ಮೀರಿದ ಕುಡುಕ. ತಾಯಿ ಹುಟ್ಟಿದಾಗ ಮಗುವಿಗಿರಿಸಿದ ಹೆಸರು ಸ್ಪೆನ್ಸರ್ ಚಾಪ್ಲಿನ್. ಜನಿಸಿದ ಅನತಿ ಕಾಲದಲ್ಲೇ ತಂದೆಯು ತಾಯಿಯನ್ನು ತೊರೆದು ಹೋದ. ಇದರಿಂದ ಮಗುವಿಗೆ ಶಾಲಾ ಶಿಕ್ಷಣ ಶೂನ್ಯ! ಎಲ್ಲ ಮಕ್ಕಳಂತೆ ಶಾಲೆಯಲ್ಲಿ ನಲಿವ ಭಾಗ್ಯ ಅವನದಾಗಲಿಲ್ಲ. ಆ ಬಾಲ್ಯವೆಲ್ಲ ವರ್ಕ್ ಹೌಸ್‌ಗಳಲ್ಲಿ, ಅನಾಥಾಲಯಗಳಲ್ಲಿ, ಡೆಟರ್ಸ್ ಪ್ರಿಸನ್‌ಗಳಲ್ಲಿ- ಅವಕಾಶ ಸಿಕ್ಕಿದಾಗ ಮ್ಯೂಸಿಕ್ ಹಾಲ್‌ಗಳಲ್ಲಿ ಹಾಡು ಹೇಳುವ ಅಥವಾ ಅಭಿನಯ ಮಾಡುವುದರಲ್ಲಿ ಕಳೆಯಿತು.

ಚಾರ್ಲಿ ಜನಿಸಿದ ಆರು ವರ್ಷಗಳ ನಂತರ 'ಸಿನಿಮಾ' ಜನ್ಮ ತಾಳಿದ್ದು. ಅದೂ ಮೂಕಿ! ಜನ ಅದಕ್ಕೆ ಮುಂಚೆ ನಾಟ್ಯ ಮಂದಿರಗಳಲ್ಲಿ, ಸಂಗೀತ ಕಚೇರಿಗಳಲ್ಲಿ, ನಾಟಕಶಾಲೆಗಳಲ್ಲಿ, ಮ್ಯೂಸಿಕ್ ಹಾಲ್‌ಗಳಲ್ಲಿ ಮನೋರಂಜನೆ ಪಡೆಯುತ್ತಿದ್ದರು. ಅಲ್ಲಿ ನೆರೆಯುತ್ತಿದ್ದ ಪ್ರೇಕ್ಷಕರಾದರೂ ಎಂಥವರು! ಭಂಡರು, ಪುಂಡರು-ಪೋಕರಿಗಳು, ಕುಡುಕರು-

ಕಟುಕರು, ಸೋಲ್ಜರುಗಳು, ಸೈಲರುಗಳು- ಇವರೇ! ಇವರ ಕೂಗಾಟ, ಕಿರಿಚಾಟ, ಅಬ್ಬರದ ಅರಚಾಟ ಅಸಾಧ್ಯ. ಕುಡಿದ ಮತ್ತಿನಲ್ಲಿ, ಅಧಿಕಾರದ ಗತ್ತಿನಲ್ಲಿ ಇವರು ರಂಗದ ಮೇಲಿದ್ದವರಿಗೇ ಅಪ್ಪಣೆ ಮಾಡುವುದು. ಜಗಳ-ಕದನಗಳು ಇವರಿಗೆ ನಿತ್ಯೋತ್ಸವ. ಇಂತಹವರ ಮುಂದೆ ಚಾರ್ಲಿಯ ತಾಯಿ ಹಾಡಬೇಕು! ಅದೂ ಅವರು ಯಾವುದನ್ನು ಕೇಳುತ್ತಾರೋ ಅದನ್ನೇ ಹಾಡಬೇಕು. ಅವರು ಬಿಸಾಡಿದ ದುಡ್ಡುದುಗ್ಗಾಣಿಗಳನ್ನು ಹೆಕ್ಕಿತಂದು ಜೀವನ ಸಾಗಿಸಬೇಕು. ಹಸಿವೆಯ ತೋಳವನ್ನು ಮನೆಬಾಗಿಲಿಂದಾಚೆಯೇ ಇರಿಸಬೇಕು.

ಒಮ್ಮೆ ವಿಪರೀತ ಜ್ವರ ಬಂದು ತಪಿಸುತ್ತಿದ್ದರೂ ಅವರ ಮುಂದೆ ಹಾಡಲೇಬೇಕಾದ ಒಂದು ಸಂದರ್ಭ ಆಕೆಗೊದಗಿತು. ಜೊತೆಯಲ್ಲಿ ಮೂರು-ನಾಲ್ಕು ವರ್ಷದ ಈ ಚಾಪ್ಲಿನ್!. ಹಾಡುತ್ತ ಹಾಡುತ್ತ ಆಕೆಗೆ ಇದ್ದಕ್ಕಿದ್ದಂತೆ ಗಂಟಲು ಕಟ್ಟಿತು. ಆದರೂ ಮುಂದೆ ಹಾಡಲೇಬೇಕೆಂದು ಪ್ರೇಕ್ಷಕರ ಕಟ್ಟಪ್ಪಣೆ! ಆಕೆ ಹಾಡುವಂತಿಲ್ಲ. ಅವರು ಕರುಣೆ ತೋರಿ ಬಿಡುವಂತಿಲ್ಲ. ಪರಿಣಾಮ- ಅವರು ಆಕೆಯನ್ನು ರಂಗದ ಮೇಲಿಂದ ಓಡಿಸಿಬಿಟ್ಟರು. ಇದನ್ನೆಲ್ಲ ಕಣ್ಣೀರಿಡುತ್ತ ನೋಡುತ್ತಿದ್ದ ಎಳೆಯ ಈ ಚಾರ್ಲಿ ತನ್ನ ತಾಯಿ ನಿಲ್ಲಿಸಿದ್ದ ಹಾಡಿನ ಚರಣವನ್ನು ಅವಳದೇ ದನಿ ಅನುಕರಿಸಿ ಹಾಡಿದಾಗ ಆ ಪ್ರೇಕ್ಷಕರು ಬೆರಗಾದರು. 'ಶಹಬ್ಬಾಶ್' ಎಂದರು. ಹಣ-ನೋಟುಗಳ ಸುರಿಮಳೆಯಾಯಿತು. 'ಒನ್ಸ್‌ಮೋರ್' ಮಾಡಿದರು. "ನೀವು ಎರಚಿ ಬಿಸಾಡಿದ ಹಣವನ್ನೆಲ್ಲ ಎತ್ತಿ ಆರಿಸಿಕೊಂಡು ಬಂದು, ಜೋಪಾನವಾಗಿರಿಸಿ, ಮತ್ತೆ ಬಂದು ಹಾಡಲಾ?" ಎಂದವರನ್ನು ಕೇಳಿ ಇನ್ನಷ್ಟು ನಗಿಸಿದ. ಅವರು ನಕ್ಕು ನಕ್ಕು ಸುಸ್ತಾದರು. ಕೆಲವರಿಗೆ ನಗು ತಡೆಯಲಾರದೆ ಕಣ್ಣೀರೂ ಬಂತು. ಚಾರ್ಲಿ ಖ್ಯಾತನಾದದ್ದು ಹೀಗೆ!

ಓದು-ಬರಹ ಅಷ್ಟಕ್ಕಷ್ಟೇ ಆದ ಈ ಕಿಶೋರ 'ಏಟ್ ಲ್ಯಾಂಕಾಶೈರ್ ಲ್ಯಾಡ್ಸ್' ಎಂಬ ಪ್ರಹಸನದಲ್ಲಿ ಒಂದು ನೃತ್ಯ ಮಾಡಿ ಪ್ರೇಕ್ಷಕರ ಮನ ಗೆದ್ದ. ವಿಲಿಯಂ ಜಿಲೆಟ್ ಎಂಬವರ ನಾಟಕ ಸಂಸ್ಥೆ ಪ್ರದರ್ಶಿಸಿದ 'ಷೆರ್ಲಾಕ್ ಹೋಮ್ಸ್' ಕತೆಯ ಪಾತ್ರವೊಂದರಿಂದಾಗಿ ಅವನು ಅಭಿಜಾತ ನಟನೆನಿಸಿಕೊಂಡ ಎಂದು ಹೇಳಲಾಗುತ್ತದೆ. ಆಲಿವರ್ ಟ್ವಿಸ್ಟ್‌ನಲ್ಲಿ ಪಾತ್ರ ವಹಿಸಿದ್ದರಿಂದ ಎಂದು ಇನ್ನು ಕೆಲವರ ಹೇಳಿಕೆ. ಒಟ್ಟಿನಲ್ಲಿ ಅವನು ನಟನಾಗಿ ಹೋದ. ತನ್ನ ಮಲಸೋದರ ಸಿಡ್ನಿ ಚಾಪ್ಲಿನ್‌ನ ನೆರವಿನಿಂದಾಗಿ ಸ್ಕ್ರಿಪ್ಟ್‌ಗಳನ್ನೋದಲು ಕಲಿತ. ಅವನೊಂದಿಗೆ ಒಂದು ನಾಟಕದ ಕಂಪನಿ ಸೇರಿದ. ೧೯೧೦ರಲ್ಲಿ ಸರ್ವರಿಗೂ ಸುವರ್ಣಾವಕಾಶ ನೀಡಿ ಬಾಗಿಲು ತೆರೆಯುವ ಅಮೆರಿಕೆಗೆ ಹೋದ. ಅಲ್ಲಿ ಹಲವು ಪ್ರದರ್ಶನಗಳನ್ನು ನೀಡಿ ಮೂರುವರ್ಷಗಳ ತರುವಾಯ ತಾಯ್ನಾಡಿಗೆ ಹಿಂದಿರುಗಿದ. ಮತ್ತೆ ೧೯೧೦ರಲ್ಲಿ ಅಮೆರಿಕೆಗೆ ಹೋದವನು ಇಗ್ಲೆಂಡಿಗೆ ಮರಳಲೇ ಇಲ್ಲ. ಅಲ್ಲೇ ಇದ್ದು ಪ್ರದರ್ಶನಗಳನ್ನು ನೀಡಿ ಸಿನಿಮಾ ತಂತ್ರದ ಅವಿಷ್ಕಾರವಾದೊಡನೆ ಅದರಲ್ಲಿ ನಟನಾಗಿ ಸೇರಿದ ಚಾರ್ಲಿ ಮತ್ತೆಂದಿಗೂ ರಂಗಭೂಮಿಯೆಡೆಗೆ ತಲೆ ಇರಿಸಿ ಮಲಗಲಿಲ್ಲ. 'ಸಿನಿಮ' ಅವನ ಪಾಲಿಗೆ ಚಿನ್ನದ ಮೊಟ್ಟೆಯಿಡುವ ಕೋಳಿಯಾಗಿಬಿಟ್ಟಿತು.

ಅದರಲ್ಲಿ ಅವನ ವಾರದ ಸಂಬಳ ಆರಂಭ ದಲ್ಲಿ ೧೨೫೦ ಡಾಲರ್ ಇದ್ದಿತು. ಮರುವರ್ಷ ಅದು ವಾರಕ್ಕೆ ೧೦ ಸಾವಿರ ಡಾಲರ್‌ಗಳಿಗೇರಿತು. ಬೋನಸ್ ರೂಪದಲ್ಲಿ ಒಂದೂವರೆ ಲಕ್ಷ ಡಾಲರ್ ಕೈಸೇರಿತು. ಅವನು ತಯಾರಿಸಿ ನಟಿಸಿದ ಒಂದು ರೀಲಿನ ಮೂಕಿ ಚಿತ್ರಗಳನ್ನು ಕಂಡ ಅಮೆರಿಕವಿಡೀ ಹುಚ್ಚೆದ್ದು ಕುಣಿದಾಡಿತು. ಅವರ ಹೃದಯವನ್ನವನು ಈ ರೀತಿ ಗೆದ್ದುಕೊಂಡ!

'ದಿ ಕಿಡ್ಸ್ ಆಟೋ ರೇಸಸ್ ಅಟ್ ವೆನಿಸ್', 'ದಿ ಫ್ಲೋರ್ ವಾಕರ್', 'ದಿ ಪಾನ್‌ಶಾಪ್', 'ಈಸೀ ಸ್ಟ್ರೀಟ್', 'ದಿ ಇಮಿಗ್ರಂಟ್', 'ದಿ ಜಂಟಲ್‌ಮನ್ ಟ್ರಾಂಪ್' ಮೊದಲಾದ ಅವನ ಚಿತ್ರಗಳು ಅಲ್ಲಿ ಮನೆಮಾತಾಗಿಬಿಟ್ಟವು. ಅದರಲ್ಲಿ 'ದಿ ಇಮಿಗ್ರಂಟ್' ಹೆಚ್ಚು ಜನಪ್ರಿಯವಾಯಿತು. ಆದರೆ ಚಾರ್ಲಿ ಜಗದ್ವಿಖ್ಯಾತನಾಗಲು ಅವನೇ ಸೃಷ್ಟಿಸಿದ 'ದಿ ಲಿಟ್ಲ್ ಫೆಲೋ', ಟ್ರಾಂಪ್ ಮುಖ್ಯ ಕಾರಣ. ಈ ಪಾತ್ರ ಮೊಟ್ಟಮೊದಲು ಬಂದದ್ದು- 'ದಿ ಕಿಡ್ಸ್ ಆಟೋ ರೇಸಸ್ ಅಟ್ ವೆನಿಸ್' ಚಿತ್ರದಲ್ಲಿ.

ಮಲಅಣ್ಣ ಸಿಡ್ನಿಯ ನೆರವಿನಿಂದ ಚಾರ್ಲಿ ಮೊದಲು ಸೇರಿದ್ದು ಫ್ರೆಡ್ ಕಾರ್ನೊ ಕಂಪನಿ.

ಕೀಸ್ಟೋನ್ ಕಂಪನಿ ಎಂಬ ಇನ್ನೊಂದರ ಮಾಲಿಕರಾದ ಮ್ಯಾಕ್‌ಸೆನೆಟ್ ಎಂಬುವರಿಗೆ ಅವನ ಮೇಲೆ ಕಣ್ಣು! ಅವರು ಅವನ ಎಲ್ಲ ಪಾತ್ರಗಳನ್ನೂ ಗಮನಿಸುತ್ತಿದ್ದು ಕೊನೆಯಲ್ಲಿ ಅವನನ್ನು ತಮ್ಮ ಕಂಪನಿಗೇ ಸೇರಿಸಿಕೊಂಡರು. 'ಕಿಡ್ಸ್ ಆಟೋರೇಸಸ್' ತಯಾರಿಸಿದವರು ಇವರೇ.

ಒಂದು ರಾತ್ರಿ ಅವರು ಚಾರ್ಲಿಗೆ, "ಕೂಡಲೇ ಮೇಕಪ್ ರೂಮ್‌ಗೆ ಹೋಗಿ ಒಂದು ವಿಚಿತ್ರ ಮೇಕಪ್ ಮಾಡಿಕೊಂಡು ಬಾ. ಅದು ವಯೋಮಾನದಲ್ಲಿ ನಿನಗಿಂತ ಹೆಚ್ಚಾಗಿದ್ದರೂ ಚಿಂತೆಯಿಲ್ಲ. ಅದೇ ರೀತಿ ವಾರ್ಡ್‌ರೋಬ್‌ನಲ್ಲಿ ಕೈಗೆ ಸಿಕ್ಕಿದ ಬಟ್ಟೆ ಹಾಕಿಕೊಂಡು ಬಾ." ಎಂದು ಅವಸರದ ಅಪ್ಪಣೆ ಮಾಡಿದರು. ಆಗ ಅವನು ಮಾಡಿಕೊಂಡ ಅವತಾರವೇ 'ಟ್ರಾಂಪ್.' ಆ ಶರಟು, ಷರಾಯಿ, ಟೈ, ನೊಣ ಮೀಸೆ, ಕೋಟು, ಬೂಟು, ಬೆತ್ತ ಎಲ್ಲ ಆಗಲೇ ಸಿಕ್ಕದ್ದು. ಆದರೆ ಬೂಟಗಳು ಮಾತ್ರ ಅಳತೆಗೆ ಮೀರಿದವು! ಕಾಲಿಗೆ ಅಳಕ-ಜಳಕ! ಏನು ಮಾಡಬೇಕು? ಆದರೆ ಮೇಲಿನವರು ಅವಸರದ ಅಪ್ಪಣೆ ಮಾಡಿದ್ದರಲ್ಲ? ತಕ್ಷಣ ಎಡಗಾಲಿಗೆ ಬಲಬೂಟು, ಬಲಗಾಲಿಗೆ ಎಡಬೂಟು ಹಾಕಿಕೊಂಡಾಗ ಕೊಂಚ ಬಿಗಿಬಂದು ನಡೆಯುವ ಹಾಗಾಯಿತು. ಆ ಬಿಗಿ ಮತ್ತು ನಟನೆಯ ಸಲುವಾಗಿ ಸೊಟ್ಟಸೊಟ್ಟ ನಡೆಯಬೇಕಾಯಿತು. ಹೀಗೆ ಟ್ರಾಂಪ್‌ನ ಜನ್ಮವಾಗಿ ಅವನು ಅಮರನಾಗಿಹೋದ! ಈ ರೂಪವೇ 'ಗೋಲ್ಡ್‌ರಷ್'ನಲ್ಲಿ 'ಕಿಡ್'ನಲ್ಲಿ, 'ಸಿಟಿ ಲೈಟ್ಸ್'ನಲ್ಲಿ, 'ಮಾಡರ್ನ್ ಟೈಮ್ಸ್'ನಲ್ಲಿ, 'ಫ್ಲವರ್ ಗರ್ಲ್'ನಲ್ಲಿ ಕಾಣಿಸಿಕೊಂಡದ್ದು.

ಅಮೆರಿಕೆಯ ಜನಕ್ಕೆ ಅವನ ಈ ವಿಚಿತ್ರ ವೇಷ, ಪಾತ್ರ, ನಟನೆಗಳಿಂದ ಹುಚ್ಚೇ ಹಿಡಿದುಬಿಟ್ಟಿತು. 'ಎ ನೈಟ್ ಇನ್ ಆ್ಯನ್ ಇಂಗ್ಲಿಷ್ ಮ್ಯೂಸಿಕ್ ಹಾಲ್' ಎಂಬ ಚಿತ್ರದಲ್ಲಿ ತನ್ನ ಅಭಿನಯದಿಂದ ಅವನು ಅವರ ಮನಸ್ಸನ್ನು ಪೂರ್ತಿಯಾಗಿ ಗೆದ್ದ. ಎಂದಿಗೂ ಅವನು ಹುಡುಕಿ ಹೋಗದ ಹಣ-ಕೀರ್ತಿಗಳು ಈಗ ಅವನನ್ನೇ ಹುಡುಕಿ ಬಂದವು. ಅವನೆಲ್ಲಾದರೂ ಬರುತ್ತಿದ್ದಾನೆಂದರೆ ರಸ್ತೆಗಳೆಲ್ಲ ಜನರಿಂದ ತುಂಬಿಹೋಗಿ ಸಂಚಾರ ಸ್ಥಗಿತವಾಗುತ್ತಿತ್ತು. ನಗರಪಿತೃಗಳಿಂದ ಆಹ್ವಾನ, ಅಭಿ



ನಂದನಾ ಸಮಾರಂಭಗಳು, ವಿವಿಧ ಸಂಸ್ಥೆಗಳಿಗೆ ಅವನ ಭೇಟಿ, ಭಾಷಣಗಳು, ಶಾಲಾ-ಕಾಲೇಜುಗಳ ಸಮಾರಂಭಗಳಿಗೆ ಅವನ ಆಗಮನ- ಎಲ್ಲ ಆರಂಭವಾದವು. ವೃತ್ತಪತ್ರಿಕೆಗಳು ಅವನ ಅಭ್ಯುದಯದಿಂದ ಎಚ್ಚೆತ್ತು ಅವನನ್ನು ಗಮನಿಸುತ್ತ, ಗಂಟೆಗಂಟೆಗಳಿಗೂ ಅವನು ಎಲ್ಲಿದ್ದಾನೆ? ಏನು ಮಾಡುತ್ತಿದ್ದಾನೆ? ಅವನ ಇಂದಿನ ಕಾರ್ಯಕ್ರಮವೇನು? ನಾಳೆ ಏನು? ಎಷ್ಟು ಹೊತ್ತಿಗೆ ಎಲ್ಲಿರುತ್ತಾನೆ- ಇವುಗಳ ಎಲ್ಲ ವಿವರಗಳನ್ನೂ ಸ್ಪೆಶಲ್ ಬುಲೆಟಿನ್‌ಗಳ ಮೂಲಕ ಕಾಲಕಾಲಕ್ಕೆ ಪ್ರಕಟಿಸಲಾರಂಭಿಸಿದವು ಇಂತಹ ವ್ಯಕ್ತಿಗೆ ಆಶ್ರಯ' ನೀಡಿದ ಧನ್ಯ ರಾಷ್ಟ್ರ ಅಮೆರಿಕ!

★ ★ ★

ಚಾರ್ಲಿಯ ತಂದೆ ನಿಧನನಾಗಿ ತಾಯಿಗೆ ಪೂರ್ತಿ ಬುದ್ಧಿಭ್ರಮಣೆಯಾದ ಕತೆ ಎಲ್ಲರಿಗೂ ಗೊತ್ತಿದೆ. ಆಕೆ ಎಲ್ಲಿಯೋ ಕಳೆದೂ ಹೋದಳು. ಅವಳನ್ನು ಹುಡುಕಿ ಹುಡುಕಿ ಚಾರ್ಲಿ ಬೆಂಡಾಗಿ ಬಿಟ್ಟ. ಅವನು ಅಮೆರಿಕೆಗೆ ಹೋಗಿ ಖ್ಯಾತ ನಟನಾಗಿ, ನಿರ್ದೇಶಕನಾಗಿ, ಶ್ರೀಮಂತನಾದರೂ ಈ ತಾಯಿ ಸಿಗಲಿಲ್ಲ. ಕೊನೆಗೆ ಅವನು, "ನನ್ನ ತಾಯಿ ಹೀಗೆ ನಾಪತ್ತೆಯಾಗಿದ್ದಾಳೆ. ಹುಡುಕಿಕೊಂಡು ಬಂದು ಆಕೆಯನ್ನು ನನಗೆ ತಲುಪಿಸಿದವರಿಗೆ ಭಾರೀ ಬಹುಮಾನ." ಎಂದು ಪತ್ರಿಕೆಗಳಲ್ಲಿ ಪ್ರಚುರಪಡಿಸಿದ. ಪರಿಣಾಮವಾಗಿ ಏಳುನೂರಕ್ಕೂ ಮೀರಿದ ಸಂಖ್ಯೆಯಲ್ಲಿ ಸ್ತ್ರೀಯರು 'ನಾನವನ ತಾಯಿ' ಎಂದು ಸಾಧಿಸಲು 'ಕ್ಯೂ' ನಿಂತಿದ್ದರಂತೆ!

ಮುಂದೆ ಅದೇ ತಾಯಿಯೇ ಅಂತಹುದೇ ಬುದ್ಧಿಭ್ರಮಣ ಸ್ಥಿತಿಯಲ್ಲಿ ಈ ಮಗನಿಗೆ ದೊರೆತಳಂತೆ. (ಸುಮಾರು ೧೯೭೦ರಲ್ಲಿರಬೇಕು) ಈ ಮಗ

ಕೊನೆಯ ಏಳು ವರ್ಷಗಳಲ್ಲಿ ಆಕೆಯನ್ನು ಅತ್ಯಂತ ಶ್ರೀಮಂತ ಸ್ಥಿತಿಯಲ್ಲಿರಿಸಿ ಕಾಪಾಡಿದ. ಆದರೆ ಆಕೆಗೆ ಸ್ಮರಣೆ ಬರಲೇ ಇಲ್ಲ. ಈ ಮಗನ ಗುರುತು ಹಿಡಿಯಲೂ ಇಲ್ಲ!

★ ★ ★

ಒಂದೆಡೆ "ಚಾರ್ಲಿಯ ಅನುಕರಣ ಸ್ಪರ್ಧೆ." ತುಂಬ ಜನ ಭಾಗವಹಿಸಿದ್ದರು. 'ಒಂದು ಕೈ ನೋಡೇ ಬಿಡೋಣ' ಅಂತ ಚಾರ್ಲಿಯೂ ಅದರಲ್ಲಿ ಭಾಗವಹಿಸಿದ್ದನಂತೆ. ಆದರೆ ಅಲ್ಲಿ ಅವನಿಗೇ ಎರಡನೇ ಬಹುಮಾನ! ತೀರ್ಪುಗಾರರು ಎಂತಹ ಮೂರ್ಖರು- ಎಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕೆ?

ತನ್ನ ಚಿತ್ರಗಳಲ್ಲಿ ಪ್ರೇಕ್ಷಕರಿಗೆ ಸಂದೇಶ ನೀಡಲು ಅವನು ಬಳಸಿಕೊಂಡ ತಂತ್ರ ಹಾಸ್ಯ! ನಗಬಾರದ ಕಡೆ ನಕ್ಕು, ಅಳುಬಾರದ ಕಡೆ ಅತ್ತು ನಗೆಗೀಡು ಮಾಡುವ, ನಗೋಡಾಗುವ ಹಾಸ್ಯವಲ್ಲ ಅದು. ಅದೊಂದು ರೇಶ್ಮೆಯ ನವಿರು ಚಾವಟಿ! ಅದರಿಂದ ವ್ಯಕ್ತಿಗೆ ಬಾರಿಸಿ ಅವನ ಯೋಗ್ಯತೆ-ಅಯೋಗ್ಯತೆಗಳನ್ನು ಅವನ ಕಣ್ಣ ಮುಂದೆಯೇ ತಂದು ಕುಣಿಸಿ, ಅವನ ಲೋಪ ದೋಷಗಳನ್ನು ತಿದ್ದುವ ಹಾಸ್ಯ! ನಗು ಎಂದರೇನು, ಹೇಗಿರುತ್ತದೆ, ಹೇಗೆ ನಗಬೇಕು ಎಂಬುದನ್ನು ಈ ಜಗತ್ತು ಕಲಿತದ್ದೇ ಅವನಿಂದ ಎನ್ನಿಸುತ್ತದೆ.

'ದಿ ಕಿಡ್'ನಲ್ಲಿ ಮಗುವಿನ ಪಾತ್ರ ಮಾಡಿದ ಜಾಕಿ ಕೂಗನ್, ಒಂದು ಕಡೆಯಿಂದ ಕಲ್ಲು ಬೀರಿ ಕಿಟಕಿಯ ಗಾಜುಗಳನ್ನೊಡೆದು ಓಡಿ ಕಣ್ಮರೆಯಾದರೆ, ಸ್ವಲ್ಪ ಸಮಯದ ನಂತರ ಮತ್ತೊಂದೆಡೆಯಿಂದ ಚಾರ್ಲಿ 'ಒಡೆದ ಗ್ಲಾಸುಗಳನ್ನು ಕೂಡಿಸುವವ' ಎಂದು ಕೂಗಿಕೊಂಡು ಬರುವ ಸನ್ನಿವೇಶ ನೋಡಿ ಅದೆಷ್ಟು ಜನ ನಕ್ಕು ನಲಿದರೋ! ಮಗು ಗಾಜು ಒಡೆದು ಗಿರಾಕಿ ಸಂಪಾದಿಸಿಕೊಟ್ಟರೆ ಅದರ ಪಾಲಕ ಚಾರ್ಲಿಗೆ ಅಂದಿನ ದಿನದ ಅನ್ನ ಸಂಪಾದನೆ.

ಇನ್ನೊಂದು ಪ್ರಹಸನದಲ್ಲಿ ಅವನ ಟ್ರಾಂಪ್‌ಗೆ ಯಾರ್‍ಯಾರೋ ಸೇದಿ ಬಿಸಾಡಿದ ಸಿಗರೇಟು ತುಂಡುಗಳನ್ನಾಯುವ ಕೆಲಸ. ಅವುಗಳಲ್ಲೇ ದೊಡ್ಡದಾದ್ದನ್ನು ಹುಡುಕಿ ತೆಗೆದು ಅದನ್ನು ಸೇದುವ ಚಾರ್ಲಿಯನ್ನು ಸಿಗರೇಟು ಪ್ಯಾಕಿನಲ್ಲಿ ಬೀಡಿ ಇಟ್ಟುಕೊಂಡು ದೌಲತ್ತು ಮಾಡುವ ಜನ ಕೂಡ ನೋಡಿ ನಕ್ಕಿದ್ದಾರು!

ಮತ್ತೊಂದರಲ್ಲಿ ಜಗಳವಾಡುತ್ತಿರುವ ಗಂಡ ಹೆಂಡತಿಯರ ನಡುವೆ ಈ 'ಟ್ರಾಂಪ್' ಸಿಕ್ಕುಹಾಕಿಕೊಂಡು ಅವರಿಗೆ ಜಗಳ ನಿಲ್ಲಿಸುವ ಬದಲು ಹೊಡೆದಾಡಲು ಬೇಕಾಗುವ ಸೌಟು, ಮಗುಚು ಕೈ, ಲೋಟ, ತಟ್ಟೆ, ಚಾಕು-ಚೂರಿ, ಮಚ್ಚು-ಕೊಡಲಿಗಳನ್ನು ಸರದಿ ಮೇಲೆ ಸಪ್ಲೈ ಮಾಡುವ ದೃಶ್ಯವಿದೆ.

'ಮಾರ್ಡರ್ನ್ ಟೈಮ್ಸ್' ಎಂಬ ತೀರ ಈಚಿನ ಚಿತ್ರದಲ್ಲಿ ಯಂತ್ರಕ್ಕೆ ದಾಸರಾಗಿ ಯಾಂತ್ರಿಕ ಜೀವನ ನಡೆಸಬಯಸುವ ಅಮೆರಿಕನ್ನರ ಕುರಿತಾದ ಜೀವನ ದೃಷ್ಟಿಯ ಚಿತ್ರವಿದೆ. ಅದರಲ್ಲಿ ಲಂಚ್‌ಟೈಮ್‌ನಲ್ಲಿ ಯಂತ್ರದಿಂದ ಜೋಳ ತಿನ್ನಿಸಿ ಸೂಪ್ ಕುಡಿಸುವ ಚಿತ್ರ. ಅಷ್ಟು ಸಮಯವನ್ನೇ ಉಳಿಸಿ ಅದರಲ್ಲೂ ಕೆಲಸಗಾರರನ್ನು ದುಡಿಮೆಗೆ ಹಚ್ಚುವುದರ ಕುರಿತಾಗ ಭರ್ತ್ಸನೆ-ವ್ಯಂಗ್ಯಗಳಿವೆ. ಸೂಪ್ ಕುಡಿಸುವ ಯಂತ್ರಕ್ಕೆ ಕೆಲಸಗಾರ ಸರಿಯಾದ ವೇಳೆಗೆ ಬಾಯಿ ತೆರೆಯದಿದ್ದರೆ ಅದು ಕುತ್ತಿಗೆಯ ತೆರೆದ ಭಾಗದಿಂದ ಒಳಗೇ ಬೀಳುವ ಸನ್ನಿವೇಶ ನೋಡಿ ಪ್ರೇಕ್ಷಕರ ನಗುವೋ ನಗು.

'ಲೈಮ್‌ಲೈಟ್'ನಲ್ಲಿ ಅಂತ ಕಾಣುತ್ತೆ, ಕಾಲು ಊನ ಮಾಡಿಕೊಂಡು ಮತ್ತೆ ಎಂದೆಂದಿಗೂ ನರ್ತಿಸಲು ಬಾರದ ಓರ್ವ ಮಾಜಿ ನರ್ತಕಿ ರೋಗಿಯಾಗಿ ಹಾಸಿಗೆ ಹಿಡಿದಿದ್ದಾಳೆ. ಆಕೆಗೆ ಗುಣವಾಗದ ಒಂದು ಕಾಯಿಲೆ. ಹತಾಶೆ (ನಿರಾಶೆ) ಅಂತ ಅದರ ಹೆಸರು. ಡಾಕ್ಟರುಗಳೆಲ್ಲ ಅವಳ ಆಸೆ ಬಿಟ್ಟಿದ್ದಾರೆ. ಇಂತಹವಳನ್ನು ನೋಡಲು ಮಾಜಿ ನಿರ್ಮಾಪಕ, ನಿರ್ದೇಶಕ, ನಟ, ವಿದೂಷಕ ಚಕ್ರವರ್ತಿ ಕ್ಯಾಲ್ವೆರೊ (ಚಾರ್ಲಿ ಚಾಪ್ಲಿನ್) ಬಂದಿದ್ದಾನೆ. ಅವರವರಿಗೆ ಏನೋ ಮಾತುಕತೆ ನಡೆಯುತ್ತಿದ್ದಾಗ ಆಕೆಗೆ ವಿಪರೀತ ಕೆಮ್ಮು ಬಂದು ಚಾರ್ಲಿ ತಕ್ಷಣ ಎದ್ದು ಅವಳ ಔಷಧಿ ಸೀಸೆಯಿಂದ ಗ್ಲಾಸಿಗೆ ಔಷಧ ಸುರುವಿ ಜನ ಇನ್ನೇನು ಆಕೆಗೆ ಕೊಡುತ್ತಾನೆ ಎಂದು ಯೋಚಿಸುವಷ್ಟರಲ್ಲಿ ಅದನ್ನು ತಾನೇ ಕುಡಿದುಬಿಡುವ ಚಾರ್ಲಿಯನ್ನು ಪ್ರೇಕ್ಷಕರೆಲ್ಲ ನೋಡಿ ಸುಮ್ಮನಿರಲು ಸಾಧ್ಯವೆ? ಚಾರ್ಲಿಗೆ ಅದು 'ಶುಶ್ರೂಷೆಗಿಂತ ನಿವಾರಣೋಪಾಯ ಮುಖ್ಯ'

ಎಂಬ ಹಾಗೆ. ಇವು ಅವನ ಹಾಸ್ಯದ ಕೆಲವು ನಮೂನೆಗಳು.

★ ★ ★

'ಗೋಲ್ಡ್‌ರಷ್' ತುಂಬ ಹಿಂದಿನ ಒಂದು ಮೂಕಿ ಚಿತ್ರ. ಅವನಿಗೆ ಹೆಚ್ಚಿನ ಖ್ಯಾತಿ ದೊರಕಿಸಿಕೊಟ್ಟ ಚಿತ್ರ. 'ಇಂತಹ ಎಡೆ ನೆಲದಲ್ಲಿ ಬಂಗಾರ ದೊರೆಯುತ್ತದಂತೆ'- ಎಂಬ ಸುದ್ದಿ ಕಿವಿಗೆ ಬಿದ್ದರೆ ಸಾಲದೆ? ಅಲ್ಲಿಗೆ ಹೋಗುವ, ಭೂಮಿಯನ್ನು ಗುತ್ತಿಗೆಗೆ ಹಿಡಿಯುವವರಿಗೇನು ಕಡಿಮೆ! ಆದರೆ ಅಲ್ಲಿ ಜಮಾಯಿಸುವ ಜನಗಳಿಗೆಲ್ಲ ಊಟ ತಿಂಡಿ? ಜನ ಸತ್ತು ಹೋಗುತ್ತಾರೆ. ಜೀವ ಉಳಿಸಿಕೊಳ್ಳುವುದಕ್ಕಾಗಿ 'ಟ್ರಾಂಪ್'ನಂತಹವರು ತಮ್ಮ ಬೂಟು, ಬೂಟಿನ ಉದ್ದ ಲೇಸ್‌ಗಳನ್ನೇ ಬೇಯಿಸಿ ಅದನ್ನು 'ಸ್ಪಾಗೆಟಿ'ಯಂತೆ ತಿನ್ನುವ ಚಿತ್ರ ಅದರಲ್ಲಿದೆ. ಬಂಗಾರ ಬೇಕಾದಷ್ಟಿದೆ! ಹೊಟ್ಟೆಗೆ ಹಿಟ್ಟೇ ಇಲ್ಲ ಇಲ್ಲಿ! ಅಮೆರಿಕದವರ ಬಂಗಾರದ ದಾಹ ವ್ಯಾಮೋಹಗಳಿಗೆ ಇದೊಂದು ಚಾಟಿ ಏಟು! ಚಾರ್ಲಿ ತನ್ನ ಬಾಲ್ಯದಲ್ಲಿ ಲಂಡನ್ನಿನ ಕೊರೆವ ಚಳಿಯಲ್ಲಿ ರಸ್ತೆರಸ್ತೆಗಳಲ್ಲಿ ಮಲಗಿ ಪೊಲೀಸರ ಕೈಗೆ ಸಿಕ್ಕಿ ಪಾಡುಪಟ್ಟದ್ದು, ಒಂದು ಹೊತ್ತಿನ ಊಟಕ್ಕೆ ಕೂಡ ಗತಿ ಇಲ್ಲದೆ ಗೋಳಾಡಿದ್ದು ಇವೆಲ್ಲ ಶಾಶ್ವತವಾಗಿ ಅವನ ಮನಸ್ಸಿನ ಮೇಲೆ ಅಚ್ಚು ಮೂಡಿ ಅವೆಲ್ಲ ಈಗ ಅಭಿವ್ಯಕ್ತಿಗೊಂಡಿತೋ ಏನೋ? ಈ ಚಿತ್ರ ಒಂದು ಅಸದೃಶ ಚಿತ್ರ. ಜನ ಇದನ್ನು ನೋಡಿ ನಕ್ಕಷ್ಟೇ ಅತ್ತೂಬಿಟ್ಟಿರಬೇಕು.



ಇಂತಹ ಇನ್ನೊಂದು ಚಿತ್ರ 'ದಿ ಫ್ಲವರ್ ಗರ್ಲ್'. ಹೂ ಮಾರುವ ಆ ಹುಡುಗಿ ಎಷ್ಟು ರೂಪಸಿಯಾದರೇನು! ಅವಳು ಕುರುಡಿ. ಚಾರ್ಲಿಗೆ ಮೊದಲು ಅವಳ ಮೇಲೆ ಅನುಕಂಪ-ಕನಿಕರಗಳು. ಆ ಕನಿಕರ ಒಲವಿನ ಕೆಳಮೆಟ್ಟಿಲು ಮಾತ್ರ! ಆಕೆಯನ್ನು ಪ್ರೀತಿಸಿದರೂ ಅವಳ ಮುಂದೆ ಹೇಳಲಾರ. ಆಕೆಗೆ ಇವನ ದನಿಯ ಪರಿಚಯವಿದೆ ಅಷ್ಟೆ! ಅವಳಿಗಾಗಿ ಓರ್ವ ಹುಚ್ಚ ಶ್ರೀಮಂತನಿಂದ ಹಣ ತಂದು ಅವಳ ಕಣ್ಣು ಆಪರೇಶನ್ ಮಾಡಿಸುತ್ತಾನೆ. ಆದರೆ ಪಟ್ಟಿ ಬಿಚ್ಚುವ ದಿನ ಅವನು ಅವಳ ಮುಂದಿಲ್ಲ. ಅವನಿರುವುದು ಜೈಲಲ್ಲಿ. ಕಾರಣ ಆ ಶ್ರೀಮಂತ ಹಣ ಕದ್ದ ಆಪಾದನೆ ಮಾಡಿ ಅವನನ್ನು ಹಿಡಿಸಿ ಜೈಲಿಗೆ ಹಾಕಿಸುತ್ತಾನೆ.

ಅವಳಿಗೆ ಕಣ್ಣೇನೋ ಹಿಂದಕ್ಕೆ ಬರುತ್ತವೆ. ಆದರೆ ಅವನೇ ಇಲ್ಲ. ಅವನು ಶಿಕ್ಷೆಯ ಅವಧಿ ಮುಗಿಸಿ ಹೊರಬಂದರೆ ಅವಳೇ ಇಲ್ಲ. ಅವಳ ಹುಡುಕಾಟದಲ್ಲಿ ಎಷ್ಟೋ ದಿನಗಳ ನಂತರ ಅವಳ ದರ್ಶನ. ಅವನ ಉಡುಪು, ವೇಷ ಅವಳ ತಾಯಿಗೆ ಅಸಹ್ಯ! ಕನಿಕರವಲ್ಲ, ತಿರಸ್ಕಾರ. ಆದರೆ ಅವಳಿಗೆ ಬರೀ ಅನುಕಂಪ. ಕೊನೆಗೆ ಅವಳ ಬಳಿ ಇದ್ದ ಹೂ ಕೊಳ್ಳಲು ಬಂದಾಗ ಅವನ ಸ್ಪರ್ಶದಿಂದ ಅವಳಿಗೆ ಅವನಾರು ಎಂಬುದು ತಿಳಿಯುತ್ತದೆ. ಆ ದೃಶ್ಯ- ಆ ಸನ್ನಿವೇಶ ನೋಡಬೇಕು. ಅದೆಂತಹ ಹೃದಯ ಸ್ಪರ್ಶಿ ದೃಶ್ಯ! ತನ್ನ ಬಾಳಿನುದ್ದಕ್ಕೂ ಚಾರ್ಲಿ ಅರಸಿದ್ದುದು ಅಂತಹ ಪ್ರೇಮವನ್ನೇ!

ಇಂತಹ ಚಿತ್ರಗಳೂ ಸನ್ನಿವೇಶಗಳೂ ಲೆಕ್ಕಕ್ಕಿಲ್ಲ. ಅವನ ಚಿತ್ರಗಳ ತುಂಬ ಬರೀ ಪೊಲೀಸು, ಕೋರ್ಟು, ಜೈಲು ಇವೇ. ಅವುಗಳ ನಡುವೆ ಇಂತಹ ಕೆಲವು ನೋವು, ದುಃಖ, ಸಂಕಟಗಳೇ ಅವನ ಚಿತ್ರಗಳ ಅಡಿಯ ಮೂಲದ್ರವ್ಯ. ಅದರ ಮೇಲಣ ಲೇಪ ಮಾತ್ರ ಹಾಸ್ಯದ್ದು ಅಷ್ಟೇ. ಸಂಸ್ಕಾರವಂತ ಪ್ರೇಕ್ಷಕರು ಇದನ್ನರಿತು ಕಣ್ಣೀರು ಮಿಡಿಯದಿರಲಾರರು.

ಅವನನ್ನು ಅನುಸರಿಸದವರಿಲ್ಲ. ಅನುಕರಿಸ ಹೋದವರು ಲೆಕ್ಕವಿಲ್ಲ. ಡಬ್ಬಿಂಗ್ ಮಾಡುವ, ಸನ್ನಿವೇಶಗಳನ್ನೂ, ಚಿತ್ರ-ಚಿತ್ರವನ್ನೇ ಕದ್ದು ಚಿತ್ರ ಮಾಡುವ ಕಿರೀಟ ಹರಣ ನಿಪುಣರಿಗೇನೂ ಕಡಿಮೆ ಇಲ್ಲ. ಅದೇ ಹೆಸರಿನ ಓರ್ವ ಮುಸ್ಲಿಂ ನಟ ಮುಂಬೈಯಲ್ಲಿ ರಣಜಿತ್ ಸಂಸ್ಥೆಯಲ್ಲಿದ್ದ. 'ಫ್ಲವರ್ ಗರ್ಲ್' ಚಿತ್ರದ ಸನ್ನಿವೇಶಗಳನ್ನು ನಾಚಿಕೆ-ಹೇಸಿಕೆಗಳಿಲ್ಲದೆ ಕದ್ದು ಅದನ್ನೇ ಲೆಕ್ಕವಿಲ್ಲದಷ್ಟು ಬಾರಿ ಚಿತ್ರ ಮಾಡಿದ. 'ದಿ ಕಿಡ್', 'ದಿ ಫ್ಲವರ್ ಗರ್ಲ್' ಚಿತ್ರದ ಸನ್ನಿವೇಶಗಳು 'ಬೇಟಿ', 'ಡೋಲಿ'ಗಳಲ್ಲಿವೆ. 'ಶ್ರೀ೪೨೦', 'ಅನಾಡಿ', 'ಜಾಗ್‌ತೇ ರಹೋ' ಚಿತ್ರಗಳ ತುಂಬೆಲ್ಲ ಚಾರ್ಲಿಯ ಅನುಕರಣೆಯೋ ಅನುಕರಣೆ. ಕನ್ನಡ ಚಿತ್ರವೊಂದರಲ್ಲಿ ಕೂಡ ಮೇಲೆ ವಿವರಿಸಿದ ದೃಶ್ಯದ ಅನುಕರಣೆ ಇದೆ. ಸ್ವಯಂ ಹಿಟ್ಲರ್‌ನೇ ಚಾರ್ಲಿಯ ಮೀಸೆ ಕದ್ದು ಕಾಪಿ ಮಾಡಿದ್ದ!

ಹೀಗೆ ಚಿತ್ರಜಗತ್ತಿಗೇ ವಿದೂಷಕ ಚಕ್ರವರ್ತಿಯಾಗಿ ಮೆರೆದ ಚಾರ್ಲಿಯ ಆಂತರಿಕ ಜೀವನ ಎಂದೂ ಸುಖವಾಗಿರಲಿಲ್ಲ. ಅವನೊಬ್ಬ ತೀರ ದುಃಖಿ ಎಂದರೆ ಯಾರೂ ನಂಬದ ಮಾತು. ಓರ್ವ ವಿಮರ್ಶಕ ಅವನನ್ನು ಕುರಿತು, 'a destitute person shown in the perspective of the wealthy' ಎಂದು ಬರೆದಿರುವ ಮಾತು ಅಕ್ಷರಶಃ ನಿಜ. ಸುಂದರ ಅನುಭವಗಳನ್ನು ಅಚ್ಚೊತ್ತಿಕೊಂಡು ನಗುವ ಕಾಲದಲ್ಲಿ ಅನುಭವಿಸಬೇಕಾಗಿ ಬಂದ ಬಡತನ, ನಿರಾಶೆ, ಹತಾಶೆಗಳು, ನಂಬಿ ಮೋಸ ಹೋದ ಭ್ರಮೆಗಳು, ಎಲ್ಲಕ್ಕೂ ಮೀರಿ ಅನುಭವಿಸಿದ ಪ್ರಣಯಭಂಗ ಇವೆಲ್ಲ ಬೇರೆ ಯಾರಿಗಾದರೂ ಸಂಭವಿಸಿದ್ದಿದ್ದರೆ ಅವರು ಕಾಯಂ ಆಗಿ ಹುಚ್ಚಾಸ್ಪತ್ರೆಯಲ್ಲೇ ಇದ್ದುಬಿಡುತ್ತಿದ್ದರು. ಆದರೆ ಅವನು ಅವುಗಳಿಂದ ತನಗೆ ಏನೂ ಆಗಿಯೇ ಇಲ್ಲವೆಂಬಂತೆ ತನ್ನ ಅಭಿನಯ, ಚಿತ್ರ ತಯಾರಿಕೆಗಳಲ್ಲಿ ಮುಳುಗಿಹೋಗಿ ಮಗ್ನತೆ, ಏಕಾಗ್ರತೆ ಸಾಧಿಸಿದ. 'ಎ ಕಿಂಗ್ ಇನ್ ನ್ಯೂಯಾರ್ಕ್', 'ಮಾಸ್ಟರ್ ವೀಡೋ', 'ದಿ ಗ್ರೇಟ್ ಡಿಕ್ಟೇಟರ್' ಮೊದಲಾದವುಗಳನ್ನು ತಯಾರಿಸಿದ್ದು ಈ ಕಾಲದಲ್ಲಿಯೇ. 'ದಿ ಗ್ರೇಟ್ ಡಿಕ್ಟೇಟರ್'ನಲ್ಲಿ ಹಿಟ್ಲರ್‌ನ ಕುಕೃತ್ಯಗಳ ಅಣಕವಿದ್ದರೆ 'ಲೈಮ್‌ಲೈಟ್'ನಲ್ಲಿ ಸೊಳ್ಳೆಗಳಿಂದ 'ತ್ರೀ ರಿಂಗ್ ಸರ್ಕಸ್' ಮಾಡಿಸಿರುವ ಚಿತ್ರಣ ಮತ್ತು ಆತ್ಮಕಥೆಯ ಚಿತ್ರಣದ ತುಣುಕುಗಳಿವೆ.

ಅದೇನು ಅವನ ದೌರ್ಭಾಗ್ಯವೋ! 'ಮಾನ್ಸ್ಯರ್ ವೀಡೋ'ನಲ್ಲಿ ಅವನಾಡಿದ ಹಲವು ಮಾತುಗಳು

ತಮ್ಮನ್ನು ಟೀಕಿಸಿ ಕಮ್ಯುನಿಸಂಅನ್ನು ಎತ್ತಿಹಿಡಿದ ಹಾಗೆ ಕೆಲವು ಅಮೆರಿಕನ್ನರಿಗೆ ಭಾಸವಾಯಿತು. ರಾಜಕಾರಣಿಗಳು, ದುಷ್ಟರು, ದಡ್ಡರು, ಧಬಕರು ಎಲ್ಲ ಸೇರಿ ಈ ಅಪರಾಧವನ್ನು ಸೃಷ್ಟಿಸಿ ಅವನ ಮೇಲೆ ಹಾಕಿದರು. "ನಾನು ಕಮ್ಯುನಿಸ್ಟ್ ಅಲ್ಲ, ಕಮ್ಯುನಿಸಂನಲ್ಲಿ ನನಗೆ ನಂಬಿಕೆ ಇಲ್ಲ," ಎಂದು ಚಾರ್ಲಿ ಮಾಡಿದ ಪ್ರಾರ್ಥನೆ, ಘೋಷಣೆಗಳೆಲ್ಲ ವ್ಯರ್ಥವಾದವು. ಯಾವ ಅಮೆರಿಕ ಅವನೆಂದರೆ ಹುಚ್ಚೆದ್ದು ಕುಣಿಯುತ್ತಿತ್ತೊ, ಯಾವ ರಾಷ್ಟ್ರ ಅವನಿಗೆ ಆಶ್ರಯ ನೀಡಿ ಅವನನ್ನು ಜಗದ್ವಿಖ್ಯಾತನನ್ನಾಗಿ ಮಾಡಿತೋ, ಅದೇ ಅಮೆರಿಕ ಅವನನ್ನು ಆಪಾದಿತನನ್ನಾಗಿ ಮಾಡಿದಾಗ ಕೋಟ್ಯಂತರ ಡಾಲರ್ ವಿನಿಯೋಗಿಸಿ ಕಟ್ಟಿದ ಸ್ಟುಡಿಯೋ ಕಟ್ಟಡ, ಆಸ್ತಿಪಾಸ್ತಿಗಳನ್ನೆಲ್ಲ ಇದ್ದದ್ದು ಇದ್ದಂತೆಯೇ ಬಿಟ್ಟು ಚಾರ್ಲಿ ದೇಶಭ್ರಷ್ಟನಾಗಬೇಕಾಯಿತು. ಮುಂದವನು ಯುರೋಪಿಗೆ ಬಂದು ಸ್ವಿಟ್ಸರ್ಲೆಂಡಿನ 'ವೇವಿ' ಎಂಬಲ್ಲಿ ನೆಲೆಸಿ ಮನೆ-ಸ್ಟುಡಿಯೋಗಳನ್ನು ಕಟ್ಟಿ ಮತ್ತೆ ಚಿತ್ರ ನಿರ್ಮಾಣ ಆರಂಭಿಸಿದ.

ಅವನ ಜೀವನ ಒಂದು ವಿರೋಧಾಭಾಸಗಳ ಕಂತೆ. ಬಹುಶಃ ದೊಡ್ಡವರೆನಿಸಿಕೊಂಡವರಿಗೆಲ್ಲ ಇದೇ ಕಾಯಿಲೆಯೋ ಏನೋ! ಸರ್ವಾಧಿಕಾರಿಗಳ ವಿರುದ್ಧ ಕೆಂಡ ಕಾರುತ್ತಿದ್ದ ಇವ ಪ್ರಜಾಪ್ರಭುತ್ವವಾದಿಗಳನ್ನೊದ್ದು ಒಣ ಹಾಕುತ್ತಿದ್ದ. 'ಲೈಮ್‌ಲೈಟ್'ನ್ನು ಬಯಸಿದರೂ ಪ್ರಚಾರದಿಂದ ದೂರ. ಅರಮನೆಯಂತಹ ಭವ್ಯ ಭವನದಲ್ಲಿ ವಾಸಿಸುತ್ತಿದ್ದರೂ ಅವನ ಚಿತ್ರಗಳೆಲ್ಲ ಝೋಪಡಿ ನಿವಾಸಿಗಳನ್ನು ಕುರಿತದ್ದೇ! ಕಮ್ಯುನಿಸಂ ಕಂಡರೆ ದ್ವೇಷ! ಆದರೆ ಅದರ ಧ್ಯೇಯ-ಧೋರಣೆಗಳ ಬಗೆಗೆ ಅನುಕಂಪ! ಮನದ ತುಂಬ ರಾಜಕೀಯ. ಆದರೆ ಅಧಿಕಾರಕ್ಕೆ ಎಂದೂ ಆಸೆಪಟ್ಟವನಲ್ಲ. ಟಾಕಿಗಳ ಕುರಿತು ಅಭಿಮಾನ ತಳೆದರೂ ತಾನು ಮಾತ್ರ ಮೂಕಿಯಲ್ಲೇ ಉಳಿದವನು. ಈ ರೀತಿ ಒಂದಕ್ಕೊಂದು ಸಂಬಂಧವಿಲ್ಲದ ಘಟನೆಗಳೇ.

ಕಾಲ ಹೀಗೇ ಇದ್ದೀತೆ? ಯಾವ ಅಮೆರಿಕ ಅವನನ್ನು ದೇಶಭ್ರಷ್ಟನನ್ನಾಗಿ ಮಾಡಿತೋ ಅದೇ ರಾಷ್ಟ್ರ ಮುಂದೆ ೨೧ ವರ್ಷಗಳ ನಂತರ (೧೯೭೫ರಲ್ಲಿ) ಅವನನ್ನು ಪುನಃ ತನ್ನಲ್ಲಿಗೆ ವೈಭವದಿಂದ ಬರಮಾಡಿಕೊಂಡು ಅತ್ಯಂತ ಪ್ರತಿಷ್ಠಿತ 'ಆಸ್ಕರ್' ಪ್ರಶಸ್ತಿಯನ್ನು ಅವನಿಗೆ ನೀಡಿ ಗೌರವಿಸಿದ್ದಲ್ಲದೆ ಅವನೊಬ್ಬ ಅತ್ಯುತ್ತಮ ನಟ ಎಂದು ಒಪ್ಪಿಕೊಂಡಿತು. ಈ ವಿಷಯದಲ್ಲಿ ಅವನ ತಾಯ್ನಾಡೂ ಹಿಂದೆ ಬೀಳಲಿಲ್ಲ. ಇಂಗ್ಲೆಂಡಿನ ಮಹಾರಾಣಿ ಎರಡನೆ ಎಲಿಜಬೆತ್‌ಳೂ ಅದೇ ವರ್ಷ ಅವನಿಗೆ 'ನೈಟ್‌ಹುಡ್' ನೀಡಿ ಗೌರವಿಸಿದಳು. ಚಾರ್ಲಿ ಚಾಪ್ಲಿನ್ ಅಂದಿನಿಂದ ಸರ್ ಸ್ಪೆನ್ಸರ್ ಚಾರ್ಲಿಯೆನಿಸಿದ.

ಅವನೋರ್ವ ಉಜ್ವಲ ತಾರೆ. ಅವನ ತಾರಾ ಮೌಲ್ಯ ಅಯಸ್ಕಾಂತ ಶಕ್ತಿಗೆ ಸಮನಾದದ್ದು. ಅವನ ವ್ಯಕ್ತಿತ್ವ ಪಾದರಸದಂತಹುದು. ಅದರ ವ್ಯಾಖ್ಯೆ ಅವರ್ಣನೀಯ. ತನ್ನನ್ನಾಶ್ರಯಿಸಿದ ಕಲೆಯಿಂದ ಅವನೆಂದಿಗೂ ಉಬ್ಬಿ ಉರಿದು ಹೋಗಲಿಲ್ಲ. ಕೀರ್ತಿಶನಿ ಅವನ ಬೆನ್ನಿಗಂಟಲಿಲ್ಲ. ಬಿಂದಾಸ್-ಬಿಕನಾಸಿತನಗಳು ಅವನನ್ನು ದೂರದಿಂದಲೇ ನೋಡಿ ಎಲ್ಲೋ ದೇಶಾಂತರ ಹೋಗಿಬಿಟ್ಟವು. ಅವನೊಮ್ಮೆಯಾದರೂ ಹೊಟ್ಟೆಕಿಚ್ಚಿಗೆ ಒಳಗಾಗಲಿಲ್ಲ. ಕ್ರೋಧಿಯಾಗಲಿಲ್ಲ. ಕೆಟ್ಟು ಹೋಗಲಿಲ್ಲ. ಸಮಾಜ ಕಂಟಕನಾಗಲಿಲ್ಲ. ಹಣ-ಹೆಸರುಗಳು ಎಂದಿಗೂ ಅವನ ತಲೆ ತಿರುಗಿಸಲಿಲ್ಲ!

ಇಂತಹ ಅಸಾಮಾನ್ಯ ವ್ಯಕ್ತಿತ್ವದ ಚಾರ್ಲಿ ಎಂಬತ್ತೆಂಟು ವರ್ಷಗಳ ತುಂಬು ಜೀವನ ನಡೆಸಿ ೧೯೭೭ರ ಡಿಸೆಂಬರ್ ೨೫ರಂದು ಕ್ರಿಸ್‌ಮಸ್ ವರ್ಷದ ಪ್ರಥಮ ದಿನದಂದು ಕಣ್ಮುಚ್ಚಿದ. ಬದುಕಿದ್ದಾಗ ಹೆಸರು ಮಾಡಿದ ಚಾರ್ಲಿ ಗತಿಸಿದ ಮೇಲೂ ಸುದ್ದಿಯಾಗುವುದು ತಪ್ಪಲಿಲ್ಲ! ಆ ಬೆಳ್ಳಿಯ ಶವಸಂಪುಟ- ಅವನ ಶವ ಸಹಿತ ಕಳುವಾಯಿತು. ಎಷ್ಟೋ ದಿನಗಳ ಮೇಲೆ ಪುನಃ ಸಿಕ್ಕಿತು ಅನ್ನಿ!

ಈ ರೀತಿ ನಗುವ ನಗಿಸುತ ನಗಿಸಿ ನಗುತ ಬಾಳುವ ರೀತಿಯನ್ನು ಜಗತ್ತಿಗೇ ತೋರಿಸಿದ ಈ ಮಂಕುತಿಮ್ಮ. ಮತ್ತೆ ಅವನ ಅಪರಾವತಾರ ಟ್ರಾಂಪ್‌ಗೆ "ಇನ್ನೊಮ್ಮೆ ಹುಟ್ಟಿ ಬಾ" ಎಂದು ಮನಃಪೂರ್ತಿಯಾಗಿ ಕೇಳಿಕೊಳ್ಳುವುದರ ವಿನಾ ಬೇರೇನು ಮಾಡಲು ಸಾಧ್ಯ?

ಅವನ ವಿಷಯದಲ್ಲಿ ಇಂಥವ ಮತ್ತೊಬ್ಬ ಬರುವುದು ಮತ್ತೆಂದು? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುವ ಸಂಭವ ಹೆಚ್ಚು. ●

# ಸಂತೃಪ್ತ

ಮೂಲ:
**ಸಾಮರ್‌ಸೆಟ್ ಮಾಮ್**
**('ದಿ ಹ್ಯಾಪಿ ಮ್ಯಾನ್')**
ಕನ್ನಡಕ್ಕೆ:
**ಎಚ್.ಆರ್. ಚಂದ್ರವದನರಾವ್**

ಮತ್ತೊಬ್ಬರಿಗೆ ಅವರ ಜೀವನಪಥವನ್ನು ತೋರಿಸುವ ಸಲುವಾಗಿ ಮುನ್ನುಗ್ಗುವುದು ನಿಜಕ್ಕೂ ಅಪಾಯಕರ. ಆದರೆ ಕೆಲವು ರಾಜಕಾರಣಿಗಳು, ಸಮಾಜಸುಧಾರಕರು ತುಂಬು ಆತ್ಮವಿಶ್ವಾಸವಿಟ್ಟು ತಮ್ಮ ಜನರ ಆಗುಹೋಗುಗಳಲ್ಲಿ, ಅವರ ನಿತ್ಯ ಜೀವನದಲ್ಲಿ ತಲೆ ಹಾಕುವುದನ್ನು ಕಂಡರೆ ನನಗೆ ಆಶ್ಚರ್ಯ. ಇನ್ನೊಬ್ಬರಿಗೆ ಬುದ್ಧಿ ಹೇಳು ಎಂದರೆ ನನಗೆ ನಾಚಿಕೆ ಸುತ್ತಿಕೊಳ್ಳುತ್ತದೆ. ಇಷ್ಟಕ್ಕೂ ಇನ್ನೊಬ್ಬರ ಬಗ್ಗೆ ನಮಗೇನು ಗೊತ್ತಿರುತ್ತದೆ? ಪ್ರತಿಯೊಬ್ಬನೂ ತಾನೇ ಸೃಷ್ಟಿಸಿಕೊಂಡಿರುವ ಏಕಾಂತ ಗೋಪುರದಲ್ಲಿರುವ ಕೈದಿ. ಹೀಗಿರುವಾಗ, ಇನ್ನೊಬ್ಬ ಕೈದಿಯೊಡನೆ ವ್ಯವಹರಿಸಿ ತಿಳಿದುಕೊಳ್ಳುವುದು ಎಷ್ಟು ಸಾಧ್ಯ? ಇಷ್ಟಕ್ಕೂ ನಮ್ಮ ಬಗ್ಗೆಯೇ ನಮಗೆಷ್ಟು ಗೊತ್ತು? ಹೀಗಿರುವಾಗ 'ನೀನು ಇಂತಹ ಜೀವನವನ್ನು ನಡೆಸಬೇಕು' ಎಂದು ಹೇಳಲು ನಾವು ಎಷ್ಟರವರು? ಹಾಗೆ ನೋಡಿದರೆ ಜೀವನ ಒಂದು ಸಂಕಷ್ಟದ ವ್ಯವಹಾರ. ಆದುದರಿಂದ ನಾನು ಬೇರೆಯವರಿಗೆ, 'ನೀನು ಹೀಗೆ ಮಾಡಬೇಕು' ಎಂದು ಯಾವಾಗಲೂ ಹೇಳಿಲ್ಲ. ಆದರೆ ಕೆಲವರಿಗೆ ಅವರ ಜೀವನಪಥದ ಆರಂಭದಲ್ಲಿ ಗಲಿಬಿಲಿಯಾಗಿ ಅವರು ನನ್ನನ್ನು, 'ಏನು ಮಾಡಲಿ?' ಎಂದು ಕೇಳಿದ್ದುಂಟು. ಆಗ ನಾನು ನಿರ್ವಾಹವಿಲ್ಲದೆ ಹಣೆಬರಹದ ಕಪ್ಪು ಉಡುಗೆ ತೊಟ್ಟು ಅವರಿಗೆ ಉಪದೇಶ ಕೊಟ್ಟದ್ದೇನೆ.

ಆಗ ನಾನಿನ್ನೂ ಚಿಕ್ಕವನು. ಲಂಡನ್ ಬಳಿಯ ವಿಕ್ಟೋರಿಯಾ ಸ್ಟೇಶನ್ನಿನಲ್ಲಿ ಸಣ್ಣದೊಂದು ಅಪಾರ್ಟ್‌ಮೆಂಟಿನಲ್ಲಿದ್ದೆ. ಒಂದು ಮದ್ಯಾಹ್ನ ನಾನೊಬ್ಬನೇ ಮನೆಯಲ್ಲಿರುವಾಗ, ಕರೆಗಂಟೆಯ ಶಬ್ದವಾಯಿತು. ಹೋಗಿ ಬಾಗಿಲು ತೆರೆದೆ. ಯಾರೋ ಒಬ್ಬ ಅಪರಿಚಿತ ನಿಂತಿದ್ದರು. ಅವರಿಗೆ ನನ್ನ ಹೆಸರನ್ನು ಹೇಳುತ್ತಾ 'ಒಳಗೆಬನ್ನಿ' ಎಂದು ಸ್ವಾಗತಿಸಿದೆ.

ಒಳಗೆ ಬಂದ ಅವರು ತುಂಬಾ ಗಲಿಬಿಲಿಗೊಂಡವರಂತೆ ಕಾಣುತ್ತಿದ್ದರು. ಸಿಗರೇಟೊಂದನ್ನು ಕೊಟ್ಟೆ. ಅವರು ಅದನ್ನು ಹೊತ್ತಿಸಿಕೊಂಡ ಮೇಲೆ ಕುರ್ಚಿಯಲ್ಲಿ ಕುಳಿತುಕೊಂಡರು. ಅನಂತರ "ಹೀಗೆ ಪೂರ್ವಾನುಮತಿ ಇಲ್ಲದೆ ದಿಢೀರನೆ ಭೇಟಿಯಾಗುತ್ತಿರುವುದರಿಂದ ಬೇಜಾರಿಲ್ಲ ತಾನೆ? ನನ್ನ ಹೆಸರು ಸ್ಟೀಫನ್ಸ್, ನಾನೊಬ್ಬ ವೈದ್ಯ. ತಾವೂ ವೈದ್ಯರಲ್ಲವೇ" ಎಂದ ಆಗಂತುಕ.

"ಹೌದು. ಆದರೆ ಈಗ "ಪ್ರ್ಯಾಕ್ಟೀಸು ಮಾಡುತ್ತಿಲ್ಲ."

"ಗೊತ್ತು ಬಿಡಿ. ನೀವು ಸ್ಪೇನ್ ಮೇಲೆ ಬರೆದ ಪುಸ್ತಕ ಓದಿದೆ ಅದರ ಬಗ್ಗೆ ಮಾತನಾಡೋಣ ಎಂದು ಬಂದೆ."

"ಆದರೆ ಅದೇನೂ ಅಷ್ಟು ಹೇಳಿಕೊಳ್ಳುವಂತಹ

"ಗೆಳೆಯಾ,
ನಿನಗೆ ಹಣದ ಮೇಲೆ
ವ್ಯಾಮೋಹವಿಲ್ಲದಿದ್ದರೆ,
ಬಂದದ್ದರಲ್ಲಿಯೇ
ತೃಪ್ತಿಪಟ್ಟುಕೊಳ್ಳುವ
ಮನಸ್ಸಿದ್ದರೆ
ಖಂಡಿತ ಸ್ಪೇನಿಗೆ ಹೋಗು"
ಎಂಬ ಮಾತನ್ನಾತ ನೆನಪಿಸಿದ.

ಪುಸ್ತಕ ಅಲ್ಲವಲ್ಲಾ."

"ಸ್ಪೇನ್ ಬಗ್ಗೆ ಅದರಲ್ಲಿರುವುದೆಲ್ಲ ಸರಿ ತಾನೇ? ಆ ದೇಶದ ಬಗ್ಗೆ ಪರಿಚಯವಿರುವವರು ನನಗೆ ಯಾರೂ ಗೊತ್ತಿಲ್ಲ. ಹೀಗಾಗಿ ನಿಮ್ಮಿಂದ ಸ್ವಲ್ಪ ವಿಷಯ ಸಂಗ್ರಹಿಸೋಣ ಎಂದು ಬಂದೆ."

"ಓ, ಖಂಡಿತ."

ಆತ ಒಂದು ಗಳಿಗೆ ಸುಮ್ಮನಿದ್ದ. ಪಕ್ಕದಲ್ಲಿಟ್ಟ ಹ್ಯಾಟನ್ನು ತೆಗೆದು ತೊಡೆಯ ಮೇಲೆ ಇಟ್ಟು ಕೊಂಡು ಬೆರಳಿನಿಂದ ಹೊಡೆಯುತ್ತಾ, "ನಿಮಗೆ ಬೇಜಾರು ಆಗಬಹುದು, ನನ್ನ ವಿಷಯ ಕೇಳುವು ದಕ್ಕೆ, ಆದರೆ ನನ್ನ ಜೀವನವನ್ನೆಲ್ಲಾ ನಿಮ್ಮಲ್ಲಿ



ಹೇಳುತ್ತಿಲ್ಲ," ಎಂದ ಸ್ಟೀಫನ್ಸ್.

ಜನ ಹೀಗೆ ಅಂದರೆ ನನಗೆ ಗೊತ್ತು ಅವರು ತಮ್ಮ ವಿಷಯವನ್ನೆಲ್ಲಾ ಒದರಿ ಬಿಡುತ್ತಾರೆ ಎಂದು.

ಆತ ಹೇಳಿದ, "ನನ್ನನ್ನು ನನ್ನ ಇಬ್ಬರು ದೊಡ್ಡಮ್ಮಂದಿರು ಸಲಹಿದರು. ಆರು ವರ್ಷಗಳ ಕೆಳಗೆ ನಾನು ಮದುವೆಯಾದೆ. ಮಕ್ಕಳಿಲ್ಲ. ಕ್ಯಾಂಬರ್ ವೆಲ್‌ನಲ್ಲಿ ನಾನು ಮೆಡಿಕಲ್ ಆಫೀಸರ್. ಆದರೆ ನನಗೆ ಅಲ್ಲಿರಲು ಇಷ್ಟವಿಲ್ಲ."

ಆತನು ಆಡಿದ್ದು ಚಿಕ್ಕ ವಾಕ್ಯಗಳು. ಆದರೆ ಅವುಗಳಲ್ಲಿ ಒಂದು ವಿಧವಾದ ಶಕ್ತಿ ಮತ್ತು ಗಾಂಭೀರ್ಯವಿತ್ತು. ಅವನ ಕಡೆ ನಾನು ನೋಡಿದ್ದು ಒಂದೆರಡು ಬಾರಿಮಾತ್ರ. ಆತ ಸುಮಾರು ಮೂವತ್ತು ವರ್ಷ ಪ್ರಾಯದವ. ಗಟ್ಟಿಮುಟ್ಟಾದ ದೇಹ, ಗುಂಡು ಗುಂಡಾಗಿರುವ ಮುಖ ಕಣ್ಣುಗಳಲ್ಲಿ ತೇಜಸ್ಸು, ಕರೀ ಕೂದಲು. ಹಾಕಿಕೊಂಡಿದ್ದು ಬಣ್ಣಗೆಟ್ಟ ನೀಲಿ ಸೂಟು. ಶರಾಯಿ ಜೋಬು ತುಂಬಿದ್ದರಿಂದ ದಪ್ಪವಾಗಿತ್ತು; ಮೊಣಕಾಲಿನ ಬಳಿ ಚೀಲದಂತೆ ಊದಿತ್ತು.

"ಇನ್‌ಫರ್ಮರಿನಲ್ಲಿ ಕೆಲಸ ಅಂದರೆ ಏನು ಅಂತ ನಿಮಗೆ ಹೇಳಬೇಕಾಗಿಲ್ಲ. ಒಂದು ದಿನಕ್ಕೂ ಇನ್ನೊಂದು ದಿನಕ್ಕೂ ಏನು ವ್ಯತ್ಯಾಸವಿಲ್ಲ. ಇಂತಹ ಜಾಗದಲ್ಲಿ ಕೆಲಸ ಮಾಡಿದರೆ ಏನಾದರೂ ಪ್ರಯೋಜನವೆ?" ಎಂದ ಸ್ಟಿಫನ್ಸ್.

"ಜೀವನ ಹೊರೆಯುವುದಕ್ಕೆ ಒಂದು ಕೆಲಸ,"ಎಂದೆ ನಾನು.

"ಹೌದು ಪಗಾರವೂ ಪರವಾಗಿಲ್ಲ."

"ಹೇಳುತ್ತೇನೆ. ಸ್ಪೇನ್‌ನಲ್ಲಿ ಇಂಗ್ಲೀಷ್ ಡಾಕ್ಟರಿಗೆ ಏನಾದರೂ ಕೆಲಸ ಸಿಗಬಹುದೇ?"

"ಸ್ಪೇನಿಗೇ ಏಕೆ ಹೋಗಬೇಕು?"

"ಏಕೆಂದು ನಾನು ಹೇಳಲಾರೆ. ಹೋದರೆ ಅಲ್ಲಿಗೇ ಹೋಗಬೇಕೆಂದು ನನಗೆ ಅನ್ನಿಸ್ತಾ ಇದೆ."

"ಅದೇನು ಕಾರ್‌ಮೆನ್ (carmen) ತರಹ ಅಲ್ಲ, ಗೊತ್ತು ತಾನೇ?"

"ಆದರೆ ಸ್ಪೇನ್‌ನಲ್ಲಿ ಸೂರ್ಯರಶ್ಮಿಗೆ, ದ್ರಾಕ್ಷಾರಸಕ್ಕೆ, ಉಸಿರಾಡಲು ಪರಿಶುದ್ಧವಾದ ಹವೆಗೆ ಯಾವ ಕೊರತೆಯೂ ಇಲ್ಲ ತಾನೆ? ಸೆವಿಲ್‌ನಲ್ಲಿ ಒಬ್ಬನೂ ಇಂಗ್ಲೀಷ್ ವೈದ್ಯನಿಲ್ಲ ಎಂದೂ ಕೇಳಿದ್ದೇನೆ. ನಾನು ಅಲ್ಲಿಗೆ ಹೋದರೆ ಹೊಟ್ಟೆ ಹೊರೆಯುವುದಕ್ಕೆ ಆಗುತ್ತದೆಯೆ? ಕೈಯಲ್ಲಿರುವ ಒಳ್ಳೆಯ ಸಂಬಳ ಬರುವ ಕೆಲಸವನ್ನು ಬಿಟ್ಟು ಅಲ್ಲಿಗೆ ಹೋಗುವುದು ಸರಿ ಅನ್ನಿಸಬಹುದೇ?"

"ನಿಮ್ಮ ಪತ್ನಿ ಏನನ್ನುತ್ತಾರೆ?"

"ಅವಳಿಗೂ ಸ್ಪೇನ್ ಇಷ್ಟ."

"ಆದರೆ ಅಲ್ಲಿಗೆ ಹೋಗುವುದು ಒಂದು ರಿಸ್ಕ್..."

"ನೀವು 'ಹೋಗು' ಎಂದು ಧೈರ್ಯಕೊಟ್ಟರೆ ಹೋಗುತ್ತೇನೆ," ಎಂದು ಕಣ್ಣಲ್ಲಿ ಕಣ್ಣಿಟ್ಟು ಹೇಳಿದ ಸ್ಟೀಫನ್ಸ್.

ನಾನು ಒಂದು ಘಳಿಗೆ ಯೋಚನೆ ಮಾಡಿ ನಂತರ, "ಗೆಳೆಯಾ, ಇದು ನಿನ್ನ ಜೀವನಕ್ಕೆ ಸಂಬಂಧಪಟ್ಟ ವಿಷಯ. ಇಷ್ಟನ್ನು ಮಾತ್ರ ನಾನು ಹೇಳಬಲ್ಲೆ. ನಿನಗೆ ಹಣದ ಮೇಲೆ ವ್ಯಾಮೋಹ ಇಲ್ಲದಿದ್ದರೆ, ಹೊಟ್ಟೆ, ಬಟ್ಟೆಗೆ ಬಂದಿದ್ದರಲ್ಲಿಯೇ ತೃಪ್ತಿಗೊಳ್ಳುವ ಮನಸ್ಸುಳ್ಳವನಾದರೆ, ನೀನು ಖಂಡಿತ ಸ್ಪೇನಿಗೆ ಹೋಗು, ಖಂಡಿತ ಅಲ್ಲಿ ನಿನಗೆ ಜೀವನದಲ್ಲಿ ತೃಪ್ತಿ ಸಿಗುವುದು," ಎಂದೆ.

ಆತ ನಮಸ್ಕರಿಸಿ ಹೊರಟು ಹೋದ.

ಇದಾದ ಎರಡು ಮೂರು ದಿನಗಳಲ್ಲಿ ಅವನು ನನ್ನ ಮನಸ್ಸಿನಿಂದ ಅಳಿಸಿ ಹೋದ.

ಸುಮಾರು ಹದಿನೈದು ವರ್ಷಗಳು ಉರುಳಿದವು. ಹೀಗಿರುತ್ತ ಒಮ್ಮೆ ನಾನು ಅಕಾಸ್ಮಾತ್ತಾಗಿ ಸೆವಿಲ್‌ಗೆ ಹೋದೆ. ಹೊಟೇಲ್‌ನಲ್ಲಿ ತಂಗಿದ್ದ ನನಗೆ ಏಕೋ ಮುಜುಗರವಾಯಿತು. ಹೊಟೇಲಿನವನನ್ನು, "ಇಲ್ಲಿ ಯಾರಾದರೂ ಇಂಗ್ಲೀಷ್ ವೈದ್ಯರು ಇದ್ದಾರೆಯೆ?" ಎಂದು ಕೇಳಿದೆ. "ಒಬ್ಬರು ಇದ್ದಾರೆ" ಎಂದು ಅವನು ಹೇಳಿ, ಅವರ ಅಡ್ರೆಸ್ ತಂದು ಕೊಟ್ಟ. ಟ್ಯಾಕ್ಸಿ ಮಾಡಿಕೊಂಡು ಆ ವೈದ್ಯರ ಮನೆಗೆ ಬಂದೆ. ಒಬ್ಬ ಧಡೂತಿ ಮನುಷ್ಯ ಈಚೆಗೆ ಬಂದು ಸಂಕೋಚದಿಂದ, "ನನ್ನನ್ನು ಕಾಣಲು ಬಂದಿರಾ? ನಾನೊಬ್ಬ ಇಂಗ್ಲೀಷ್ ಡಾಕ್ಟರ್" ಅಂದ. ನನ್ನ ಅಸ್ವಸ್ಥತೆಯ ಬಗ್ಗೆ ಹೇಳಿದಾಗ ಒಳಗೆ ಕರೆದ. ಅದೊಂದು ಸಾಧಾರಣವಾದ ಮನೆ. ಅವನ 'ಸಲಹಾ ಕೊಠಡಿ'ಯಲ್ಲಿ ಕಾಗದ ಚೂರುಗಳು, ಪುಸ್ತಕಗಳು, ಔಷಧಿಗಳು. ಒಂದು ರೀತಿಯಲ್ಲಿ

ಅದೊಂದು 'ಲಂಬರ್ ರೂಮ್'ನಂತಿತ್ತು.

ನನ್ನನ್ನು ನೋಡಿದ ಮೇಲೆ "ಫೀಜು ಎಷ್ಟು?" ಎಂದು ಕೇಳಿದೆ.

ಆತ ತಲೆ ಅಲ್ಲಾಡಿಸಿ "ಏನೂ ಫೀಜು ಬೇಡ" ಅಂದ.

"ಏನು ಹಾಗೆಂದರೆ?"

"ನೀವು ಅಂದು ಹೇಳಿದ ಮಾತು ನನ್ನ ಜೀವನದ ಮಾರ್ಗವನ್ನೇ ಬದಲಾಯಿಸಿ ಬಿಟ್ಟಿತು."

"ಯಾವ ಮಾತು? ಯಾವಾಗ ಹೇಳಿದ್ದು?"

"ನಾನು ಸ್ಟಿಫನ್ಸ್, ಹದಿನೈದು ವರ್ಷಗಳ ಕೆಳಗೆ ನಿಮ್ಮಲ್ಲಿಗೆ ಸಲಹೆಗಾಗಿ ಬಂದಿದ್ದೆ. ಜ್ಞಾಪಕಕ್ಕೆ ಬಂತೇ?"

ನಾನು ಅವನನ್ನು ಪುನಃ ನೋಡಿದೆ. ಹೌದು, ಈಗ ಆತ ಸ್ವಲ್ಪ ದಪ್ಪಗಾಗಿದ್ದಾನೆ. ಕೂದಲು ಹೋಗಿ ಬಕ್ಕ ತಲೆಯಾಗಿದೆ. ಆದರೆ ಕಣ್ಣುಗಳ ಹೊಳಪು ಮಾಯವಾಗಿಲ್ಲ. ಕೆನ್ನೆಯ ಕೆಂಪು ಬಣ್ಣವೂ ಮಾಸಿಲ್ಲ. ಮುಖದಲ್ಲಿ ಅದೇ ಮಂದಸ್ಮಿತ. ಹಾಕಿಕೊಂಡ ಬಟ್ಟೆಗಳು ಸ್ವಲ್ಪ ಕೊಳೆಯಾಗಿವೆ. ಈ ವೈದ್ಯನಿಂದ ಆಪರೇಶನ್ ಮಾಡಿಸಿಕೊಳ್ಳಬೇಕೆಂದರೆ ಎರಡು ಬಾರಿ ಯೋಚಿಸಬೇಕಾಗುವುದೇನೋ. ಆದರೆ ಕುಳಿತು ಕುಡಿವುದಕ್ಕೆ ಯಾವ ಯೋಚನೆಯೂ ಬೇಕಾಗಿಲ್ಲ.

"ನಿಮಗೆ ಮದುವೆ ಆಗಿತ್ತು, ಅಲ್ವೆ?" ಎಂದೆ ನಾನು.

"ಹೊಂ, ಆದರೆ ಆಕೆಗೆ ಸ್ಪೇನ್ ಇಷ್ಟವಾಗಲಿಲ್ಲ; ಕ್ಯಾಂಬರ್‌ವೆಲ್‌ಗೆ ಹೊಗಟು ಹೋದಳು."

"ಅಯ್ಯೋ ಪಾಪ!" ನಾನೆಂದೆ.

ಅವನ ಕಣ್ಣಿನಲ್ಲಿ 'ಸೋಮ ದೇವರ' ನಗು ಕಾಣಿಸಿಕೊಂಡಿತು.

"ಜೀವನದಲ್ಲಿ ಅನುಭವಿಸುವ ನಷ್ಟಕ್ಕೆ ಪರಿಹಾರ ಇದ್ದೇ ಇರುತ್ತೇನೋ" ಎಂದು ಅವನು ಹೇಳುವುದಕ್ಕೂ ಅಲ್ಲಿಗೆ ಬರುವುದಕ್ಕೂ ಸರಿಹೋಯಿತು. ಅವಳು ನೋಡುವುದಕ್ಕೆ ಅಸಾಮಾನ್ಯ ಸುಂದರಿ. ಸ್ಟೀಫನ್ಸ್‌ನೊಡನೆ ಏನೋ ಮಾತನಾಡಿ ಒಳಕ್ಕೆ ಹೋದಳು. ಬಹುಶಃ ಆಕೆ ಅವನ ಪ್ರಿಯತಮೆಯಾಗಿರಲೂಬಹುದು.

ನಾನು ವಾಪಸಾಗಲು ಬಾಗಿಲ ಬಳಿ ಬಂದಾಗ, ಸ್ಟೀಫನ್ಸ್ ಹೇಳಿದ--

"ನೀವು ಆ ದಿನ ಹೇಳಿದ್ದಿರಿ, 'ಇಲ್ಲಿಗೆ ಬಂದು ಪ್ರ್ಯಾಕ್ಟೀಸು ಶುರುಮಾಡಿದರೆ ಹೊಟ್ಟೆ ಬಟ್ಟೆಗೆ ಮೋಸವಿಲ್ಲ, ಆದರೆ ಹಣ ಸೂರೆ ಹೊಡೆಯುವುದಕ್ಕೆ ಆಗುವುದಿಲ್ಲ, ಎಂದು. ನೀವು ಹೇಳಿದ್ದು ನೂರಕ್ಕೆ ನೂರು ನಿಜ. ಇಲ್ಲಿಯ ಜೀವನ ಅತಿ ಸುಂದರ; ಅಚ್ಚರಿ ಹುಟ್ಟಿಸುವಂತಹದು ಎಂಬುದನ್ನು ನಾನು ಇಲ್ಲಿಗೆ ಬಂದ ಮೇಲೆ ಕಂಡುಕೊಂಡೆ. ನೀವು ನುಡಿದದ್ದು ನಿಜಕ್ಕೂ ಸರಿ. ನಾನು ಬಡವ; ಮುಂದೂ ಬಡವನಾಗಿಯೇ ಇರುತ್ತೇನೆ. ನನಗೆ ಇಲ್ಲಿ ದೊರೆತಿರುವ ಆನಂದಕ್ಕೆ ಮಿತಿಯಿಲ್ಲ. ಬೇರೆಲ್ಲೋ ರಾಜನ ಪದವಿ ಸಿಕ್ಕುತ್ತದೆ ಎಂದರೂ ನಾನು ಈ ಜಾಗ ಬಿಟ್ಟು ಕದಲುವುದಿಲ್ಲ." ●

## ಇದೆಂಥ ಹಕ್ಕಿ!

ವಿಸ್ಮಯಕಾರಿಯಾದ ಹೋಟ್‌ಜಿನ್ ಎಂಬ ಪಕ್ಷಿ ಸರೀಸೃಪ ಹಾಗೂ ಪಕ್ಷಿಗಳ ನಡುವಿನ ಸಂಬಂಧವನ್ನು ಸೂಚಿಸುತ್ತದೆ. ದೊಡ್ಡ ಗಾತ್ರದ ಈ ಪಕ್ಷಿಯು, ಗಯಾನಾ ಹಾಗೂ ವೆನಿಜುವೆಲಾದಲ್ಲಿ, ಮ್ಯಾಂಗ್ರೋವ್ ಗಿಡಗಳು ಬೆಳೆಯುವ ಜೌಗು ಪ್ರದೇಶಗಳಲ್ಲಿ ವಾಸಿಸುತ್ತದೆ. ಆಶ್ಚರ್ಯವೆಂದರೆ, ಇದು ಮರಿಯಾಗಿರುವಾಗ ರೆಕ್ಕೆಗಳ ಮೇಲೆ ಎರಡು ಪುಟ್ಟ ಉಗುರುಗಳು ಮೂಡಿರುತ್ತವೆ. ಬಹುಶಃ ಇದರ ಪೂರ್ವಜರು ಸರೀಸೃಪಗಳಾಗಿದ್ದು, ಅವುಗಳಿಗಿದ್ದ ಉಗುರುಗಳು ಈ ಕುರುಹಾಗಿರಬೇಕು. ಆದರೆ ಈ ಪಕ್ಷಿ ಬೆಳೆಯುತ್ತ ಹೋದಂತೆ ಉಗುರುಗಳು ತಂತಾವೆ ಬಿದ್ದುಹೋಗುತ್ತವೆ. ಜಗತ್ತಿನ ಪ್ರಥಮ ಪಕ್ಷಿಯಾದ ಆರ್ಕಿಯಾಪ್ಟೆರಿಕ್ಸ್‌ನೊಂದಿಗೆ ಇದು ಹಲವಾರು ವಿಷಯಗಳಲ್ಲಿ ಹೋಲುತ್ತದೆ.

● ಬಿ.ಆರ್. ಸುಹಾಸ್

ಹೇಳುತ್ತಿಲ್ಲ." ಎಂದ ಸ್ಟೀಫನ್ಸ್.

ಜನ ಹೀಗೆ ಅಂದರೆ ನನಗೆ ಗೊತ್ತು ಅವರು ತಮ್ಮ ವಿಷಯವನ್ನೆಲ್ಲಾ ಒದರಿ ಬಿಡುತ್ತಾರೆ ಎಂದು.

ಆತ ಹೇಳಿದ, "ನನ್ನನ್ನು ನನ್ನ ಇಬ್ಬರು ದೊಡ್ಡಮ್ಮಂದಿರು ಸಲಹಿದರು. ಆರು ವರ್ಷಗಳ ಕೆಳಗೆ ನಾನು ಮದುವೆಯಾದೆ. ಮಕ್ಕಳಿಲ್ಲ. ಕ್ಯಾಂಬರ್‌ವೆಲ್‌ನಲ್ಲಿ ನಾನು ಮೆಡಿಕಲ್ ಆಫೀಸರ್. ಆದರೆ ನನಗೆ ಅಲ್ಲಿರಲು ಇಷ್ಟವಿಲ್ಲ."

ಆತನು ಆಡಿದ್ದು ಚಿಕ್ಕ ವಾಕ್ಯಗಳು, ಆದರೆ ಅವುಗಳಲ್ಲಿ ಒಂದು ವಿಧವಾದ ಶಕ್ತಿ ಮತ್ತು ಗಾಂಭೀರ್ಯವಿತ್ತು. ಅವನ ಕಡೆ ನಾನು ನೋಡಿದ್ದು ಒಂದೆರಡು ಬಾರಿಮಾತ್ರ. ಆತ ಸುಮಾರು ಮೂವತ್ತು ವರ್ಷ ಪ್ರಾಯದವ. ಗಟ್ಟಿಮುಟ್ಟಾದ ದೇಹ, ಗುಂಡು ಗುಂಡಾಗಿರುವ ಮುಖ ಕಣ್ಣುಗಳಲ್ಲಿ ತೇಜಸ್ಸು, ಕರೀ ಕೂದಲು. ಹಾಕಿಕೊಂಡಿದ್ದು ಬಣ್ಣಗೆಟ್ಟ ನೀಲಿ ಸೂಟು. ಶರಾಯಿ ಜೋಬು ತುಂಬಿದ್ದರಿಂದ ದಪ್ಪವಾಗಿತ್ತು; ಮೊಣಕಾಲಿನ ಬಳಿ ಚೀಲದಂತೆ ಊದಿತ್ತು.

"ಇನ್‌ಫರ್ಮರಿನಲ್ಲಿ ಕೆಲಸ ಅಂದರೆ ಏನು ಅಂತ ನಿಮಗೆ ಹೇಳಬೇಕಾಗಿಲ್ಲ. ಒಂದು ದಿನಕ್ಕೂ ಇನ್ನೊಂದು ದಿನಕ್ಕೂ ಏನು ವ್ಯತ್ಯಾಸವಿಲ್ಲ. ಇಂತಹ ಜಾಗದಲ್ಲಿ ಕೆಲಸ ಮಾಡಿದರೆ ಏನಾದರೂ ಪ್ರಯೋಜನವೆ?" ಎಂದ ಸ್ಟಿಫನ್ಸ್.

"ಜೀವನ ಹೊರೆಯುವುದಕ್ಕೆ ಒಂದು ಕೆಲಸ,"ಎಂದೆ ನಾನು.

"ಹೌದು ಪಗಾರವೂ ಪರವಾಗಿಲ್ಲ."

"ಹೇಳುತ್ತೇನೆ. ಸ್ಪೇನ್‌ನಲ್ಲಿ ಇಂಗ್ಲೀಷ್ ಡಾಕ್ಟರಿಗೆ ಏನಾದರೂ ಕೆಲಸ ಸಿಗಬಹುದೇ?"

"ಸ್ಪೇನಿಗೇ ಏಕೆ ಹೋಗಬೇಕು?"

"ಏಕೆಂದು ನಾನು ಹೇಳಲಾರೆ. ಹೋದರೆ ಅಲ್ಲಿಗೇ ಹೋಗಬೇಕೆಂದು ನನಗೆ ಅನ್ನಿಸ್ತಾ ಇದೆ."

"ಅದೇನು ಕಾರ್‌ಮೆನ್ (carmen) ತರಹ ಅಲ್ಲ, ಗೊತ್ತು ತಾನೇ?"

"ಆದರೆ ಸ್ಪೇನ್‌ನಲ್ಲಿ ಸೂರ್ಯರಶ್ಮಿಗೆ, ದ್ರಾಕ್ಷಾರಸಕ್ಕೆ, ಉಸಿರಾಡಲು ಪರಿಶುದ್ಧವಾದ ಹವೆಗೆ ಯಾವ ಕೊರತೆಯೂ ಇಲ್ಲ ತಾನೆ? ಸೆವಿಲ್‌ನಲ್ಲಿ ಒಬ್ಬನೂ ಇಂಗ್ಲೀಷ್ ವೈದ್ಯನಿಲ್ಲ ಎಂದೂ ಕೇಳಿದ್ದೇನೆ. ನಾನು ಅಲ್ಲಿಗೆ ಹೋದರೆ ಹೊಟ್ಟೆ ಹೊರೆಯುವುದಕ್ಕೆ ಆಗುತ್ತದೆಯೆ? ಕೈಯಲ್ಲಿರುವ ಒಳ್ಳೆಯ ಸಂಬಳ ಬರುವ ಕೆಲಸವನ್ನು ಬಿಟ್ಟು ಅಲ್ಲಿಗೆ ಹೋಗುವುದು ಸರಿ ಅನ್ನಿಸಬಹುದೇ?"

"ನಿಮ್ಮ ಪತ್ನಿ ಏನನ್ನುತ್ತಾರೆ?"

"ಅವಳಿಗೂ ಸ್ಪೇನ್ ಇಷ್ಟ."

"ಆದರೆ ಅಲ್ಲಿಗೆ ಹೋಗುವುದು ಒಂದು ರಿಸ್ಕ್..."

"ನೀವು 'ಹೋಗು' ಎಂದು ಧೈರ್ಯಕೊಟ್ಟರೆ ಹೋಗುತ್ತೇನೆ," ಎಂದು ಕಣ್ಣಲ್ಲಿ ಕಣ್ಣಿಟ್ಟು ಹೇಳಿದ ಸ್ಟೀಫನ್ಸ್.

ನಾನು ಒಂದು ಘಳಿಗೆ ಯೋಚನೆ ಮಾಡಿ ನಂತರ, "ಗೆಳೆಯಾ, ಇದು ನಿನ್ನ ಜೀವನಕ್ಕೆ ಸಂಬಂಧಪಟ್ಟ ವಿಷಯ. ಇಷ್ಟನ್ನು ಮಾತ್ರ ನಾನು ಹೇಳಬಲ್ಲೆ. ನಿನಗೆ ಹಣದ ಮೇಲೆ ವ್ಯಾಮೋಹ ಇಲ್ಲದಿದ್ದರೆ, ಹೊಟ್ಟೆ, ಬಟ್ಟೆಗೆ ಬಂದಿದ್ದರಲ್ಲಿಯೇ ತೃಪ್ತಿಗೊಳ್ಳುವ ಮನಸ್ಸುಳ್ಳವನಾದರೆ, ನೀನು ಖಂಡಿತ ಸ್ಪೇನಿಗೆ ಹೋಗು, ಖಂಡಿತ ಅಲ್ಲಿ ನಿನಗೆ ಜೀವನದಲ್ಲಿ ತೃಪ್ತಿ ಸಿಗುವುದು," ಎಂದೆ.

ಆತ ನಮಸ್ಕರಿಸಿ ಹೊರಟು ಹೋದ.

ಇದಾದ ಎರಡು ಮೂರು ದಿನಗಳಲ್ಲಿ ಅವನು ನನ್ನ ಮನಸ್ಸಿನಿಂದ ಅಳಿಸಿ ಹೋದ.

ಸುಮಾರು ಹದಿನೈದು ವರ್ಷಗಳು ಉರುಳಿದವು. ಹೀಗಿರುತ್ತ ಒಮ್ಮೆ ನಾನು ಅಕಾಸ್ಮಾತ್ತಾಗಿ ಸೆವಿಲ್‌ಗೆ ಹೋದೆ. ಹೊಟೇಲ್‌ನಲ್ಲಿ ತಂಗಿದ್ದ ನನಗೆ ಏಕೋ ಮುಜುಗರವಾಯಿತು. ಹೊಟೇಲಿನವನನ್ನು, "ಇಲ್ಲಿ ಯಾರಾದರೂ ಇಂಗ್ಲೀಷ್ ವೈದ್ಯರು ಇದ್ದಾರೆಯೆ?" ಎಂದು ಕೇಳಿದೆ. "ಒಬ್ಬರು ಇದ್ದಾರೆ" ಎಂದು ಅವನು ಹೇಳಿ, ಅವರ ಅಡ್ರೆಸ್ ತಂದು ಕೊಟ್ಟ. ಟ್ಯಾಕ್ಸಿ ಮಾಡಿಕೊಂಡು ಆ ವೈದ್ಯರ ಮನೆಗೆ ಬಂದೆ. ಒಬ್ಬ ಧಡೂತಿ ಮನುಷ್ಯ ಈಚೆಗೆ ಬಂದು ಸಂಕೋಚದಿಂದ, "ನನ್ನನ್ನು ಕಾಣಲು ಬಂದಿರಾ? ನಾನೊಬ್ಬ ಇಂಗ್ಲೀಷ್ ಡಾಕ್ಟರ್" ಅಂದ. ನನ್ನ ಅಸ್ವಸ್ಥತೆಯ ಬಗ್ಗೆ ಹೇಳಿದಾಗ ಒಳಗೆ ಕರೆದ. ಅದೊಂದು ಸಾಧಾರಣವಾದ ಮನೆ. ಅವನ 'ಸಲಹಾ ಕೊಠಡಿ'ಯಲ್ಲಿ ಕಾಗದ ಚೂರುಗಳು, ಪುಸ್ತಕಗಳು, ಔಷಧಿಗಳು. ಒಂದು ರೀತಿಯಲ್ಲಿ

ಅದೊಂದು 'ಲಂಬರ್ ರೂಮ್'ನಂತಿತ್ತು.

ನನ್ನನ್ನು ನೋಡಿದ ಮೇಲೆ "ಫೀಜು ಎಷ್ಟು?" ಎಂದು ಕೇಳಿದೆ.

ಆತ ತಲೆ ಅಲ್ಲಾಡಿಸಿ "ಏನೂ ಫೀಜು ಬೇಡ" ಅಂದ.

"ಏನು ಹಾಗೆಂದರೆ?"

"ನೀವು ಅಂದು ಹೇಳಿದ ಮಾತು ನನ್ನ ಜೀವನದ ಮಾರ್ಗವನ್ನೇ ಬದಲಾಯಿಸಿ ಬಿಟ್ಟಿತು."

"ಯಾವ ಮಾತು? ಯಾವಾಗ ಹೇಳಿದ್ದು?"

"ನಾನು ಸ್ಟೀಫನ್ಸ್, ಹದಿನೈದು ವರ್ಷಗಳ ಕೆಳಗೆ ನಿಮ್ಮಲ್ಲಿಗೆ ಸಲಹೆಗಾಗಿ ಬಂದಿದ್ದೆ. ಜ್ಞಾಪಕಕ್ಕೆ ಬಂತೇ?"

ನಾನು ಅವನನ್ನು ಪುನಃ ನೋಡಿದೆ. ಹೌದು, ಈಗ ಆತ ಸ್ವಲ್ಪ ದಪ್ಪಗಾಗಿದ್ದಾನೆ. ಕೂದಲು ಹೋಗಿ ಬಕ್ಕ ತಲೆಯಾಗಿದೆ. ಆದರೆ ಕಣ್ಣುಗಳ ಹೊಳಪು ಮಾಯವಾಗಿಲ್ಲ. ಕೆನ್ನೆಯ ಕೆಂಪು ಬಣ್ಣವೂ ಮಾಸಿಲ್ಲ. ಮುಖದಲ್ಲಿ ಅದೇ ಮಂದಸ್ಮಿತ. ಹಾಕಿಕೊಂಡ ಬಟ್ಟೆಗಳು ಸ್ವಲ್ಪ ಕೊಳೆಯಾಗಿವೆ. ಈ ವೈದ್ಯನಿಂದ ಆಪರೇಶನ್ ಮಾಡಿಸಿಕೊಳ್ಳಬೇಕೆಂದರೆ ಎರಡು ಬಾರಿ ಯೋಚಿಸಬೇಕಾಗುವುದೇನೋ. ಆದರೆ ಕುಳಿತು ಕುಡಿವುದಕ್ಕೆ ಯಾವ ಯೋಚನೆಯೂ ಬೇಕಾಗಿಲ್ಲ.

"ನಿಮಗೆ ಮದುವೆ ಆಗಿತ್ತು, ಅಲ್ವೆ?" ಎಂದೆ ನಾನು.

"ಹೊಂ. ಆದರೆ ಆಕೆಗೆ ಸ್ಪೇನ್ ಇಷ್ಟವಾಗಲಿಲ್ಲ; ಕ್ಯಾಂಬರ್‌ವೆಲ್‌ಗೆ ಹೊರಟು ಹೋದಳು."

"ಅಯ್ಯೋ ಪಾಪ!" ನಾನೆಂದೆ.

ಅವನ ಕಣ್ಣಿನಲ್ಲಿ 'ಸೋಮ ದೇವರ' ನಗು ಕಾಣಿಸಿಕೊಂಡಿತು.

"ಜೀವನದಲ್ಲಿ ಅನುಭವಿಸುವ ನಷ್ಟಕ್ಕೆ ಪರಿಹಾರ ಇದ್ದೇ ಇರುತ್ತೇನೋ" ಎಂದು ಅವನು ಹೇಳುವುದಕ್ಕೂ ಅಲ್ಲಿಗೆ ಬರುವುದಕ್ಕೂ ಸರಿಹೋಯಿತು. ಅವಳು ನೋಡುವುದಕ್ಕೆ ಅಸಾಮಾನ್ಯ ಸುಂದರಿ. ಸ್ಟೀಫನ್ಸ್‌ನೊಡನೆ ಏನೋ ಮಾತನಾಡಿ ಒಳಕ್ಕೆ ಹೋದಳು. ಬಹುಶಃ ಆಕೆ ಅವನ ಪ್ರಿಯತಮೆಯಾಗಿರಲೂಬಹುದು.

ನಾನು ವಾಪಸಾಗಲು ಬಾಗಿಲ ಬಳಿ ಬಂದಾಗ, ಸ್ಟೀಫನ್ಸ್ ಹೇಳಿದ--

"ನೀವು ಆ ದಿನ ಹೇಳಿದ್ದಿರಿ, 'ಇಲ್ಲಿಗೆ ಬಂದು ಪ್ರ್ಯಾಕ್ಟೀಸು ಶುರುಮಾಡಿದರೆ ಹೊಟ್ಟೆ ಬಟ್ಟೆಗೆ ಮೋಸವಿಲ್ಲ, ಆದರೆ ಹಣ ಸೂರೆ ಹೊಡೆಯುವುದಕ್ಕೆ ಆಗುವುದಿಲ್ಲ, ಎಂದು. ನೀವು ಹೇಳಿದ್ದು ನೂರಕ್ಕೆ ನೂರು ನಿಜ. ಇಲ್ಲಿಯ ಜೀವನ ಅತಿ ಸುಂದರ; ಅಚ್ಚರಿ ಹುಟ್ಟಿಸುವಂತಹದು ಎಂಬುದನ್ನು ನಾನು ಇಲ್ಲಿಗೆ ಬಂದ ಮೇಲೆ ಕಂಡುಕೊಂಡೆ. ನೀವು ನುಡಿದದ್ದು ನಿಜಕ್ಕೂ ಸರಿ. ನಾನು ಬಡವ; ಮುಂದೂ ಬಡವನಾಗಿಯೇ ಇರುತ್ತೇನೆ. ನನಗೆ ಇಲ್ಲಿ ದೊರೆತಿರುವ ಆನಂದಕ್ಕೆ ಮಿತಿಯಿಲ್ಲ. ಬೇರೆಲ್ಲೋ ರಾಜನ ಪದವಿ ಸಿಕ್ಕುತ್ತದೆ ಎಂದರೂ ನಾನು ಈ ಜಾಗ ಬಿಟ್ಟು ಕದಲುವುದಿಲ್ಲ." ●

## ಇದೆಂಥ ಹಕ್ಕಿ!

ವಿಸ್ಮಯಕಾರಿಯಾದ ಹೋಟ್‌ಜಿನ್ ಎಂಬ ಪಕ್ಷಿ ಸರೀಸೃಪ ಹಾಗೂ ಪಕ್ಷಿಗಳ ನಡುವಿನ ಸಂಬಂಧವನ್ನು ಸೂಚಿಸುತ್ತದೆ. ದೊಡ್ಡ ಗಾತ್ರದ ಈ ಪಕ್ಷಿಯು, ಗಯಾನಾ ಹಾಗೂ ವೆನಿಜುವೆಲಾದಲ್ಲಿ, ಮ್ಯಾಂಗ್ರೋವ್ ಗಿಡಗಳು ಬೆಳೆಯುವ ಜೌಗು ಪ್ರದೇಶಗಳಲ್ಲಿ ವಾಸಿಸುತ್ತದೆ. ಆಶ್ಚರ್ಯವೆಂದರೆ, ಇದು ಮರಿಯಾಗಿರುವಾಗ ರೆಕ್ಕೆಗಳ ಮೇಲೆ ಎರಡು ಪುಟ್ಟ ಉಗುರುಗಳು ಮೂಡಿರುತ್ತವೆ. ಬಹುಶಃ ಇದರ ಪೂರ್ವಜರು ಸರೀಸೃಪಗಳಾಗಿದ್ದು, ಅವುಗಳಿಗಿದ್ದ ಉಗುರುಗಳು ಈ ಕುರುಹಾಗಿರಬೇಕು. ಆದರೆ ಈ ಪಕ್ಷಿ ಬೆಳೆಯುತ್ತ ಹೋದಂತೆ ಉಗುರುಗಳು ತಂತಾವೆ ಬಿದ್ದುಹೋಗುತ್ತವೆ. ಜಗತ್ತಿನ ಪ್ರಥಮ ಪಕ್ಷಿಯಾದ ಆರ್ಕಿಯಾಪ್ಟೆರಿಕ್ಸ್‌ನೊಂದಿಗೆ ಇದು ಹಲವಾರು ವಿಷಯಗಳಲ್ಲಿ ಹೋಲುತ್ತದೆ.

● ಬಿ.ಆರ್. ಸುಹಾಸ್

# ನನ್ನ ಬಾಳ ಸಂಗಾತಿ ಮಧು

● ಚಂಪಾ ಲಿಮಯೆ

**ಕಳೆದ ಜನೆವರಿ ೮ರಂದು ಪ್ರಮುಖ ಸಮಾಜವಾದಿ ಚಿಂತಕ ಮಧು ಲಿಮಯೆ ಇಹಲೋಕ ಯಾತ್ರೆ ಮುಗಿಸಿದರು. ಜೀವನದುದ್ದಕ್ಕೂ ಅವರು ಸಮಾಜವಾದಿ ಸಮಾಜದ ಕನಸು ನನಸಾಗಿಸಲು ರಾಜನೀತಿಯಲ್ಲಿ ಶ್ರಮಿಸಿದರು: ಮೊದಲು ಸಕ್ರಿಯವಾಗಿ, ನಂತರ ಒಬ್ಬ ವಿಚಾರವಾದಿಯಾಗಿ. ಭಾರತದ ರಾಜಕಾರಣ ಇಂದು ಮುಟ್ಟಿರುವ ಘಟ್ಟದ ಹಿನ್ನೆಲೆಯಲ್ಲಿ ಅದರ ಅಂತರ್ವಿರೋಧಗಳನ್ನವರು ಎಡೆಬಿಡದೆ ತಮ್ಮ ಲೇಖನಗಳ ಮೂಲಕ ಬಯಲುಗೊಳಿಸುತ್ತಲೇ ನಡೆದವರು. ದೇಶದ ಭವಿತವ್ಯದ ಕುರಿತು ಅವರಿಗೆ ಅಪಾರ ಕಾಳಜಿ. ಅವರ ಕಣ್ಮರೆಯಿಂದ ನಾವು ಒಬ್ಬ ಚಿಂತಕನನ್ನೂ ರಾಷ್ಟ್ರಪ್ರೇಮಿಯನ್ನೂ ಕಳಕೊಂಡಂತಾಗಿದೆ. ಅವರ ಬದುಕು, ವೈಚಾರಿಕ ನಿಲುವು ಮುಂತಾದವುಗಳನ್ನಿಲ್ಲಿ ಮಧೂಜಿಯ ಪತ್ನಿ ಚಂಪಾ ಲಿಮಯೆ ನೀಡಿದ್ದಾರೆ.**

೧೯೪೭ರ ಏಪ್ರಿಲ್ ತಿಂಗಳು. ರಜೆಯ ದಿನಗಳಲ್ಲಿ ನಾವು ಕೆಲವು ಉತ್ಸಾಹಿ ಸ್ನೇಹಿತೆಯರು 'ಅಧ್ಯಯನ ಮಂಡಲ'ವೊಂದನ್ನು ಪ್ರಾರಂಭಿಸಲು ನಿರ್ಧರಿಸಿಯಾಗಿತ್ತು. ಮಹಿಳೆಯರಲ್ಲಿ ಸಾಕ್ಷರತಾ ಪ್ರಸಾರಕ್ಕಾಗಿ ಒಂದು ವಿಭಾಗವನ್ನೂ ಪ್ರಾರಂಭಿಸಿದ್ದೆವು. 'ಅಧ್ಯಯನ ಮಂಡಲ'ದಲ್ಲಿ ರಾಜನೀತಿ ಮತ್ತು ಸಾಮಾಜಿಕ ವಿಷಯಗಳ ಕುರಿತಾದ ಉಪನ್ಯಾಸಗಳ ಏರ್ಪಾಡು ಮಾಡಬೇಕಾಗಿತ್ತು. ಆಗ ಸಾನೆ ಗುರೂಜಿಯ ಪರಮಾಪ್ತ ಮಿತ್ರ ಹಾಗೂ ನಲವತ್ತೆರಡರ ಚಳವಳಿಯಲ್ಲಿ ಭಾಗವಹಿಸಿದ್ದ ಕ್ರಾಂತಿಕಾರಿ ಯುವಕನೊಬ್ಬನನ್ನು ಉಪನ್ಯಾಸ ನೀಡಲೆಂದು ಮಂಡಲದ ಕಾರ್ಯದರ್ಶಿ ಆಮಂತ್ರಿಸಿದ್ದರು.

ಬೆಳಗಿನ ಒಂಬತ್ತರ ಹೊತ್ತಿರಬೇಕು. ಪ್ರತಾಪ ಹೈಸ್ಕೂಲಿನ ಅಧ್ಯಾಪಿಕೆ ಕಮಲಾತಾಯಿ ಜೋಶಿಯವರ ಮನೆಯಲ್ಲಿ ನಾವು ಹದಿನೈದಿಪ್ಪತ್ತು ಹುಡುಗಿಯರು ಸೇರಿ ಆ ಉಪನ್ಯಾಸಕಾರನ ದಾರಿಯನ್ನೇ ಕಾಯುತ್ತಿದ್ದೆವು. ಶುಭ್ರಖಾದಿಧಾರಿ, ಗೌರವರ್ಣದ ಯುವಕನೊಬ್ಬ ಸೈಕಲ್ಲೇರಿ ಅಲ್ಲಿಗೆ ಬಂದ. ಖಡಕ್ ಇಸ್ತ್ರಿ ಮಾಡಿದ್ದ ಗಾಂಧಿ ಟೊಪ್ಪಿಗೆ, ನೆಹರೂ ಶರ್ಟು ಮತ್ತು ಪೈಜಾಮ ಧರಿಸಿದ್ದ ಎತ್ತರ ನಿಲುವಿನ ಯುವಕ. ವಿಶಾಲ ಹಣೆ, ಹೊಳಪುಳ್ಳ ಕಪ್ಪು ಕಣ್ಣುಗಳು, ಕೆಂಪಾದ ತುಟಿಗಳು ಮೊದಲ ನೋಟದಲ್ಲೇ ನನ್ನನ್ನು ಆಕರ್ಷಿಸಿದುವು. ಬಹುಶಃ ನಿಯತಿ ಆಗ ಒಳಗೊಳಗೇ ನಕ್ಕಿರಬೇಕೆಂದೆನಿಸುತ್ತದೆ. ಅಲ್ಲದೆ ಆಗಲೇ ನಿರ್ಧರಿಸಿಬಿಟ್ಟಿರಲೂ ಬೇಕೆನಿಸುತ್ತದೆ. ಎದುರಿಗೆ ನಿಂತ ತರುಣ ಮುಂದೊಮ್ಮೆ ನನ್ನ ಬಾಳಸಂಗಾತಿ ಆಗಬಹುದೆಂಬ ಬಗ್ಗೆ ನನಗಾಗಲಿ, ಅಲ್ಲಿದ್ದ ನನ್ನ ಸಮವಯಸ್ಕ ಗೆಳತಿಯರಿಗಾಗಲೀ ಅನ್ನಿಸಲೇ ಇರಲಿಲ್ಲವೆಂಬುದನ್ನು ನೀವೀಗ ನಂಬಲಿಕ್ಕಿಲ್ಲ. ಯಾಕೆಂದರೆ ಆಗ ನಮ್ಮಿಬ್ಬರ ಜೀವನ ಪ್ರವಾಹ ವಿರುದ್ಧ ದಿಶೆಗಳಲ್ಲಿ ಹರಿಯುತ್ತಿತ್ತು.

ಅಮಲನೇರದ ಗುಪ್ತೆ ವಕೀಲರ ಮುದ್ದಿನ ಮಗಳಾಗಿ ಬೆಳೆದ ನಾಜೂಕು ಹುಡುಗಿ. ಹಣಕಾಸಿನ ತೊಂದರೆಯೆಂದರೇನೆಂಬುದೇ ಗೊತ್ತಿರದವಳು. 'ನಾವಾಯಿತು, ನಮ್ಮ ಅಭ್ಯಾಸವಾಯಿತು' ಎಂಬ ನೀತಿಯಲ್ಲಿ ನಂಬಿಕೆಯುಳ್ಳವಳು. ಆಗೀಗ ಬ್ಯಾಡ್ಮಿಂಟನ್



ಅಥವಾ ಬೇರಾವುದೋ ಆಟ, ನಾಟಕಗಳಲ್ಲಿ ಅಭಿನಯ, ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸುವಿಕೆ, ಬಹುಮಾನ-ಪ್ರಶಸ್ತಿ-ಸ್ಕಾಲರ್‌ಶಿಪ್ ಗಳಿಕೆ ಎಂದೆಲ್ಲ ಕಳೆದುಹೋಗುತ್ತಿದ್ದ ದಿನಗಳು. ಕವಿತೆಯೋ-ಕತೆಯೋ-ಲೇಖನವೋ ಎಂದು ಬರೆಯುತ್ತ ದೊಡ್ಡ ಲೇಖಕಿಯಾಗುವ ಕನಸು ಬೇರೆ. ಹೊಟ್ಟೆತುಂಬ ಸಿಹಿತಿಂಡಿ, ಕಿವಿತುಂಬ ಸಿಹಿ ಮಾತುಗಳ ಹಾಗೆಯೇ ರೀತಿ ತಪ್ಪಿದರೆ ಹೊಡೆತಗಳನ್ನೂ ತಿನ್ನಬೇಕಾದ ಕಠಿಣ ಕ್ರಮ. (ಸಂಜೆ ಕರಗಿ ಕತ್ತಲಾಗುವುದರೊಳಗಾಗಿ ಮನೆಯಲ್ಲಿರದಿದ್ದರೆ ಅಪ್ಪನ ಅತಿಶಯ ಸಿಟ್ಟು, ಹಾಗೂ ಕೋಲುಸೇವೆಯನ್ನೆದುರಿಸಬೇಕಾದ ಭಯ.) ಇಂಥ ನಾಜೂಕಿನ ಗೊಂಬೆ ನಾನು, ಚಂಪಾ ಗುಪ್ತೆ.

ಮತ್ತು....

ವಿಶ್ವವಿದ್ಯಾಲಯದ ಶಿಕ್ಷಣಕ್ಕೆ ಶರಣು ಹೊಡೆದು, ಸುಖಮಯ ಎನ್ನಬಹುದಾದ ಜೀವನದಿಂದ ದೂರವಾಗಿ, ಮನೆ-ಸಂಬಂಧಿಕರು ಎಂಬೆಲ್ಲ ಮೋಹಪಾಶದಿಂದ ಹೊರಬಂದು, ಎಲ್ಲವನ್ನೂ ತ್ಯಜಿಸಿ, ಕ್ರಾಂತಿಯ ಯೋಚನೆಯ ನಶೆಯಲ್ಲಿ ಮುಳುಗಿದ, ಹದಿನೆಂಟರ ವಯಸ್ಸಿನಿಂದಲೇ ಸಶ್ರಮ ಕಾರಾವಾಸದ ಅನುಭವ ಪಡೆದ, ಬದುಕಿನ ಆಶೆಬಿಟ್ಟು ಸಾವಿನ ಭಯವಿಲ್ಲದೆ ಸಂಘರ್ಷದ ಸಮರಭೂಮಿಯಲ್ಲಿಳಿದ ನಿರ್ಭಯಿ, ಅನವರತ ಅಧ್ಯಯನಶೀಲ, ಸ್ವಾಧೀನತಾ ಸಂಗ್ರಾಮದ ತೇಜಸ್ವಿ ಸಿಪಾಯಿ ಮಧು ಲಿಮಯೆ.

ಇಬ್ಬರ ಜೀವನದೃಷ್ಟಿಯೇ ಭಿನ್ನ: ಪ್ರವೃತ್ತಿಯಲ್ಲೂ, ಕಾರ್ಯಕ್ಷೇತ್ರದಲ್ಲೂ. ಎಷ್ಟು ದೂರ ಸಾಗಿದರೂ ಒಂದೆಡೆಯೂ ಮಿಲನಗೊಳ್ಳುವ

ಸಾಧ್ಯತೆಯೇ ಇರದ ರೈಲುಕಂಬಿಗಳ ಹಾಗಿನ ಬದುಕು. ಆದರೆ ಜೀವನವೆಂದ ಮೇಲೆ ಕಹಿಯಾದುದಿರಲಿ, ಸಿಹಿಯಾದುದಿರಲಿ ಆಕಸ್ಮಿಕಗಳು ಇರಲೇಬೇಕಲ್ಲ. ಒಂದು ಮಧುರವಾದ ಆಕಸ್ಮಿಕ ಘಟಿಸಿತು.

ಎಂಟತ್ತು ದಿನಗಳವರೆಗೆ ಮಧು ಲಿಮಯೆ ನಮಗೆಲ್ಲ ಕಾಂಗ್ರೆಸ್ ಆಂದೋಲನದ ಕುರಿತೇ ಉಪನ್ಯಾಸ ನೀಡಿದರು. ಸ್ಪಷ್ಟ ಉಚ್ಚಾರ, ವಿಶಿಷ್ಟ ಶೈಲಿ, ವಿಸ್ತೃತ ವಿಶ್ಲೇಷಣೆಗಳಿಂದಾಗಿ ನನಗೂ ನನ್ನೆಲ್ಲ ಗೆಳತಿಯರಿಗೂ ಆ ಭಾಷಣಗಳು ತುಂಬ ಹಿಡಿಸಿದುವು. ಈ ಅವಧಿಯಲ್ಲಿ ಮಧು ಒಮ್ಮೆಯಾದರೂ ತಪ್ಪಿ ಯಾವುದೇ ಹುಡುಗಿಯೆಡೆ ನೋಡಿರಲಿಲ್ಲ. ನೇರವಾಗಿ ಎದುರಿನ ಗೋಡೆ, ಬಾಗಿಲು, ಕಿಟಕಿ ಅಥವಾ ಅದರಾಚೆ ಕಾಣುವ ವಿಶಾಲ ಆಕಾಶದಲ್ಲಿ ದೃಷ್ಟಿ ನೆಟ್ಟು ಏಕಾಗ್ರಚಿತ್ತದಿಂದ ವಿವರಿಸುತ್ತಲೇ ಹೋದರು. ಭಾಷಣದ ನಂತರ ನಮ್ಮಲ್ಲಿ ಯಾರಾದರೂ ಯಾವುದಾದರೂ ವಿಷಯವಾಗಿ ಪ್ರಶ್ನೆ ಕೇಳಿದರೆ, ಆ ಪ್ರಶ್ನೆ ಕೇಳುವುದು ಮುಗಿಯುವವರೆಗೆ ಅದರತ್ತ ಕಿವಿಗೊಟ್ಟು ಎಲ್ಲೋ ಒಂದೆಡೆ ದೃಷ್ಟಿ ನೆಟ್ಟಿರುತ್ತಿದ್ದರು. ನಂತರ ಅವರು ಹೇಳುವ ಉತ್ತರ ನೇರ ಮತ್ತು ವಿಷಯದ ಚೌಕಟ್ಟಿನೊಳಗಿರುವಂಥದೇ ಆಗಿರುತ್ತಿತ್ತು. ಅಷ್ಟೇ ಅಲ್ಲ, ಪ್ರಶ್ನೋತ್ತರ ಮುಗಿದ ಮೇಲೆ ಒಂದು ಕ್ಷಣವೂ ಆ ಜಾಗದಲ್ಲಿ ನಿಲ್ಲದೆ ಹೊರಟುಬಿಡುತ್ತಿದ್ದರು. ಆದರೆ ಕಮಲಾತಾಯಿ ಜೋಶಿಯವರ ಆಗ್ರಹದಿಂದ ಎದುರಿಗಿಟ್ಟಿದ ಚಹದ ಕಪ್ಪನ್ನೋ ಶರಬತ್ತಿನ ಗ್ಲಾಸನ್ನೋ ಎತ್ತಿ ಗಟಗಟನೇ ಕುಡಿದು ಪಟಪಟನೆ ನಡೆದುಬಿಡುತ್ತಿದ್ದರು. ನೋಡನೋಡುತ್ತಿದ್ದಂತೆಯೇ ಸೈಕಲ್ಲು ಗಲ್ಲಿಯಲ್ಲಿ ಸಾಗಿ ಮರೆಯಾಗಿ ಹೋಗಿರುತ್ತಿತ್ತು. ಬಹುಶಃ ಇಷ್ಟೆಲ್ಲ ಹುಡುಗಿಯರ ನಡುವೆ ಉಸಿರುಕಟ್ಟುವಂತಾಗುತ್ತಿತ್ತೋ ಏನೋ. ನಾವೆಲ್ಲ ಗೆಳತಿಯರು ಅವರಿಗೊಂದು ಹೆಸರು ಕೊಟ್ಟುಬಿಟ್ಟೆವು- 'ವಿನಯ'. ಅಷ್ಟೇ ಅಲ್ಲ, "ಕಾರ್ತಿಕ ಸ್ವಾಮಿಯ ಆಧುನಿಕ ಅವತಾರ" ವೆಂದೂ, "ಶುಕ್ರನಂತೆ ಸಂಪೂರ್ಣ ವೈರಾಗ್ಯ ಈತನದು" ಎಂದೂ ಚೇಷ್ಟೆ ಮಾಡುತ್ತಿದ್ದೆವು.

ನಂತರ ೧೯೫೫ರ ಜನವರಿಯಲ್ಲೊಂದು ಸಂಜೆ. ನಮ್ಮ ಕಾಲೇಜಿನಲ್ಲಿ ಅಶೋಕ ಮೆಹ್ತಾರ ಭಾಷಣ. ಸಮಾಜವಾದಿ ಯುವಕ ಪರಿಷತ್ತಿನ ಆಮಂತ್ರಣದ ಮೇರೆಗೆ ಅವರು ಬಂದಿದ್ದರು. ಅರೆ! ಮೆಹ್ತಾರ ಪಕ್ಕದಲ್ಲಿ ನಾಲ್ಕು ವರ್ಷಗಳ ನಂತರ ನನಗೆ ಮತ್ತೊಮ್ಮೆ ಮಧೂಜಿಯ ಆ ರೂಪ ಗೋಚರಿಸಿತು. ನಾನು ಶ್ರೋತೃಗಳ ನಡುವೆ ಕುಳಿತಿದ್ದೆ. ದೂರದಲ್ಲಿದ್ದರೂ ಆ ಮುಖದಲ್ಲಿ ಮಿನುಗುತ್ತಿದ್ದ ಮಂದಹಾಸ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಮೆಹ್ತಾರ ಉಪನ್ಯಾಸ ಮುಗಿದ ಮೇಲೆ ಮಧು ಲಿಮಯೆ ಧಡಪಡಿಸಿಕೊಂಡು ನನ್ನ ಹತ್ತಿರ ಬಂದರು. "ಈಗ ಏನು ಮಾಡ್ತಿದ್ದೀರಿ ಮಿಸ್ ಗುಪ್ತೆ? ಎಲ್ಲಿದ್ದೀರಿ?" ಮುಂತಾದ ಲೋಕಾಭಿರಾಮದ ಪ್ರಶ್ನೋತ್ತರ ನಡೆಯಿತು. ಉಪನ್ಯಾಸ ನಡೆದ ಹೊತ್ತಿನಲ್ಲೇ ಕಲ್ಪನಾ ಲೋಕದಲ್ಲಿ ವಿಹರಿಸುತ್ತಿದ್ದ ನನಗೆ ಮಧೂಜಿಯ ಮಾತಿನಿಂದ ಮತ್ತೆರಡು ರೆಕ್ಕೆಗಳು ಮೂಡಿದಂಥ ಭಾವನೆ. ನನ್ನೊಂದಿಗೆ ಅವರು ಲೋಕಾಭಿರಾಮವಾಗಿ ಮಾತನಾಡುತ್ತಿದ್ದರೂ ಶಬ್ದಾತೀತ ಸಂಭಾಷಣೆಯೊಂದು ನಮ್ಮಿಬ್ಬರ ಹೃದಯಗಳ ನಡುವೆ ಸಾಗಿತ್ತು. ಮುಂದೊಮ್ಮೆ ಭೇಟಿಯಾದಾಗ ಮಧು ಲಿಮಯೆ ನನ್ನೆದುರು ಮನಸ್ಸು ಬಿಚ್ಚಿ ಹೇಳಿಬಿಟ್ಟರು- "ಆ ದಿನ ನಿಮ್ಮೊಂದಿಗೆ ಮಾತನಾಡಿ ಹೋದ ಮೇಲೆ ರಾತ್ರಿಯೆಲ್ಲ ಮಗ್ಗಲು ಬದಲಿಸುವುದರಲ್ಲೇ ಕಳೆಯಿತು. ಕಣ್ಣುಮುಚ್ಚಿದರೂ ಅಷ್ಟೆ, ತೆರೆದರೂ ಅಷ್ಟೆ- ಎದುರು ನಿಮ್ಮದೇ ರೂಪು ಕುಣಿಯುತ್ತಲಿತ್ತು."

ಬಾಳ ವೀಣೆಯ ತಂತಿಗಳು ಮೀಟುವಿಕೆಗಾಗಿ, ಜೀವನ ಸಂಗೀತ ಹೊರಹೊಮ್ಮಿಸುವುದಕ್ಕಾಗಿ ಕಾದಿದ್ದವು.

ವಾರವೊಂದರಲ್ಲೆ ಆ ಪತ್ರ ಬಂತು. ಎಷ್ಟು ಅನಿರೀಕ್ಷಿತವೋ ಅಷ್ಟೇ ಅಪೇಕ್ಷಿತವಾಗಿ. ಅದರಲ್ಲಿ ಮಧೂಜಿ ಇನ್ನಷ್ಟು ಸ್ಪಷ್ಟವಾಗಿ ತಮ್ಮನ್ನು ತೆರೆದಿಟ್ಟಿದ್ದರು. ನನ್ನ ಹಸಿವು-ನೀರಡಿಕೆಗಳನ್ನೇ ಮರೆಸುವಂಥ ಒಕ್ಕಣಿಕೆ. ನಿದ್ರೆಯಂತೂ ನನ್ನಿಂದ ದೂರವೇ ಆಗಿತ್ತು. ನಾನು ಅಷ್ಟು ಯೋಗ್ಯಳೆ? ಅವರ ಪ್ರೇಮಕ್ಕೆ ಪಾತ್ರಳಾಗುವ ಅರ್ಹತೆಯಿದೆಯೆ ನನ್ನಲ್ಲಿ? ಮನದಲ್ಲಿ ವಿಚಾರಗಳ ತೂಫಾನು. ಆ ಪತ್ರಕ್ಕೆ ಏನು ಉತ್ತರ ಬರೆಯಬೇಕು, ಹೇಗೆ ಬರೆಯಬೇಕೆಂಬುದೇ ದೊಡ್ಡ ಸಮಸ್ಯೆ. ನನ್ನ ಶರೀರ

ದೈನಂದಿನ ವ್ಯವಹಾರಗಳನ್ನೆಲ್ಲ ಯಾಂತ್ರಿಕವಾಗಿ ನಡೆಸಿತ್ತು. ಬಹುಶಃ ನನ್ನ ಮುಖ ಕಳೆಗುಂದಿದೆಯೇನೋ ಅನ್ನಿಸತೊಡಗಿತು. ನೋಡಿದವರಿಗೆ ಈ ಹುಡುಗಿಯ ಮನಸ್ಸನ್ನು ತಿನ್ನುತ್ತಿರುವುದಾದರೂ ಏನು ಎಂಬುದೇ ತಿಳಿಯದಂಥ ಸ್ಥಿತಿ. ನಾಲ್ಕೈದು ದಿನಗಳಲ್ಲೆ ಎರಡನೆಯ ಪತ್ರ ಬಂತು. ಊಹುಂ. ಇನ್ನು ನಿರುತ್ತರೆಯೆನಿಸಿಕೊಳ್ಳುವುದು ಅಸಾಧ್ಯದ ಮಾತು. ಆದರೆ ನನಗ್ಯಾಕೋ ಅವರೊಬ್ಬ ಸೂರ್ಯ, ನಾನೊಂದು ಮಿಣುಕು ಹುಳು; ಇಬ್ಬರೂ ವಿಭಿನ್ನ ಧ್ರುವಗಳಲ್ಲಿರುವಂಥವರು. ಆದರೂ ಅದು ಹೇಗೋ ನಾನು ಅವರ ಅತಿ ಸಮೀಪ ತಲಪಿದ್ದೇನೆ ಎಂದೆನ್ನಿಸತೊಡಗಿತು. 'ಭಾವಸ್ಥಿರಾಣಿ ಜನನಾಂತರ ಸೌಹೃದಾನಿ'ಯ ಹೊರತು ಇನ್ನೇನು ಹೇಳುವುದು?

ಜನವರಿ ೨೬ರಂದು ಅವರಿಂದ ನಾಲ್ಕೈದು ಪುಸ್ತಕಗಳು ಕಾಣಿಕೆಯಾಗಿ ಬಂದವು. ಅತ್ಯುತ್ತಮ ಇಂಗ್ಲಿಷ್ ಪುಸ್ತಕಗಳು. ನನಗೆ ಅವರ ಅಭಿವ್ಯಕ್ತಿಯ ಅಂದಾಜು ಸಿಕ್ಕಿತು. ಮುಂದೆ 'ಕೊಲಂಬೊ ಯೋಜನೆ' ಕುರಿತಂತೆ ಉಪನ್ಯಾಸ ನೀಡುವುದಕ್ಕಾಗಿ ಅವರನ್ನು ಕಾಲೇಜಿಗೆ ಆಮಂತ್ರಿಸಲಾಯಿತು. ಆ ಮೇಲೆ ನಮ್ಮ ಮನೆಗೆ ಬರುವ ಕಾರ್ಯಕ್ರಮವಿತ್ತು. ಆದರೆ ಆಕಸ್ಮಿಕವೆಂಬಂತೆ ಹಿಂದಿನ ರಾತ್ರಿಯೇ ಅದೇನೋ ಜರೂರು ಕೆಲಸದ ಮೇಲೆ ನಮ್ಮಲ್ಲಿಗೆ ಬಂದುಬಿಟ್ಟರು. ಅಬ್ಬಾ, ನನ್ನ ಪರಿವಾರದ ಎಲ್ಲರಿಗೂ ಅದೆಷ್ಟು ಆನಂದ!

ಅಂಗಳದ ಹೂವುಗಳು ತುಂಟತನದಿಂದ ಅವರತ್ತ ನೋಡಿ ನಕ್ಕಿರಬೇಕು. ಅಷ್ಟು ಸೀದಾ-ಸಾದಾ ವ್ಯಕ್ತಿಯೆದುರು ನಾನು ಚಮಕುಚಮಕಿನ ಸೀರೆಯುಟ್ಟು ಕಾಣಿಸಿಕೊಂಡರೆ ಏನಂದುಕೊಳ್ಳುವರೋ ಎಂದೆನಿಸಿದ್ದೇ ತಡ ಬಿಳಿಯ ಸಾದಾ ಸೀರೆಯೊಂದನ್ನು ಉಟ್ಟುಕೊಂಡು ಅವರೆದುರು ನಿಂತೆ.

ಮುಂದೆ ಗೊತ್ತಾಯಿತು- ಅಚ್ಚರಿಯೂ ಆಯಿ



"ಲೋ ಕತ್ತೆ, ನಾಚಿಕೆಯಾಗಲ್ವೇನು? 'ಪೆನ್ಸಿಲ್ ಬೇಕಿತ್ತು, ಅದಕ್ಕೇ ಅದನ್ನ ಗೆಳೆಯನ ಚೀಲದಿಂದ ಕದ್ದೆ' ಅಂತೀಯಲ್ಲೋ.... ನನಗೆ ಹೇಳೋಕೇನಾಗಿತ್ತು? ಆಫೀಸ್ನಿಂದ ತಂದ್ಕೊಡ್ತಿದ್ದೆ."

ತೆನ್ನಿ- ಅವರೇನು ಅರಸಿಕರಲ್ಲ ಎಂದು; ಸುಂದರ ವಸ್ತ್ರ, ಸುಂದರ ವಸ್ತುಗಳು, ಸುಂದರ ಮಕ್ಕಳನ್ನವರು ತುಂಬ ಇಷ್ಟಪಡುತ್ತಾರೆ ಎಂದು. ಸೌಂದರ್ಯವನ್ನು ರಸಿಕ ಮನದಿಂದ ಆಸ್ವಾದಿಸಬಲ್ಲ ಸ್ವಭಾವಧರ್ಮಿ. ಅನೇಕ ಪ್ರತಿಭಾವಂತ-ರೂಪವಂತ ಪಾಶ್ಚಾತ್ಯ ಹಾಗೂ ಭಾರತೀಯ ಯುವತಿಯರು ತಮ್ಮ ಕೈ ಹಿಡಿಯಲು ಮುಂದೆ ಬಂದರೂ ಸೀದಾ-ಸಾದಾ ಹುಡುಗಿಯೊಂದಿಗೆ ಬಾಳು ಸಾಗಿಸಲು ನಿಶ್ಚಯಿಸಿದವರು. ನಮ್ಮ ಮನೆಗೆ ಅವರೂ, ಅವರ ಮನೆಗೆ ನಾನೂ ಬಂದು ಹೋದದ್ದೆಷ್ಟು ಸಲವೊ! ಆತ್ಮೀಯ ಸ್ವಾಗತದ ವಿನಿಮಯ ನಿತ್ಯದ ಮಾತಾಯಿತು. ಪರಿವಾರದಲ್ಲಿ ತಪ್ಪಿಯಾದರೂ ವಿರೋಧ ಇಲ್ಲವೆ ಕಟುಮಾತು ಎದುರಾಗಲಿಲ್ಲ. ಆದರೆ ಈ ಲತೆಯಂಥ ಹುಡುಗಿ ಆ ಬಿರುಗಾಳಿಯಂಥ ವ್ಯಕ್ತಿಯೊಂದಿಗೆ ಅದು ಹೇಗೆ ಹೊಂದಿಕೊಂಡಾಳು ಎಂಬ ಚಿಂತೆ ನನ್ನ ತಂದೆ-ತಾಯಿಗೆ ಇದ್ದೇ ಇತ್ತು.

ರಾಜನೀತಿ ಮಧೂಜಿಯ ಜೀವನದ ಒಂದು ಅತ್ಯಂತ ಮಹತ್ವಪೂರ್ಣ ಭಾಗ. ಹಾಗೆಂದ ಮಾತ್ರಕ್ಕೆ ಇತರ ಅಭಿರುಚಿಗಳೇ ಇರಲಿಲ್ಲವೆಂದೇನಲ್ಲ. ಆಂಗ್ಲ, ಮರಾಠಿ ಇಲ್ಲವೆ ಇನ್ನಿತರ ಭಾಷೆಯ ಉತ್ಕೃಷ್ಟ ಸಾಹಿತ್ಯ ಅವರಿಗೆ ಇಷ್ಟ. ಶಾಸ್ತ್ರೀಯ ಸಂಗೀತ, ಪಾಶ್ಚಾತ್ಯ ಸಂಗೀತ ಅಷ್ಟೇ ಅಲ್ಲ, ಸದಭಿರುಚಿಯ ಸಿನೆಮಾ ಸಂಗೀತದಲ್ಲೂ ಆಸಕ್ತಿ. ಅವರು ಭಾರತೀಯ ಶಾಸ್ತ್ರೀಯ ಸಂಗೀತದಲ್ಲಿ ಪರಿಣತಿಯನ್ನೂ ಪಡೆದಿದ್ದರೆಂದು ನನಗೆ ಆಮೇಲೆ ಗೊತ್ತಾಯಿತು. ಮನೆಯಲ್ಲಿದ್ದಾಗಲೆಲ್ಲ ಯಾವುದೋ ಒಂದು ರಾಗವನ್ನವರು ಗುಣುಗುಣಿಸುತ್ತಿದ್ದರು. ಸಂಗೀತ ಅವರಿಗೆ ಅಪ್ಪನಿಂದ ಬಂದ ಬಳುವಳಿ.

ಚದುರಂಗ ಅವರ ಪ್ರಿಯವಾದ ಆಟ. ಈಜು ಅಂದರೆ ಮುಗಿದೇ ಹೋಯಿತು. ಸಮುದ್ರದಲ್ಲಿ ಇಳಿದರೆ ಮುಗಿಯಿತು. ಪುಸ್ತಕ ಹಿಡಿದು ಕೂತರೂ ಹಾಗೆಯೇ. 'ರೋಮನ್ ಸಾಮ್ರಾಜ್ಯದ ಉದಯಾಸ್ತಮಾನ' (Rise and fall of the Roman Empire). 'ಚರ್ಚಿಲ್ಲರ ಯುದ್ಧ ಸ್ಮೃತಿಗಳು' (Churchill's war memoirs)ನಿಂದ ಖಗೋಳ ಶಾಸ್ತ್ರ, ಭೂಗರ್ಭಶಾಸ್ತ್ರದ ವರೆಗಿನ ವೈವಿಧ್ಯಮಯ ವಿಷಯಗಳ ಪುಸ್ತಕಗಳನ್ನವರು ಎಡೆಬಿಡದೇ ಓದುತ್ತಿದ್ದರು. ಕಾಳಿದಾಸ, ಶೇಕ್ಸ್‌ಪಿಯರರ ಕ್ಲಾಸಿಕ್‌ಗಳಿಂದ ಪೆರಿ ಮ್ಯಾಸನ್‌ವರೆಗೂ ಅವರಿಗೆ ಯಾವುದೇ ಒಂದೂ ವರ್ಜಿತವಲ್ಲ.

ನಮ್ಮ ಮದುವೆ ತೀರ ಸರಳವಾಗಿ ನಡೆಯಿತು. ಸಾವಿರಾರು ಜನರನ್ನು ಆಮಂತ್ರಿಸಿದರೆ ಮನೆಯವರಿಗೆಲ್ಲ ಸುಮ್ಮನೇ ಶ್ರಮವೆಂದುಕೊಂಡು, ಅದಕ್ಕೊಂದು ಸಮಾರಂಭದ ಸ್ವರೂಪ ನೀಡದೆ, ಮುಹೂರ್ತಕ್ಕೆ ಕೆಲ ನಿಮಿಷಗಳಿರುವಾಗ ಬಂದಿಳಿದರು ಮಧೂಜಿ. "ಅಲ್ಲಾ, ಇವತ್ತಾದ್ರೂ ನಿಮ್ಮನ್ನ ಮೆರವಣಿಗೆಯಲ್ಲಿ ಕರ್ಕೊಂಬರೋ ಅವಕಾಶಾ ಕೊಡತೀರೀಂತ ಅಂದ್ಕೊಂಡಿದ್ದೆ" ಅಂದರು ಅಪ್ಪ. "ಈ ಮೆರವಣಿಗೆ, ಎದುರುಗೊಳ್ಳುವುದು, ವರಪೂಜೆ-ವರದಕ್ಷಿಣೆ ಇತ್ಯಾದಿ ನಮ್ಮ ಮದುವೆಯಲ್ಲಿರಲೇಕೂಡದು ಅಂತ ಮೊದಲೇ ಹೇಳಿದ್ದೇನಲ್ಲ." ಮಧು ತಟ್ಟನೆ ನುಡಿದುಬಿಟ್ಟರು.

ಮನೆ ಹೂಡಿದರು. ಅದನ್ನು ಅಚ್ಚುಕಟ್ಟಾಗಿಡುವಲ್ಲಿ ಅವರಿಗೆ ಅದೆಂಥ ಆಸ್ಥೆ! ಚಿಕ್ಕ-ಪುಟ್ಟ ವಿಷಯದಿಂದ ಮುಖ್ಯ ಸಂಗತಿಯವರೆಗೂ ಅವರಿಗೆ ಗಮನ. ಅವರ ಅಮ್ಮ, ತಮ್ಮ-ತಂಗಿ ಕೆಲದಿನ ನಮ್ಮೊಂದಿಗಿದ್ದರು. ಹದಿನೇಳು-ಹದಿನೆಂಟನೆ ವಯಸ್ಸಿಗೇ ಕ್ರಾಂತಿ-ಗೀಂತಿ ಅಂತ ಮನೆಬಿಟ್ಟು ಹೋದ ಮಗ ಮದುವೆಯಾಗಿ ಸಂಸಾರ ಪ್ರಾರಂಭಿಸುತ್ತಾನೆಂಬ ಬಗ್ಗೆ ನಂಬಿಕೆಯೆ ಇರದಿದ್ದ ತಾಯಿಗೆ ಕಣ್ಣುತುಂಬಿಬಂದಿದ್ದವು. ಮಧೂಜಿಯ ತಂಗಿಯಂತೂ "ವೈನಿ, ಅಂತೂ ನಮ್ಮ ಸಂನ್ಯಾಸಿ ಅಣ್ಣನ್ನ ಗೃಹಸ್ಥನನ್ನಾಗಿ ಮಾಡಿದಿರಿ" ಅಂತ ಹೇಳಿದ್ದೇ ಹೇಳಿದ್ದು. ಆದರೆ ಈ ಗೃಹಸ್ಥ ಸದಾ ತನ್ನ ಗುರಿಸಾಧನೆಯಲ್ಲೇ ವ್ಯಸ್ತ. ಡಬ್ಬಿಗಳಿಗೆ ಬಣ್ಣ ಬಳಿಯುವುದರಿಂದ ತೋಟದ ಹೂಗಿಡಗಳಿಗೆ ನೀರೆರೆದು ಕಳೆ ತೆಗೆಯುವವರೆಗಿನ ಕೆಲಸಗಳನ್ನೆಲ್ಲ ಅವರೇ ಮಾಡುತ್ತಿದ್ದರಾದರೂ ಆಂದೋಲನಗಳ ಸಮಯದಲ್ಲಿ ಊಟ-ನಿದ್ರೆ, ಹೆಂಡತಿ-ಮನೆ ಎಲ್ಲವನ್ನೂ ಮರೆತುಬಿಡುತ್ತಿದ್ದರು. ಹಗಲಿರುಳೂ ಅದೇ ಚಿಂತನೆ. ಬರೆಯುವಿಕೆ-ಓದುವಿಕೆ, ಭಾಷಣ, ಚರ್ಚೆ, ಊರೂರು ಅಲೆತ, ಸೆರೆವಾಸ ಇದು ಮತ್ತೆ ಮತ್ತೆ ತಿರುಗುವ ಚಕ್ರ. ಗೃಹಸ್ಥ ಜೀವನ ಇವೆಲ್ಲದರ ನಡು

ವಿನ ಅಲ್ಪಾವಧಿಯ ವಿಶ್ರಾಮಕಾಲ ಅಷ್ಟೆ.

ರಾಜನೀತಿಯಲ್ಲಿ ಎಂಥ ವಿಶುದ್ಧ ಚಾರಿತ್ರ್ಯವನ್ನವರು ಬಯಸುವರೋ, ಆ ಚಾರಿತ್ರ್ಯವನ್ನು ಸ್ವಂತ ಜೀವನದಲ್ಲಿ ಅಳವಡಿಸಿಕೊಳ್ಳುವುದಕ್ಕಾಗಿ ಸದಾ ಪ್ರಯತ್ನಿಸುವವರು ಮಧು. ವ್ಯಕ್ತಿಗತ ಜೀವನದಲ್ಲಿ ಎಂದೂ ಹಣಕ್ಕೆ ಮಹತ್ವವನ್ನೇ ಕೊಡದವರು. ಮನೆ ತುಂಬ ಸರಳವಾಗಿರಬೇಕು. ಬೇಕೆಂದರೆ ಜನ ನಮ್ಮನ್ನು ಬಡವರೆಂದೂ ಕರೆಯಲಿ. ಅಷ್ಟಕ್ಕೂ ನಾವು ಬಡವರೇ ಎಂದೆನ್ನಬೇಕು. ಕೇರಳದ ಮುಖ್ಯಮಂತ್ರಿ ನಂಬೂದಿರಿಪಾದ್‌ರ ಭೇಟಿಗೆಂದು ಕೆಲ ಪತ್ರಕರ್ತರು ಬಂದರಂತೆ. ಆಗ ಮುಖ್ಯಮಂತ್ರಿ ನಿವಾಸದಲ್ಲಿ ಕುರ್ಚಿಗಳಿದದ್ದು ಒಂದೋ ಎರಡೋ. ಕೂಡಲೇ ನಂಬೂದಿರಿಪಾದ್ ತಾವೇ ಒಂದು ಜಮಖಾನೆಯನ್ನು ಹಾಸಿ ಪತ್ರಕರ್ತರಿಗೆ ಕೂಡಲು ಹೇಳಿ ತಾವೂ ಅದರ ಮೇಲೆ ಕೂತರಂತೆ. ಮಧೂಜಿ ಈ ಪ್ರಸಂಗವನ್ನು ಆಗಾಗ ನನ್ನೆದುರು ಪ್ರಸ್ತಾಪಿಸುತ್ತಿದ್ದರು. "ನಮ್ಮೆದುರು ಇಂಥ ಆದರ್ಶಗಳು ಇರಬೇಕು," ಎಂದೂ ಸೇರಿಸುತ್ತಿದ್ದರು. ಮನೆಗೆ ಯಾರೇ ಬರಲಿ ಎಲ್ಲರೊಂದಿಗೂ ಸಮಾನ ರೀತಿಯಲ್ಲಿ ವ್ಯವಹರಿಸಬೇಕು. ಮಂತ್ರಿಗಳಿಂದ ಹಿಡಿದು ಚಪರಾಸಿಯ ತನಕ, ವಿದೇಶಿ ಅತಿಥಿಯಿಂದ ಹಿಡಿದು ಅಂಚೆಪೇದೆಯವರೆಗೆ ಎಲ್ಲರೊಂದಿಗೂ ಸಮಭಾವದಿಂದಲೇ ನಡೆದುಕೊಳ್ಳಬೇಕು. ಒಂದೇ ರೀತಿಯ ಸ್ವಾಗತವಿರಬೇಕು. ಮುಂಗೇರ್ ಇಲ್ಲವೆ ಜಮಶೇಡ್‌ಪುರದಿಂದ ಯಾರಾದರೂ ಬಡರೈತ ದಿಲ್ಲಿಗೆ ಬಂದರೆ ಕಾಣಲು ಈ ಮನೆಗೆ ಬಂದ ಆತನಿಗೆ ಸ್ವತಃ ಈ ಸಾಂಸದನೇ ಚಹ-ಕಾಫಿ ಮಾಡಿಕೊಟ್ಟು, ಉಪಚರಿಸಬೇಕು.

ಮನೆಯ ಖರ್ಚು-ವೆಚ್ಚಗಳ ಬಗ್ಗೆ ಮಧೂಜಿಗೆ ಗೊತ್ತೇ ಇರುವುದಿಲ್ಲ. ಆರ್ಥಿಕ ವ್ಯವಹಾರ ಅದು ಮನೆಯದೇ ಆಗಿರಲಿ, ಅಥವಾ ಹೊರಗಿನದೇ ಇರಲಿ ಅವರ ತಲೆಗೇ ಹತ್ತುವುದಿಲ್ಲ. ಅದೆಲ್ಲ ನನ್ನ ಜವಾಬ್ದಾರಿ. ಮೊದಮೊದಲು ತಮ್ಮ ಪಕ್ಷದಿಂದ ಗೌರವಧನ ಪಡೆಯುತ್ತಿದ್ದ ಮಧು ತದನಂತರ ಹೊಸ ಪಕ್ಷದ ಆರ್ಥಿಕ ಸ್ಥಿತಿ ಅಷ್ಟಾಗಿ ಸರಿಯಾಗಿರದ ಕಾರಣ ಯಾವ ಕಾರ್ಯಕರ್ತನೂ ಗೌರವಧನ ಪಡೆಯಬಾರದು, ಹೊಟ್ಟೆ ಬಟ್ಟೆ ಕಟ್ಟಿ ದುಡಿಯಬೇಕು, ಕಾರ್ಮಿಕ ಸಂಘಟನೆಗಳಿಂದಲೂ ಧನ ಸಂಗ್ರಹ ಮಾಡಕೂಡದು ಎಂಬ ತತ್ವ ಅನುಸರಿಸತೊಡಗಿದರು. ಪತ್ರಿಕೆಗಳಿಗೆ ಲೇಖನ ಬರೆದೋ, ಸ್ನೇಹಿತರು ಪ್ರೇಮದಿಂದ ಕೊಡುವ ಧನಸಹಾಯದಿಂದಲೋ ಅವರು ತಮ್ಮ ಹೊರಗಿನ ಖರ್ಚುವೆಚ್ಚ ತೂಗಿಸಿಕೊಳ್ಳುವರು. "ನೀನು ನನಗೆಂದೂ ಮನೆಯ ಹಣಕಾಸಿನ ಚಿಂತೆಯನ್ನೇ ತಲೆಗೆ ಕಟ್ಟಿಲ್ಲ. ಒಂದು ದಿನವೂ ಇದಕ್ಕೆ ದುಡ್ಡಿಲ್ಲ, ಅದಕ್ಕೆ ಕಾಸು ಬೇಕು ಎಂದುದಿಲ್ಲ. ನನ್ನ ನಿಷ್ಕಳಂಕ ರಾಜಕೀಯ ಜೀವನದ ಶತಶಃ ಶ್ರೇಯ ನಿನಗೇ ಸೇರಬೇಕು" ಎಂಬುದು ಅವರು ಪದೇ ಪದೇ ಹೇಳುವ ಮಾತು. ಅವರ ಕಾರ್ಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ಸಹಕಾರಿಯಾಗುವ ಪ್ರಯತ್ನ ನನ್ನದು. ಅವರ ಭಾರವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಬೇಕೆಂಬುದೇ ನನ್ನ ಉದ್ದೇಶ. ಇದು ಮಧು ಮತ್ತು ಅವರ ಆಪ್ತ ಮಿತ್ರವರ್ಗ ಅರಿತ ಸಂಗತಿ.

('ವೀಣಾ' ಮರಾಠಿ ಪತ್ರಿಕೆಯಿಂದ ಸಾಭಾರ)

---

**ದ**ಕ್ಷಿಣ ಆಫ್ರಿಕದ ಶ್ರೀಮಂತನೊಬ್ಬ ಬಹುದಿನಗಳವರೆಗೆ ಅದೇನೋ ಚಿಂತೆಯಲ್ಲೇ ಮುಳುಗಿದ್ದ. ಕೊನೆಗೊಮ್ಮೆ ಆತ್ಮಹತ್ಯೆ ಮಾಡಿಕೊಂಡು ಆ ಚಿಂತೆಗೆ ಪೂರ್ಣವಿರಾಮ ಹಾಕಬೇಕೆಂದುಕೊಂಡ. ಕಾರಿನಲ್ಲಿ ಕೂತ. 'ಕೊನೆಯ ಸಂದೇಶ' ಬರೆಯಲಾರಂಭಿಸಿದ. ಆಗ ಇದ್ದಕಿದ್ದಂತೆ ಕಳ್ಳನೊಬ್ಬ ಬಂದು ಆತನನ್ನು ಹೊರಗೆಳೆದು ಜೇಬಿನಲ್ಲಿದ್ದ ೭೦ ಡಾಲರುಗಳನ್ನು ಲಪಟಾಯಿಸಿಕೊಂಡು ಓಡಿದ.

ಆತ್ಮಹತ್ಯೆಯ ವಿಚಾರ ಮರೆತ ಆ ವ್ಯಕ್ತಿ ಕಳ್ಳನನ್ನು ಬೆಂಬತ್ತಿದ. ಕಳ್ಳ ಸಿಗಲಿಲ್ಲ. ಆದರೆ ಆತನನ್ನು ಇಂದಿಲ್ಲ ನಾಳೆ ಹಿಡಿದೇ ತೀರುವೆನೆಂಬ ಸಂಕಲ್ಪದೊಂದಿಗೆ ಈತ ಕಾರನ್ನೇರಿ ಮನೆಗೆ ನಡೆದ.








ಸುಮಾರು ಎರಡು ವರ್ಷಗಳ ಹಿಂದಿನ ಮಾತು. ಬೇಸಿಗೆಯ ದಿನಗಳಾದ್ದುದರಿಂದ ಓಣಿಯಲ್ಲಿಯ ಗೆಳೆಯರೆಲ್ಲರೂ ಸೇರಿ ಅಂಗಳದಲ್ಲಿನ ಕಟ್ಟೆಯ ಮೇಲೆ ಮಲಗುತ್ತಿದ್ದೆವು. ರಾತ್ರಿ ಹನ್ನೆರಡರವರೆಗೆ ಹರಟೆ ಹೊಡೆಯುತ್ತಾ ಕೂಡುತ್ತಿದ್ದರಿಂದ ಬೆಳಿಗ್ಗೆ ಏಳರವರೆಗೂ ಎಚ್ಚರವಾಗುತ್ತಿರಲಿಲ್ಲ. ಮನೆಯ ಮುಂದಿನ ಬಯಲಿನಲ್ಲಿ ಗಿಡಗಂಟೆಗಳು ದಟ್ಟವಾಗಿ ಬೆಳೆದಿದ್ದವು.

ಒಂದು ದಿನ ನಸುಕಿನ ನಾಲ್ಕು ಗಂಟೆಗೆ ಇದ್ದಕ್ಕಿದ್ದಂತೆ ಐದಾರು ಕಾಗೆಗಳು ಬಂದು ಬಯಲಿನಲ್ಲಿ ಬೆಳೆದಿದ್ದ ಗಿಡಗಂಟೆಗಳ ಮೇಲೆ ಒಂದೇ ಸಮನೆ ಕೂಗುತ್ತ ಸುತ್ತತೊಡಗಿದವು. ಸ್ವಲ್ಪ ಹೊತ್ತಿನಲ್ಲಿಯೇ ಆ ಸ್ಥಳದಲ್ಲಿ ಇಪ್ಪತ್ತು ಇಪ್ಪತ್ತೈದು ಕಾಗೆಗಳ ಹಿಂಡೇ ಬಂದು ಕೂಗತೊಡಗಿದಾಗ ನಮಗೆ ಮಲಗಲಾಗಲಿಲ್ಲ. ಎಲ್ಲ ಗೆಳೆಯರೂ ಕಾಗೆಗಳನ್ನು ಶಪಿಸುತ್ತ ಎದ್ದು ಅವುಗಳನ್ನು ಓಡಿಸಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೊನೆಗೆ ಚೆನ್ನಾಗಿ ಬೆಳಕಾದಾಗ ಒಂದೊಂದಾಗಿ ಕಾಗೆಗಳೆಲ್ಲವೂ ಹಾರಿ ಹೋದವು. ಈ ಕಾಗೆಗಳು ಆ ಪೊದೆಯ ಮೇಲೆ ಏಕೆ ಸುತ್ತುತ್ತಿವೆ? ಬಹುಶಃ ಅಲ್ಲಿ ಅವುಗಳ ಆಹಾರವೇನಾದರೂ ಇರಬಹುದೇ? ಎಂಬ ಕುತೂಹಲದಿಂದ ದಟ್ಟವಾದ ಪೊದರುಗಳಲ್ಲಿ ಇಣುಕಿ ನೋಡಿದಾಗ ನಾನು ಕಂಡ ದೃಶ್ಯ ಮನ ಮಿಡಿಯುವಂತಿತ್ತು. ರಕ್ತ ಸಿಕ್ತವಾದಂತಹ ಸ್ಥಿತಿಯಲ್ಲಿ ಒಂದು ಕಾಗೆ ಸತ್ತು ಬಿದ್ದಿತ್ತು.

• ಸಂತೋಷ ಶ್ರೀ ಕೋಟೆಣ್ಣವರ

ಸಾವಿರದ ಒಂಬೈನೂರ ಐವತ್ತರ ದಶಕದಲ್ಲಿ ಕೃಷಿಕರಿಗೆ ಸಾಲ ಕೊಡುವುದು ಬ್ಯಾಂಕುಗಳ ಕರ್ತವ್ಯವೆಂದು ಹೇಳಲ್ಪಟ್ಟಿರಲಿಲ್ಲ. ಹಲವು ವರ್ಷಗಳು ಕಳೆಯುತ್ತಲೂ, ಪರಿಸ್ಥಿತಿ ಬದಲಾಗಿ ಎಲ್ಲಾ ಬ್ಯಾಂಕುಗಳು ಕೃಷಿವಿಭಾಗಗಳನ್ನು ಬೇರ್ಪಡಿಸಿ ಕೃಷಿ ಸಾಲಗಳ ಅನುಭವವನ್ನು ಪಡೆಯಲು ಮುಂದಾದವು.

ಒಂದು ಸಣ್ಣ ಬ್ಯಾಂಕಿನಲ್ಲಿ ಅಧಿಕಾರಿಯಾಗಿದ್ದ ನಾನು ದೊಡ್ಡ ಒಂದು ಬ್ಯಾಂಕಿನ ಹೊಸ ಕೃಷಿವಿಭಾಗದಲ್ಲಿ ಮೇಲಿನ ಹುದ್ದೆಗೆ ಸೇರಲು ಸಂದರ್ಶನಕ್ಕೆ ಹಾಜರಾಗಿದ್ದೆ. ಮಾಮೂಲು ಪ್ರಶ್ನೆಗಳ ನಂತರ, ನಾನು ಕೆಲವು ವರ್ಷಗಳಿಂದ ಬ್ಯಾಂಕಿನ ಮ್ಯಾನೇಜರ್ ಆಗಿ ಕೆಲಸ ಮಾಡುತ್ತಿದ್ದುದನ್ನು ಗಮನಿಸಿ, ಸಂದರ್ಶನ ನಡೆಸುವವರು ಕೇಳಿದರು: "ಕೃಷಿಕರು ಬಂದು ಸಾಲ ಕೇಳಿದರೆ, ನೀವು ಅವರಿಗೆ ಅಗತ್ಯವಿದ್ದಷ್ಟು ಕೊಡುವಿರಾ ಅಥವಾ ಇದುವರೆಗಿನ ನೀತಿಯಂತೆ, ಕೃಷಿಸಾಲಗಳು ಬ್ಯಾಂಕುಗಳಿಗೆ ಸೇರಿದವುಗಳಲ್ಲವೆಂದು ತಿಳಿಯುವಿರಾ?" ಹಾವು ಮೆಟ್ಟಿದವನಂತೆ, ನನ್ನ ಬಾಯಿಯಿಂದ ಬಂತು, "ಇನ್ನು ನನ್ನ ಜನ್ಮದಲ್ಲಿ ಕೃಷಿಕರಿಗೆ ಸಾಲ ಕೊಡುವುದಿಲ್ಲ." ಅವರಿಗೆ ಆಶ್ಚರ್ಯ. "ನಮ್ಮ ಕೃಷಿವಿಭಾಗದ ಹುದ್ದೆಗೆ ಸೇರಲು ಬಂದಿದ್ದೀರಿ. ಕೃಷಿ ಸಾಲವೆಂದರೆ ಹೆದರಿಕೆಯೇ? ಹಾಗಿದ್ದರೆ ನಿಮ್ಮನ್ನು ಹೇಗೆ ಕೆಲಸಕ್ಕೆ ಆರಿಸಿಕೊಳ್ಳುವುದು?"

ಆಗ ನಾನು ಮಾಡಿದ ತಪ್ಪಿನ ಅರಿವಾಯಿತು. ಹೇಗೂ ಕೆಲಸ ಕೆಟ್ಟಿತೆಂದು ಹೇಳಿದೆ: "ಯಾವ ಬ್ಯಾಂಕೂ ಕೃಷಿಸಾಲ ಕೊಡದ ಕಾಲದಲ್ಲಿ ನಾನು ಆದರ್ಶಕ್ಕೆ ಗುರಿಯಾಗಿ ಕೆಲವು ಕೃಷಿಕರಿಗೆ ಧಾನ್ಯದ ಮೂಟೆಗಳ ಆಧಾರದ ಮೇಲೆ ಸಾಲ ಕೊಟ್ಟು

ಹೆಡ್ ಆಫೀಸಿನವರ ಅಸಂತೋಷಕ್ಕೆ ಗುರಿಯಾದೆ. ಸಾಲ ಪಡೆದ ಆ ಕೃಷಿಕರು ಒತ್ತೆಯಾಗಿಟ್ಟ ಧಾನ್ಯದ ಬೆಲೆ ಬೇಕಾದಷ್ಟು ಹೆಚ್ಚಿದರೂ, ಅದನ್ನು ಮಾರದೆ, ಸಾಲಗಳ ಅವಧಿ ಮೀರಿ ನನ್ನನ್ನು ಕಷ್ಟದಲ್ಲಿ ಹಾಕಿದರು. ಕೃಷಿಸಾಲಗಳ ಅವಧಿ ಮೀರಿದುದಕ್ಕಾಗಿ ಮೇಲಧಿಕಾರಿಗಳು ನನ್ನ ಮೇಲೆ ಕ್ರಮ ನಡೆಸುವ ಪ್ರಸಂಗ. ಆಗ ಅಕಸ್ಮಾತ್, ಆ ಕೃಷಿಕರು ಧಾನ್ಯ ಮಾರದೇ ಇದ್ದುದಕ್ಕೆ ಕಾರಣ ತಿಳಿಯಿತು. ಅವರು ಒಂದು ಗುಡಿಯ ಪೂಜಾರಪ್ಪನೊಡನೆ ಕಣಿ ಕೇಳಿ, ಧಾನ್ಯದ ಬೆಲೆ ಇನ್ನೂ ಏರುವುದೆಂದು ಕಣ್ಣುಮುಚ್ಚಿ ಕುಳಿತಿದ್ದರಂತೆ. ಪೂಜಾರಪ್ಪನೊಡನೆ ಸಂಧಾನ ನಡೆಸಿ, ಅವರಿಗೆ ಹೇಳಿಸಿ, ಸಾಲ ವಾಪಸು ಪಡೆಯಲು, ನಾನು ಪುನರ್ಜನ್ಮ ಪಡೆದೆ. ಇನ್ನು ಕೃಷಿಸಾಲಗಳ ಗೋಜಿಗೆ ಹೋಗುವುದಿಲ್ಲವೆಂದು ಆಣೆ ಹಾಕಿದ್ದೇನೆ," ಎಂದು ಹೇಳಿ ಎದ್ದು ಬಂದೆ. ಆಶ್ಚರ್ಯವೆಂದರೆ, ಆ ಹುದ್ದೆಗೆ ನಾನು ಆರಿಸಲ್ಪಟ್ಟು ಇಪ್ಪತ್ತೈದು ವರ್ಷ ಆ ದೊಡ್ಡ ಬ್ಯಾಂಕಿನಲ್ಲಿ ಸೇವೆ ಸಲ್ಲಿಸಿದೆ. ಮುಂದೊಂದು ದಿನ ತಿಳಿಯಿತು. ನನ್ನ ಸಂದರ್ಶನ ನಡೆಸಿದ ಅಧಿಕಾರಿಗಳು ನನ್ನ ಉತ್ತರ ಕೇಳಿ ತುಂಬಾ ನಕ್ಕು, "ಪರವಾಗಿಲ್ಲ, ಇದ್ದುದನ್ನು ಇದ್ದಂತೆಯೆ ಹೇಳಿದ್ದಾರೆ," ಎಂದಿದ್ದರಂತೆ.

**• ಯು. ಎಸ್. ರಾವ್**

ಪ್ರತಿ ಭಾನುವಾರದಂತೆ ಈ ಭಾನುವಾರವೂ ನನ್ನವರ ಸ್ನೇಹಿತ ಹಾಗೂ ಆತನ ಹೆಂಡತಿ ಮತ್ತು ಅವರ ಒಬ್ಬನೇ ಮಗ ಐದು ವರ್ಷದ ಅಭಿಷೇಕ ನಮ್ಮ ಮನೆಗೆ ಬಂದರು. ಒಂದು ಭಾನುವಾರ ಅವರು ನಮ್ಮ ಮನೆಗೆ ಬಂದರೆ ಮುಂದಿನ ಭಾನುವಾರ ನಾವು ಅವರ ಮನೆಗೆ ಹೋಗುವುದು ವಾಡಿಕೆ. ಇಷ್ಟಾಗಿ ಆ ಗಂಡ-ಹೆಂಡತಿ ಇಬ್ಬರೂ ಕೆಲಸಕ್ಕೆ ಹೋಗುವವರಾಗಿದ್ದರು.

ಹೀಗೊಮ್ಮೆ ನಮ್ಮ ಹರಟೆ ಸಾಗುತ್ತಿದ್ದಂತೆಯೇ ಅವರು ತಮ್ಮ ಮಗನ ಆಟಪಾಟಗಳನ್ನು ವರ್ಣಿಸತೊಡಗಿದರು. ಆ ಮಗನಾದರೂ ಅದೆಂಥಾ ಚೂಟಿ ಅಂತೀರಾ? ಅವನು ಕೇಳುವುದು ಮುದ್ದು ಮುದ್ದಾದ ಪುಟ್ಟ ಪುಟ್ಟ ಪ್ರಶ್ನೆಗಳೆನ್ನಿಸಿದರೂ, ಒಮ್ಮೊಮ್ಮೆ ಉತ್ತರಕೊಡಲು ಆಗುತ್ತಿರಲೇಇಲ್ಲ. ಮಗನ ಬುದ್ಧಿವಂತಿಕೆಯನ್ನು ಎಷ್ಟು ವರ್ಣಿಸಿದರೂ ಸಾಲದು. ಅವನ ತಂದೆ ತಾಯಿಗಳಿಗೆ, "ನಿನ್ನೆ ನಮ್ಮ ಅಭಿ ಏನು ಕೇಳಿದ ಗೊತ್ತಾ...?" ಎಂದರು ಇವರ ಸ್ನೇಹಿತರು.

"ಏನು ಕೇಳಿದ....?" ಎಂದು ನಾನೂ ನನ್ನ ಯಜಮಾನರೂ ಒಟ್ಟಿಗೇ ಕೇಳಿದೆವು.

ಆ ಮಗು ಹೀಗೆ ಕೇಳಿತ್ತು:

"ಅಮ್ಮಾ-ಅಪ್ಪಾ, ನಾನು ಚಿಕ್ಕವನಿದ್ದಾಗ ನೀವಿಬ್ರೂ ಆಫೀಸಿಗೆ ಹೊಗ್ತಾ ಇದ್ದೀರಾ, ನಾನು ದೊಡ್ಡವನಾಗಿ ಆಫೀಸಿಗೆ ಹೋಗೋಕೆ ಸುರು ಮಾಡಿದ್ಮೇಲೆ, ನೀವೇನು ಮಾಡ್ತೀರಾ....?"

ಇವರ ಸ್ನೇಹಿತರು ಈ ರೀತಿ ಉತ್ತರಿಸಿದರಂತೆ.

"ನೀನು ದೊಡ್ಡವನಾಗಿ ಆಫೀಸಿಗೆ ಹೋಗ್ತೀರೋವಾಗ, ನಾನು ಹಾಗೂ ನಿನ್ನಮ್ಮ ಮುದುಕ-ಮುದುಕಿ ಆಗಿ ಮನೇಲಿ ಇರ್ತೀವಿ..."

"ಮುದುಕರೂ ಅಂದ್ರೆ ಅಜ್ಜೀ ತರಾನಾ?...."

"ಹೌದು, ಅಜ್ಜ-ಅಜ್ಜಿ ತರಾ...." ಎಂದು ತಂದೆ ಉತ್ತರಿಸಿದರಂತೆ.

ಪುಟ್ಟ ಮಗು ತಂದೆಯ ಮಾತಿಗೆ ಮುಖ ಸಿಂಡರಿಸಿ, "ಛೀ, ಛೀ, ಛೀ.... ಅಜ್ಜ-ಅಜ್ಜಿ ತರಾನೇ? ನೋಡೋದಕ್ಕೆ ಅಸಹ್ಯ; ಬಿಳೀ ಕೂದ್ಲು, ಬೊಚ್ಚು ಬಾಯಿ, ನೋಡೋದಕ್ಕೆ ಚೆನ್ನಾಗಿರೊಲ್ಲಪ್ಪಾ.... ನನ್ನಿಂದಂತೂ ನೋಡೋಕಾಗೋದಿಲ್ಲ ಸೀ.... ಸೀ..... ಸೀ..... ಅಮ್ಮ-ಅಪ್ಪ, ನೀವಿಬ್ರೂ ಮುದುಕರಾಗೋದೇ ಬೇಡ...."

ಹೀಗೆ ಆ ದಂಪತಿಗಳು ಮಗನ ಬುದ್ಧಿವಂತಿಕೆಯ ಮಾತುಗಳನ್ನು ನಮ್ಮೆದುರು ಹೊಗಳುತ್ತ ಹೆಮ್ಮೆಪಟ್ಟುಕೊಳ್ಳುತ್ತಿದ್ದರು.

ಮುಗ್ಧ ಮಗುವಿನ ಮಾತಿಗೆ ದೇವರು 'ಅಸ್ತು' ಅಂದುಬಿಟ್ಟನೋ ಏನೋ, ಈಗ್ಗೆ ಸ್ವಲ್ಪ ದಿನಗಳ ಹಿಂದೆ, ನನ್ನವರ ಸ್ನೇಹಿತ ಹಾಗೂ ಆತನ ಪತ್ನಿ ಸ್ಕೂಟರ್ ಆಕ್ಸಿಡೆಂಟ್‌ನಲ್ಲಿ ತೀರಿಕೊಂಡರು.

**• ಭಾರತಿ ಕುಲಕರ್ಣಿ**

ಮಹಾಪಂಡಿತ ರಾಹುಲ ಸಾಂಕೃತ್ಯಾಯನರು 'ಜೀವನದಲ್ಲಿ ಅತಿ ಶ್ರೇಷ್ಠವಾದುದು ಸಂಚಾರ'ವೆಂದು ಹೇಳಿರುವರು. ಅಷ್ಟೇ ಅಲ್ಲ, ಅವರು ತಮ್ಮ ಜೀವಮಾನದಲ್ಲಿ ಹಲವಾರು ಕಡೆ ಸಂಚರಿಸಿ ವಿವಿಧ ರೀತಿಯ ಅನುಭವಗಳನ್ನು ಪಡೆದು ಅವುಗಳನ್ನು ಓದುಗರಿಗಾಗಿ ಬರೆದಿದ್ದಾರೆ.

ರಾಹುಲರಂತೆ ನಾನು ಪ್ರಪಂಚ ಪಯಣಿಗಳಾಗದಿದ್ದರೂ ಸಂದರ್ಭ ಒದಗಿಬಂದಾಗ ಅವುಗಳನ್ನು ಉಪಯೋಗಿಸಿಕೊಳ್ಳದೆ ಇಲ್ಲ. ಹೀಗಾಗಿ ನಾನು ನಮ್ಮ ದೇಶದ ಉತ್ತರದ ಕಾಶ್ಮೀರ ಕಣಿವೆಯ ಕೆಲವು ಸುಂದರ ಪ್ರದೇಶಗಳನ್ನಲ್ಲದೆ ದಕ್ಷಿಣದ ಕನ್ಯಾಕುಮಾರಿ ಮತ್ತು ರಾಮೇಶ್ವರಂ ಹಾಗೂ ದೇಶದ ಅನೇಕ ಚಾರಿತ್ರಿಕ ಪ್ರದೇಶಗಳಲ್ಲೂ ಈಜಿಪ್ಟ್‌ನ ಕೈರೋ, ಯುರೋಪಿನ ಕೆಲವು ದೇಶಗಳ ನಗರಗಳಲ್ಲೂ ಲಂಡನ್ನಿನಲ್ಲೂ ಸಂಚರಿಸಿದ್ದೇನೆ.

ಈಗ ಹೇಳಲಿರುವ ವಿಷಯ ೧೯೭೭ರಲ್ಲಿ ನಡೆದದ್ದು. ಅದು ಸಂಭವಿಸಿದ್ದು ಹೀಗೆ: ನನ್ನ ಸೋದರ ಅತ್ತಿಗೆ, ನಿವೃತ್ತರಾದ ಪ್ರೊಫೆಸರರಿಗೆ ವಿದೇಶ ಸಂಚಾರದ ಗೀಳು ಹತ್ತಿತು. ಆದರೆ ಅವರು ಒಬ್ಬರೇ ಹೊರಡಲು ತಯಾರಿರಲಿಲ್ಲ. ಆದ್ದರಿಂದ ಅವರು ತಮ್ಮ ಜತೆ ಮೈಸೂರಿನಲ್ಲಿ ಕೆಲಸ ಮಾಡಿದ್ದ ಹಲವಾರು ಸ್ನೇಹಿತೆಯರಲ್ಲಿ ಕೆಲವರನ್ನು, "ನನ್ನೊಡನೆ ವಿದೇಶ ಸಂಚಾರಕ್ಕೆ ಬರುತ್ತೀರಾ?" ಎಂದು ಕೇಳಿದಾಗ, ಮೈಸೂರಿನಲ್ಲೇ ಹುಟ್ಟಿ,





# ಹೀಗೊಂದು ವಿದೇಶ ಸಂಚಾರ

ಪ್ರವಾಸ




● ಎಸ್.ಜೆ. ಲಲಿತ



ಇಪ್ಪತ್ತಾರು ದಿನಗಳಲ್ಲಿ ಯುರೋಪಿನ ಏಳು ದೇಶಗಳಲ್ಲಿ ಸುತ್ತಾಡಿ, ಅಲ್ಲಿಯ ಜನಜೀವನವನ್ನು ಅತಿ ಹತ್ತಿರದಿಂದ ಕಂಡು, ಅವರೊಂದಿಗೆ ಅಲ್ಪಕಾಲವಾದರೂ ಬೆರೆಯುವ ಈ ಅವಕಾಶ ಅಯಾಚಿತವಾಗಿ ಬಂತು.





ಬೆಳೆದು, ಓದಿ, ಉದ್ಯೋಗ ಮಾಡಿ, ನಿವೃತ್ತರಾಗಿ, ಸುಖವಾಗಿ, ಅನುಕೂಲವಾಗಿ ಇದ್ದರು ಅಷ್ಟೇ ಅಲ್ಲ, ಸಂಸಾರ ತಾಪತ್ರಯ ಇಲ್ಲದವರು ಕೂಡ ಈ ಸಂಚಾರ ಕೈಗೊಳ್ಳಲು ತಯಾರಾಗಲೇ ಇಲ್ಲ. ದೊಡ್ಡ ಮೊಬಲಗನ್ನು ಈ ರೀತಿ ಖರ್ಚು ಮಾಡಲು ಜನ ಹಿಂಜರಿಯುತ್ತಾರೆ ನಿಜ. ಆದರೆ ಈಗಿನ ಅನೇಕ ಮಹಿಳೆಯರು- ಅಂದರೆ ನೌಕರಿಯಲ್ಲಿ ಇರುವವರು ಮತ್ತು ಬೇರೆ ರೀತಿಯಲ್ಲಿ ಅಂದರೆ ಸ್ವಂತ ಉದ್ಯೋಗ ಮಾಡಿ ಹಣ ಸಂಪಾದಿಸುವವರು ಸಹ- ತಾವು ಗಳಿಸಿದ ಹೆಚ್ಚಿನ ಅಂಶವನ್ನು ಆಭರಣಗಳಿಗೂ ಬೆಲೆಬಾಳುವ ಬಟ್ಟೆಬರೆ ಹಾಗೂ ಆಧುನಿಕ ವಿವಿಧ ಗೃಹೋಪಕರಣಗಳಿಗೂ ಅವುಗಳು ಅವಶ್ಯ ಇದೆಯೋ ಇಲ್ಲವೋ ಎನ್ನುವುದನ್ನು ಸಾರಾಸಾರವಾಗಿ ಯೋಚಿಸದೆ ಧಾರಾಳವಾಗಿ ಖರ್ಚು ಮಾಡುತ್ತಾರೆಯೇ ವಿನಾ ಪ್ರವಾಸಕ್ಕೆ ಹಣ ಖರ್ಚು ಮಾಡಲು ಹಿಂದೆಮುಂದೆ ನೋಡುತ್ತಾರೆ. ಅವರಿಗೆ ಸಂಚಾರದ ಪ್ರಯೋಜನದ ಬಗ್ಗೆ ಮಾಹಿತಿಯೇ ಇಲ್ಲವೇನೋ ಎಂದೆನಿಸುತ್ತದೆ.

ತಮ್ಮ ಮೈಸೂರಿನ ಸ್ನೇಹಿತೆಯರನ್ನು ಹೀಗೆ ವಿಚಾರಿಸಿ ನಿರಾಶರಾದ ನನ್ನ ಅತ್ತಿಗೆ ಬೆಂಗಳೂರಿಗೆ ಬಂದಾಗ ನನ್ನನ್ನು, "ನೋಡು, ನನ್ನೊಡನೆ ಸಂಚಾರಕ್ಕೆ ಹೊರಡಲು ಸ್ನೇಹಿತೆಯರು ಯಾರೂ ತಯಾರಿಲ್ಲ. ನೀನು ಬರುತ್ತೀಯಾ? ನನಗೆ ಒಬ್ಬಳೇ ಹೋಗಲು ಮನಸ್ಸಿಲ್ಲ," ಎಂದು ಕೇಳಿದರು. ಅವರು ಕೇಳಿದ್ದೇ ತಡ, ನಾನು ಹಿಂದುಮುಂದು ವಿಚಾರಿಸದೆ ಖರ್ಚಿನ ವಿಷಯವನ್ನು ಕೂಡ ಪ್ರಸ್ತಾಪಿಸದೆ, "ಬರಲು ತಯಾರಾಗಿದ್ದೇನೆ," ಎಂದು ಹೇಳಿಯೇಬಿಟ್ಟೆ. ಇದರಿಂದ ಅತ್ತಿಗೆಯವರಿಗೆ ತುಂಬಾ ಸಂತೋಷವಾಯಿತು.

ಆಗ ನಾನು ಜಾಲಹಳ್ಳಿಯ ವಾಯುಸೇನಾ ಸ್ಟೇಶನ್ನಿನಲ್ಲಿ ಉದ್ಯೋಗದಲ್ಲಿದ್ದೆ. ನನಗೆ ಈ ಪ್ರವಾಸಕ್ಕೆ ಆಫೀಸಿನಿಂದ ಅಂದರೆ ದಿಲ್ಲಿಯಿಂದ ಅನುಮತಿ ದೊರೆಯಬೇಕಿತ್ತು. ಮೇಲಿನವರಿಗೆ ವಿಷಯವನ್ನು ತಿಳಿಸದೆ ಹೋಗಬಹುದಿತ್ತೇನೋ ನಿಜ. ಆದರೆ ನಾನು ಅದಕ್ಕೆ ತಯಾರಿರಲಿಲ್ಲ. ಈ ಅನುಮತಿ ಪಡೆಯಲು ಪ್ರವಾಸ ಕೈಗೊಳ್ಳುವ ಸ್ಥಳಗಳ ಹೆಸರುಗಳನ್ನು ತಾರೀಖು ಸಹಿತ ನಮೂದಿಸಿ ಐದು ಪ್ರತಿಗಳಲ್ಲಿ ಕಳುಹಿಸಬೇಕೆಂದಿತ್ತು. ಎಲ್ಲರಿಗೂ ತಿಳಿದಿರುವಂತೆ ಆಫೀಸಿನಲ್ಲಿ ಪೇಪರುಗಳು ಮೇಲೆ ಹೋಗುವುದೂ ಉತ್ತರ ಬರುವುದೂ ಬಹು ನಿಧಾನವಾಗಿಯೇ. ನಮ್ಮ ಆಫೀಸ್ ಕೂಡ ಇದಕ್ಕೆ ಹೊರತಾಗಿರಲಿಲ್ಲ. ಆದರೂ ಪ್ರವಾಸ ಕೈಗೊಳ್ಳಲೇಬೇಕೆಂಬ ಇಚ್ಛೆ ಪ್ರಬಲವಾಗಿದ್ದರಿಂದ ಇದಕ್ಕಾಗಿ ಪ್ರಯತ್ನ ಮಾಡತೊಡಗಿದೆ. ನಿರೀಕ್ಷಣೆಯ ಪತ್ರ ಬೆಂಗಳೂರಿನಲ್ಲೇ ದೊರೆಯುವುದೆಂದಾದ್ದರಿಂದ ಅದನ್ನು ದೊರಕಿಸುವಲ್ಲಿ ತೊಂದರೆಯೇನೂ ಆಗಲಿಲ್ಲ. ಆದರೆ ದಿಲ್ಲಿಯಲ್ಲಿರುವ ವಾಯುಸೇನೆಯ ಮುಖ್ಯ ಕಾರ್ಯಾಲಯದಿಂದ ಬರಬೇಕಾಗಿದ್ದ ಅನುಮತಿಗಾಗಿ ನಾನು ಜೂನ್ ೭ರಲ್ಲಿ ಅರ್ಜಿ ಬರೆದುಕೊಟ್ಟರೂ ಆಗಸ್ಟ್ ಮುಗಿಯುತ್ತ ಬಂದರೂ ಬರಲಿಲ್ಲ. ಟ್ರಾವೆಲ್ ಕಾರ್ಪೊರೇಶನ್ ಇಂಡಿಯಾ ಅವರ ಆ ವರ್ಷದ ಕೊನೆಯದಾದ ವಿದೇಶ ಪ್ರವಾಸ. ೮-೯-೭೮ರಂದು ಬೊಂಬಾಯಿಯಿಂದ ಹೊರಡುವ ಕಂಡಕ್ಟಡ್ ಟೂರ್‌ಗೆ ಹೊರಡುತ್ತೇನೆಂದು ನಾನು ಆ ಕಂಪನಿಗೆ ರೂಪಾಯಿ ೧೪ ಸಾವಿರ ಮತ್ತು ಚಿಲ್ಲರೆ ಹಣವನ್ನು ಕೊಟ್ಟು ಆಗ ಬೇಕಾದಂತಹ ಇನ್ನಾಕ್ಯುಲೇಶನ್ ತೆಗೆದುಕೊಂಡು, ಆರೋಗ್ಯ ಪ್ರಮಾಣಪತ್ರ ಮೊದಲಾದವುಗಳನ್ನು ಜೊತೆಮಾಡಿಕೊಂಡು ಅತ್ತಿಗೆಯವರೊಡನೆ ಸಂಚಾರಕ್ಕೆ ಹೊರಟೇಬಿಟ್ಟೆ.

ಅದು ಇಪ್ಪತ್ತಾರು ದಿನಗಳ ಪ್ರವಾಸ. ಕೈರೋ ಮತ್ತು ಲಂಡನ್ ಸೇರಿ ಯುರೋಪಿನ ಏಳು ದೇಶಗಳ ಮುಖ್ಯ ನಗರಗಳು ಹಾಗೂ ಅವುಗಳಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನು ನಾವು ನೋಡುವವರಿದ್ದೆವು. ೫-೯-೭೮ರವರೆಗೂ ನನಗೆ ಅನುಮತಿ ಪತ್ರ ಬರಲೇ ಇಲ್ಲ. ನಾನು ನನ್ನ ಆತಂಕವನ್ನು ನಮ್ಮ ಸೆಕ್ಷನ್ ಕಮಾಂಡರ್ ಅವರಿಗೆ ಹೇಳಿಕೊಂಡೆ. ನನಗಾದ ತೊಂದರೆಯನ್ನು ಅವರು ಅರ್ಥಮಾಡಿಕೊಂಡು ಸ್ಟೇಶನ್ ಕಮಾಂಡರ್‌ರೊಡನೆ ಮಾತನಾಡಿ ನನಗೆ ವಿದೇಶ ಸಂಚಾರಕ್ಕೆ ಮೌಖಿಕ ಅನುಮತಿಯಿತ್ತು ನನ್ನ ದುಗುಡವನ್ನು ಹೋಗಲಾಡಿಸಿದರು.

ಸಪ್ಟಂಬರ್ ೬ರಂದು ನಾವು ಇಬ್ಬರು ಬೆಂಗಳೂರಿನಿಂದ ಬೊಂಬಾಯಿಗೆ ಪ್ರಯಾಣ ಮಾಡಿದೆವು. ಬೊಂಬಾಯಿಯಿಂದ ೮-೯-೭೮ರ

ಮಧ್ಯರಾತ್ರಿಗೆ ಕೈರೋಗೆ ವಿಮಾನದಲ್ಲಿ ಹಾರಿದೆವು. ನಮ್ಮ ಈ ಪ್ರವಾಸದಲ್ಲಿ ಭಾರತದ ಇತರ ಭಾಗಗಳಿಂದ ಬಂದಿದ್ದ ಬೇರೆ ಪ್ರವಾಸಿಗರು ಮತ್ತು ಪ್ರವಾಸದ ಕಂಡಕ್ಟರ್ ಸೇರಿ ಒಟ್ಟು ಇಪ್ಪತ್ತು ಜನರಿದ್ದೆವು. ಪ್ರಥಮ ಬಾರಿಗೆ ವಿಮಾನದಲ್ಲಿ ಪ್ರಯಾಣಿಸುತ್ತಿದ್ದುದರಿಂದ ನನಗೆ ಹೆದರಿಕೆ ಎನಿಸಿತು. ವಿಮಾನವು ೩೦,೦೦೦-೩೫,೦೦೦ ಅಡಿ ಎತ್ತರಕ್ಕೆ ಏರಿ ವೇಗದಲ್ಲಿ ಹಾರತೊಡಗಿದಾಗ ನಾವು ಹಾರುತ್ತಿದ್ದೇವೆಂಬುದೇ ತಿಳಿಯದಾಯಿತು. ನಾವು ವಿಮಾನದಿಂದ ಮೊದಲು ಇಳಿಯುವ ಸ್ಥಳ ಕೈರೋ ನಗರ. ಅಲ್ಲಿ ನಾವು ಒಂದೂವರೆ ದಿನವಿದ್ದು ಪ್ರಾಚೀನ ಪಿರಮಿಡ್, ಸ್ಫಿಂಕ್ಸ್ ಮತ್ತು ವಸ್ತು ಸಂಗ್ರಹಾಲಯಗಳನ್ನು ನೋಡಿದೆವು. ನಮ್ಮನ್ನು ಭಾರತದವರೆಂದು ಗುರುತಿಸಿದ ಅನೇಕ ಯುವ ಜನರು, 'ಹಲೋ ಇಂಡಿಯಾ', 'ವೆಲ್‌ಕಮ್ ಇಂಡಿಯಾ' ಎಂದು ಹೇಳಿ ಸ್ವಾಗತಿಸಿದರು.

ಅನಂತರ ಅಲ್ಲಿಂದ ವಿಮಾನ ಮೂಲಕ ತಲಪಿದ ನಗರವೆಂದರೆ ಗ್ರೀಸ್‌ನ 'ಅಥೆನ್ಸ್'. ಅಥೆನ್ಸ್‌ಗೆ ಹೋಗುವವರಿದ್ದೇವೆ ಎಂದು ತಿಳಿದಾಗಲೇ ನನಗೆ ಇತಿಹಾಸ ಪುಸ್ತಕಗಳಲ್ಲಿ ಓದಿದ ದಾರ್ಶನಿಕರಾದ ಅರಿಸ್ಟಾಟಲ್, ಪ್ಲೇಟೋ ಎಲ್ಲರಿಗೂ ಹೆಚ್ಚಾಗಿ ಸಾಕ್ರಟೀಸರ ನೆನಪಾಗಿ ಅವರ ವಿಷಯದಲ್ಲಿ ಹುದುಗಿದ್ದ ಶ್ರದ್ಧೆಯು ತಾನೇತಾನಾಗಿ ಹೊರಹೊಮ್ಮಿತು. ಅಷ್ಟೇ ಅಲ್ಲ, ಸಾಕ್ರಟೀಸರಂತಹ ದಾರ್ಶನಿಕ ಹಾಗೂ ವಿಜ್ಞಾನಿಯ ನಗರವನ್ನು ನೋಡುವ ಸೌಭಾಗ್ಯ ದೊರೆಯಿತಲ್ಲ ಎಂದು ಸಂತೋಷವಾಯಿತು. ಅಥೆನ್ಸ್‌ನ ನಂತರ ನಾವು ಇಟಲಿಯ ರೋಮ್ ನಗರವನ್ನು ತಲಪಿದೆವು. ಆ ದೇಶದಲ್ಲಿ ರೋಮ್ ಅಲ್ಲದೆ ಕಲಾಕೃತಿಗಳಿಂದ ಕೂಡಿದ ಬೃಹದಾಕಾರದ ಚರ್ಚ್‌ಗಳಿರುವ ಹಳೆಯ ರಾಜಧಾನಿ ಫ್ಲಾರೆನ್ಸ್, ಪೀಸಾದ ಗೋಪುರ ಮತ್ತು ಅಡ್ರಿಯಾಟಿಕ್ ಸಮುದ್ರ, ಕರಾವಳಿಯಲ್ಲಿ ನೀರಿನ ಮೇಲೆಯೇ ನಿಂತಿರುವ ಪ್ರಾಚೀನ ವೆನಿಸ್ ನಗರದಲ್ಲೂ ಸಂಚರಿಸಿದೆವು. ರೋಮನ್ನರ ಕಾಲದಲ್ಲಿ ಮೀನುಗಾರರ ಸ್ಥಳವಾಗಿದ್ದ ವೆನಿಸ್ ೧೬ನೇ ಶತಮಾನದಲ್ಲಿ ಕಲೆ, ವಿದ್ಯೆ ಹಾಗೂ ಸಂಸ್ಕೃತಿಯ ಕೇಂದ್ರವಾಗಿ ಮೆರೆಯಿತು. ವೆನಿಸ್ ಅಡ್ರಿಯಾಟಿಕ್ ಸಮುದ್ರ ತೀರದಲ್ಲಿ ಉಪ್ಪು ನೀರಿನ ಮೇಲೆ

> **ಸಂಗಾತಿ**
>
> "ಹೆಣ್ಣಿಗೆ
> ಗಂಡು ಎಂದೂ
> ಸಂಗಾತಿಯಲ್ಲ
> ನಿರಾಶೆ-ಕಣ್ಣೀರೇ
> ನಿಜವಾದ
> ಸಂಗಾತಿಗಳು!"
> ಎಂಬುದು ಆಕೆಯ
> ಅನುಭವ ವಾಣಿ.
>
> • ಡಿ.ಎ. ಬಡಿಗೇರ

ತೇಲುತ್ತಿರುವಂತೆಯೇ ಇದೆ. ಇಲ್ಲಿರುವ ೧೫೦ ದ್ವೀಪಗಳನ್ನು ೩೦೦ ಕಾಲುವೆಗಳ ಮೂಲಕ ಜೋಡಿಸಲಾಗಿದೆ. ಅಷ್ಟೇ ಅಲ್ಲ, ಇಲ್ಲಿ ೪೦೦ ಸೇತುವೆಗಳೂ ಇವೆ. ಒಂದು ಮನೆಯಿಂದ ಇನ್ನೊಂದು ಮನೆಗೆ ಕಾಲುವೆಗಳ ಮೂಲಕವೇ ಹೋಗಬೇಕು. ಇದಕ್ಕೆ 'ಗೊಂಡೋಲಾ'ಗಳೆಂಬ ವಿಶೇಷ ಬಗೆಯ ನಾವೆಗಳಿವೆ. ಇಂತಹ ಸಂಚಾರದ ಸಣ್ಣ ಕಾಲುವೆಗಳು ಎರಡುಸಾವಿರದಷ್ಟಿದೆ. ಇವುಗಳೇ ಇಲ್ಲಿನ ರಸ್ತೆಗಳು. ಹೀಗೆ ೧೯೭೦ರ ಹತ್ತು ಲಕ್ಷ ಜನಸಂಖ್ಯೆ ನೀರಿನ ಮೇಲೆ ನಿಂತ ಮನೆಗಳಲ್ಲೇ ವಾಸಮಾಡುತ್ತಿತ್ತು. ಅದ್ಭುತ ಕಾಲುವೆಗಳಿಂದ ಕೂಡಿದ್ದ ಈ ನಗರ ನೀರಿನಲ್ಲಿ ನಿಧಾನವಾಗಿ ಮುಳುಗುತ್ತಿದೆ ಎಂದು ಆಗಲೇ ಜನ ಆತಂಕಗೊಳ್ಳಗಾಗಿದ್ದರು. ಹಾಗಾಗುವುದನ್ನು ತಪ್ಪಿಸಲು ಪ್ರಯತ್ನಗಳು ನಡೆಯುತ್ತಲೂ ಇದ್ದವು.

ಮೊದಲೇ ಏರ್ಪಾಡು ಮಾಡಿದ್ದ 'ಮಾರ್ವೆಲ್ ಕೋಚ್'ನಲ್ಲಿ ಇಟಲಿ ಸುತ್ತಾಡಿದ ನಂತರ ಅದರಲ್ಲೇ ಸ್ವಿಟ್ಜರ್‌ಲೆಂಡ್‌ನ ಲೂಸರ್ನ್ ಮತ್ತು ಜ್ಯೂರಿಕ್‌ಗಾಗಿ ಜರ್ಮನಿಯ (ಆಗಿನ ಪಶ್ಚಿಮ ಜರ್ಮನಿ) ಫ್ರಾಂಕ್‌ಫರ್ಟ್‌ಅನ್ನು ತಲಪಿದೆವು. ಈ ವಾಣಿಜ್ಯ ನಗರದಲ್ಲಿ ಸ್ವಲ್ಪ ಕಾಲ ಸುತ್ತಾಡಿ ಕೋಬ್ಲೆಂಜ್‌ಗಾಗಿ ಕೊಲೋನ್ ನಗರವನ್ನು ತಲಪಿದೆವು. ಇಲ್ಲಿ ಅರ್ಧತಾಸಿನಷ್ಟು ಸುತ್ತಾಡಿ

ಹಾಲೆಂಡ್‌ನ ದಿ ಹೇಗ್ ನಗರವನ್ನು ಸೇರಿದೆವು. ಅಲ್ಲಿಂದ ಮುಂದೆ ವಜ್ರದ ನಗರವಾದ ಆಮ್‌ಸ್ಟರ್‌ಡ್ಯಾಮ್‌ಗೆ ಹೋಗಿ, ನೋಡಬೇಕಾದಂತಹ ಸ್ಥಳಗಳನ್ನು ನೋಡಿ, ಬೆಲ್ಜಿಯಮ್‌ನ ಬ್ರಸಲ್ಸ್‌ಗೆ ಹೋಗಲು ಆಸ್ಟಂಡ್ ಬಂದರನ್ನು ಸೇರಿ, ಅನಂತರ ಇಂಗ್ಲೆಂಡಿನ ಫೋಕ್‌ಸ್ಟೋನ್ ಬಂದರಿಗೆ ಹೋಗಲು ಜಹಜನ್ನು ಹತ್ತಿದೆವು. ಇಂಗ್ಲಿಷ್ ಕಾಲುವೆಯನ್ನು ದಾಟುವ ಈ ಹಡಗಿನಲ್ಲಿ ನಮ್ಮ ಮಾರ್ವೆಲ್ ಕೋಚ್ ಅಲ್ಲದೆ ಇನ್ನೂ ಹತ್ತಾರು ವಾಹನಗಳು ಇದ್ದವು. ಇದು ಸುಮಾರು ೩-೪ ಗಂಟೆಯ ಪ್ರವಾಸ. ಫೋಕ್‌ಸ್ಟೋನ್‌ನಿಂದ ಕೋಚ್‌ನಲ್ಲೇ ಲಂಡನ್ನಿಗೆ ಪ್ರಯಾಣ.

ಲಂಡನ್ನಿನಲ್ಲಿ ಭಾಷೆ ಬರುವ ಕಾರಣ ನಮ್ಮನ್ನು ಸ್ವತಂತ್ರವಾಗಿ ಸುತ್ತಾಡಲು ಬಿಟ್ಟುಕೊಡಲಾಯಿತು. ಕೆಲವು ಮುಖ್ಯ ಸ್ಥಳಗಳನ್ನು ಅಂದರೆ ಬಕ್ಕಿಂಗ್‌ಹ್ಯಾಮ್ ಪ್ಯಾಲೇಸ್, ವಿಂಡ್ಸರ್ ಕ್ಯಾಸಲ್, ಹೀಥ್ರೋ ವಿಮಾನ ನಿಲ್ದಾಣ, ಮ್ಯೂಸಿಯಂ ಮೊದಲಾದವುಗಳನ್ನು ಎಲ್ಲರೂ ಒಟ್ಟಾಗಿ ನೋಡಿದ್ದಾಯಿತು. ನಾವು ಕರ್ನಾಟಕದವರಾದ ಇಬ್ಬರೇ ಟವರ್ ಆಫ್ ಲಂಡನ್, ಲಂಡನ್ ಬ್ರಿಡ್ಜ್, ಆಕ್ಸ್‌ಫರ್ಡ್ ಸರ್ಕಲ್‌ನ ಡಿಪಾರ್ಟ್‌ಮೆಂಟ್ ಸ್ಟೋರ್, ಮೇಡಮ್ ಟಸಲ್ಸ್ ಗೆಲರಿ ಮುಂತಾವುಗಳನ್ನು ಅಲ್ಲಿಯ ಪ್ರಸಿದ್ಧ ಹಾಗೂ ಬಹುಸೌಕರ್ಯದಿಂದ ಕೂಡಿದ ಟ್ಯೂಬ್ ರೈಲ್ವೆಯ ಮೂಲಕ ಏನೂ ತೊಂದರೆ ಇಲ್ಲದೆ ಪ್ರಯಾಣಿಸಿ ವೀಕ್ಷಿಸಿದೆವು. ಹೀಗೆ ಇಲ್ಲಿ ನಾಲ್ಕು ದಿನ ತಂಗಿದ್ದು ವಾಪಸಾಗುವ ಮಾರ್ಗದಲ್ಲಿ ಕೋಚ್‌ನಲ್ಲೇ ಡೋವರ್ ಬಂದರಿಗೆ ಬಂದೆವು. ಅಲ್ಲಿಂದ ಜಹಜ್‌ನಲ್ಲಿ ಫ್ರಾನ್ಸ್‌ನ ಕೇಲೇಸ್ ಬಂದರನ್ನು ಸೇರಿ ಮುಂದೆ ಕೋಚ್‌ನಲ್ಲೆ ಪ್ಯಾರಿಸ್ ನಗರವನ್ನು ತಲಪಿದೆವು. ಪ್ಯಾರಿಸ್‌ನಲ್ಲಿ ಐಫೆಲ್ ಟಾವರ್, ಮ್ಯೂಸಿಯಂನಲ್ಲಿಯ 'ಮೊನೊಲಿಸಾ' ಹಾಗೂ 'ವೀನಸ್'ಗಳನ್ನು ನೋಡಿಕೊಂಡು ಸ್ವಿಜರ್‌ಲ್ಯಾಂಡಿನ ಜಿನೆವಾ ಪಟ್ಟಣವನ್ನು ತಲುಪಿದೆವು. ಇದು ಯುರೋಪಿನ ಅತಿ ದೊಡ್ಡ ಸರೋವರದ ಒಂದು ಕೊನೆಯಲ್ಲಿದೆ. ಈ ಸರೋವರದ ಉದ್ದ ೧೧೪ ಕಿಲೋಮೀಟರಿನಷ್ಟಾದರೆ ಅಗಲ ೨೩ ಕಿಲೊಮೀಟರಿನಷ್ಟು. ಇದನ್ನು ಜಿನೇವಾ ಸರೋವರ ಎಂದೇ ಕರೆಯುತ್ತಾರೆ. ಜಿನೇವಾದಲ್ಲಿ ಒಂದು ದಿನ ತಂಗಿದ್ದು ಅಲ್ಲಿರುವ ಅನೇಕ ಅಂತಾರಾಷ್ಟ್ರೀಯ ಸಂಘಸಂಸ್ಥೆಗಳ ಕಚೇರಿಗಳನ್ನು ನೋಡಿ ಮೌಂಟ್‌ಬ್ಲಾಂಕ್‌ನ ಸುರಂಗಮಾರ್ಗವಾಗಿ ಪುನಃ ರೋಮ್ ನಗರವನ್ನು ತಲಪಿದೆವು. ಅಲ್ಲಿಂದ ತಡೆರಹಿತ ವಿಮಾನದಲ್ಲಿ ನೇರ ದಿಲ್ಲಿಗೆ ಹಾರಿ ನಂತರ ಬೊಂಬಾಯಿಗೆ ಹಿಂದಿರುಗಿದೆವು. ಈ ೨೬ ದಿವಸಗಳ ಸಂಚಾರದಲ್ಲಿ ನಾವು ಯುರೋಪ್ ಮತ್ತು ಲಂಡನ್ ನಗರದ ಜನರ ಪರಿಸರ ಪ್ರಜ್ಞೆ, ಶುಚಿತ್ವ, ಸಮಯಪಾಲನೆಯ ಮನೋಭಾವ ಮೊದಲಾದವುಗಳಿಂದ ಪ್ರಭಾವಿತರಾದೆವು.

ವೆನಿಸ್ ನಗರದಲ್ಲಂತೂ ನಾವು ನೋಡಬೇಕಾದ ಸ್ಥಳಗಳನ್ನು ನೋಡಿ ಇಡೀ ಹಗಲು ಅಂದರೆ ಒಂದು ಭಾನುವಾರ ಸಂತ ಮಾರ್ಕ್ಸ್ ಚೌಕದಲ್ಲಿ ಅಡ್ಡಾಡಿಕೊಂಡಿದ್ದೆವು. ಭಾನುವಾರವಾದ್ದರಿಂದ ಯುರೋಪಿನ ಅನೇಕ ದೇಶಗಳ ಹಾಗೂ ಇತರ ದೇಶಗಳ ಪ್ರವಾಸಿಗರು ಅಲ್ಲಿ ಸಾವಿರಾರು ಸಂಖ್ಯೆಯಲ್ಲಿ ಬಂದು ಅಡ್ಡಾಡಿಕೊಂಡಿದ್ದರು. ಹೆಚ್ಚಿನವರು ಹೆಂಡಿರು-ಮಕ್ಕಳೊಡನೆ ಪ್ರವಾಸ ಕೈಗೊಂಡಿದ್ದರು. ಕೆಲವು ಕಾನ್ವೆಂಟ್ ಸ್ಕೂಲಿನವರು ವಿದ್ಯಾರ್ಥಿ- ವಿದ್ಯಾರ್ಥಿನಿಯರೊಡನೆ ಅಡ್ಡಾಡಲು ಬಂದಿದ್ದರು. ಇಷ್ಟಾದರೂ ಅಲ್ಲಿ ಅಂಗೈಯಗಲದ ಕಾಗದ ಚೂರನ್ನಾಗಲಿ ಇತರ ಯಾವುದೇ ರೀತಿಯ ಕಸಕಡ್ಡಿಗಳು ಹಾರಾಡುವುದನ್ನಾಗಲಿ ನಾನು ನೋಡಲಿಲ್ಲ. ಅಲ್ಲಲ್ಲಿ ಜನರ ಉಪಯೋಗಕ್ಕೆಂದು ಕಸದ ಡಬ್ಬಗಳನ್ನು ಇಡಲಾಗಿತ್ತು. ಮಕ್ಕಳು ದೊಡ್ಡವರಾದಿಯಾಗಿ ಎಲ್ಲರೂ ಶಿಸ್ತುಪಾಲಕರಾದ್ದರಿಂದ ಅವುಗಳನ್ನು ಕಟ್ಟುನಿಟ್ಟಾಗಿ ಉಪಯೋಗಿಸುತ್ತಿದ್ದರೇ ಹೊರತು ನಮ್ಮ ಜನರಂತೆ ನಿಂತಲ್ಲೇ ಕಸವನ್ನು ಚೆಲ್ಲಾಪಿಲ್ಲಿಯಾಗಿ ಬಿಸಾಡುತ್ತಿರಲಿಲ್ಲ. ಅಂತೆಯೇ ಇಲ್ಲಿಯವರಂತೆ ಸಿಕ್ಕಸಿಕ್ಕಲ್ಲಿ ಉಗುಳುವುದನ್ನೂ ಮಲ-ಮೂತ್ರ ವಿಸರ್ಜನೆ ಮಾಡುವುದನ್ನೂ ನಾವು ನೋಡಲೇಇಲ್ಲ. ಲಂಡನ್ನಿನಲ್ಲಂತೂ 'ರಸ್ತೆಗಳಲ್ಲಿ ಉಗುಳುವವರಿಗೆ ತಕ್ಕ ಶಿಕ್ಷೆ ವಿಧಿಸಲಾಗುತ್ತದೆ' ಎಂದು ರಸ್ತೆಗಳ ಬದಿಗಳಲ್ಲಿ ಫಲಕಗಳನ್ನೇ ಹಾಕಿರುತ್ತಾರೆ. ಅಲ್ಲಿಯ ಜನ ಅದರಂತೆಯೇ ನಡೆದು

ಕೊಳ್ಳುತ್ತಾರೆ. ನಮ್ಮಲ್ಲಿ ಓದಿದವರೂ ಇಂತಹ ಶಿಸ್ತನ್ನು ಪಾಲಿಸುವುದಿಲ್ಲ.

ನಮ್ಮ ಜನರ ಮತ್ತೊಂದು ಕೆಟ್ಟ ಬುದ್ಧಿ ಮತ್ತು ಅಸಭ್ಯ ವರ್ತನೆ ಎಂದರೆ ಐತಿಹಾಸಿಕ ಕಟ್ಟಡ, ಪುರಾತನ ಕೋಟೆಗಳು, ಭವ್ಯ ಮಂದಿರಗಳು, ರೈಲು-ಬಸ್‌ಗಳಲ್ಲಾಗಲಿ ಮತ್ತಿತರ ಪ್ರೇಕ್ಷಣೀಯ ಸ್ಥಳಗಳಲ್ಲಾಗಲಿ ತಮ್ಮ ಹೆಸರು, ಪ್ರವಾಸ ಕೈಗೊಂಡ ವರ್ಷ ಮೊದಲಾದವುಗಳನ್ನು ಗೀಚುವುದೇ ಅಲ್ಲದೆ ಅಶ್ಲೀಲಚಿತ್ರ ಮತ್ತು ಅಶ್ಲೀಲ ವಾಕ್ಯಗಳನ್ನು ಬರೆದು ಅವುಗಳ ಪಾವಿತ್ರ್ಯ ಮತ್ತು ಅಂದವನ್ನು ಕೆಡಿಸುವುದು. ಇಂತಹವನ್ನೆಲ್ಲ ನಾವು ಯುರೋಪಿನಲ್ಲಿ ನೋಡಲೂ ಇಲ್ಲ.

'ಸಮಯವೇ ಜೀವನ' ಎಂದು ಯಾರೋ ಹೇಳಿದ ನೆನಪು. ಸಾಮಾನ್ಯ ವಿದೇಶೀಯನೂ ಇದನ್ನು ಅರ್ಥಮಾಡಿಕೊಂಡಿರುತ್ತಾನೆ. ಅಥೆನ್ಸ್‌ನಲ್ಲಿ ನಾವು ಏನೋ ಅಗತ್ಯ ವಸ್ತುಗಳನ್ನು ಕೊಳ್ಳಲು ಎಂಟು ಗಂಟೆಗೆ ಏಳೆಂಟು ನಿಮಿಷ ಇದೆ ಎನ್ನುವಾಗ ಅಂಗಡಿಯೊಂದಕ್ಕೆ ಹೋದೆವು. ಆ ಅಂಗಡಿಯಲ್ಲಿ ಬೆಳಗಿನ ಎಂಟು ಗಂಟೆಗೆ ವ್ಯಾಪಾರಕ್ಕೆ ತೊಡಗುವ ಸಮಯವೆಂದಿತ್ತು. ಆಗತಾನೆ ಅಂಗಡಿ ತೆರೆದಿದ್ದರೂ ಎಂಟು ಗಂಟೆಯಾಗದೆ ವ್ಯಾಪಾರ ಆರಂಭ ಮಾಡುವುದಿಲ್ಲವೆಂದು ಅಂಗಡಿಯಾತ ಹೇಳಿಬಿಟ್ಟ. ಇದೇ ರೀತಿ ಲಂಡನ್ನಿನಲ್ಲಿ ಪೆಟ್ಟಿಗೆ ಅಂಗಡಿಯಾತ ಸಂಜೆಯ ೬-೩೦ರ ಸಮಯದಲ್ಲಿ ಅಲ್ಲಿಯ ಕ್ರಮದಂತೆ ಅಂಗಡಿಯನ್ನು ಆಗತಾನೆ ಮುಚ್ಚತೊಡಗಿದ್ದ. ನಾವು ಹಣ್ಣುಗಳನ್ನು ಕೊಳ್ಳಲು ಚುರುಕಾಗಿ ಹೋಗಿ ಕೇಳಿದಾಗ ಆತ, "ಅಂಗಡಿಯನ್ನು ಈಗಾಗಲೇ ಮುಚ್ಚಿಯಾಯಿತು," ಎಂದು ಮುಖಮುರಿಯುವಂತೆ ಹೇಳಿಬಿಟ್ಟ. ಅಲ್ಲೆಲ್ಲ ಅಂಗಡಿಗಳನ್ನು ಸಂಜೆಗೆ ೬-೩೦ಕ್ಕೆ ಸರಿಯಾಗಿ ಎಲ್ಲರೂ ಮುಚ್ಚೇಬಿಡುತ್ತಾರೆ. ಆ ಪೆಟ್ಟಿಗೆ ಅಂಗಡಿಯವನ ಸಮಯದ ಕಾಳಜಿಗೆ ನಾವು ಬೆಕ್ಕಸಬೆರಗಾದೆವು. ನಮ್ಮಲ್ಲಿ ಈ ರೀತಿಯ 'ಸಮಯಪಾಲನೆಯ ಶಿಸ್ತು' ಎಷ್ಟು ಜನರಿಗೆ ಇದೆ?

ರೋಮ್‌ನಿಂದ ಲಂಡನ್ನಿಗೆ ನಾವು 'ಮಾರ್ವೆಲ್ ಕೋಚ್'ನಲ್ಲೇ ಪ್ರಯಾಣ ಮಾಡಿದ್ದೆವಷ್ಟೇ. ಆ ಕೋಚ್‌ನ ಡ್ರೈವರ್ 'ಓ.ಕೆ.' ಮತ್ತು 'ಥ್ಯಾಂಕ್ಸ್' ಎಂದು ಹೇಳುವಷ್ಟು ಮಾತ್ರ ಇಂಗ್ಲಿಷ್ ಕಲಿತುಕೊಂಡಿದ್ದ. ಆಗಾಗ್ಗೆ ಇಂಗ್ಲೆಂಡಿಗೆ ಪ್ರವಾಸಿಗರನ್ನು ಕರೆದುಕೊಂಡು ಹೋಗುತ್ತಿದ್ದರೂ ಆತನಿಗೆ ಇಂಗ್ಲಿಷ್‌ನ ಗಂಧವೇ ಇರಲಿಲ್ಲ. ಆದರೂ ಆತನಲ್ಲಿ ಶುಚಿತ್ವ ಹಾಗೂ ಸಮಯಪಾಲನೆ ಬಗೆಗಿರುವ ಕಾಳಜಿ ನನ್ನನ್ನು ಬೆರಗುಗೊಳಿಸಿದವು. ನಮ್ಮ ಕೋಚ್‌ನ ಒಳಗಡೆ ಕಸದಬುಟ್ಟಿ ಇಡಲಾಗಿತ್ತು. ಬಿಸಾಕುವ ಪದಾರ್ಥಗಳನ್ನು ಅದರೊಳಗೇ ಹಾಕಬೇಕೆಂದು ನಮಗೆಲ್ಲ ಆತ ಕೈಸನ್ನೆಯಿಂದ ತಾಕೀದು ಮಾಡಿದ್ದ. ಅಷ್ಟೇ ಅಲ್ಲ, ಅದರಲ್ಲಿ ಕಸ ತುಂಬಿದಾಗ ಇಲ್ಲಿನವರಂತೆ ಕೂತಲ್ಲಿಂದಲೇ ಹೊರಗೆ ಬಿಸುಡದೆ ದಾರಿ ದಾರಿಗಳಲ್ಲಿ ತಂಗುತ್ತಿದ್ದ ಹೋಟೇಲುಗಳಲ್ಲಿ ಅದಕ್ಕೆಂದೇ ಏರ್ಪಾಡು ಮಾಡಿದ್ದ ಸ್ಥಳಗಳಲ್ಲಿ ತಾನೇ ಕೊಂಡು ಹೋಗಿ ಖಾಲಿ ಮಾಡುತ್ತಿದ್ದ.

ಸಮಯಪಾಲನೆಯ ವಿಷಯದಲ್ಲೂ ಈ ಡ್ರೈವರ್ ವಿಶೇಷ ಗಮನವಿಟ್ಟಿದ್ದ. ಈತ ಪ್ರಯಾಣದ ಸಮಯ ದಾರಿಯಲ್ಲಿ ಅಲ್ಲಲ್ಲಿ ಜನ

## ಬಾರ್ಲಿ: ದೇಹಕ್ಕೆ ಮಿತ್ರ, ಹೃದಯರೋಗಗಳಿಗೆ ಶತ್ರು

ಜ್ವರ ಬಂದಾಗ ಲಘು ಆಹಾರವಾಗಿ ಬಾರ್ಲಿ ಗಂಜಿಕೊಡುವ ವಿಚಾರ ಎಲ್ಲರಿಗೂ ಗೊತ್ತಿದ್ದದ್ದೆ. ಮೂತ್ರ ವಿರೇಚಕವಾಗಿಯೂ ಬಾರ್ಲಿ ನೀರನ್ನು ಬಳಸುವುದಿದೆ. ಬೀರ್, ವ್ಹಿಸ್ಕಿ ತಯಾರಿಕೆಯಲ್ಲಿಯೂ ಅದು ಬೇಕೇಬೇಕು. ಆದರೆ ಬಾರ್ಲಿಗೆ ಸಂಬಂಧಿಸಿದ ಹಾಗೆ ಬಹಳ ಜನರಿಗೆ ಅಷ್ಟಾಗಿ ಗೊತ್ತಿರದ ಇನ್ನೊಂದು ವಿಷಯವೂ ಇದೆ. ಅದೆಂದರೆ ಹೃದಯಕ್ಕೆ ಮಾರಕವಾದ ಕೊಲೆಸ್ಟೆರಾಲನ್ನಷ್ಟೇ ಅಲ್ಲ, ಅನೇಕ ಹೃದಯರೋಗಗಳಿಗೆ ಕಾರಣವಾದ ಲಿಪೋಪ್ರೋಟೀನಿನ ಪ್ರಮಾಣವನ್ನೂ ಈ ಬಾರ್ಲಿಬೀಜ ಗಣನೀಯವಾಗಿ ಕಡಿಮೆಗೊಳಿಸುತ್ತದೆ ಎನ್ನುವುದು. ಆಸ್ಟ್ರೇಲಿಯದ ವಿಜ್ಞಾನಿಗಳ ಈ ಶೋಧದಿಂದಾಗಿ ಇತ್ತೀಚೆ ಪಶ್ಚಿಮದ ದೇಶಗಳಲ್ಲಿ ಬಾರ್ಲಿಯ ಸೇವನೆ ಹೆಚ್ಚುತ್ತಿದೆ.

ಇಳಿದಾಗ ಎಲ್ಲರೂ ಸಮಯಕ್ಕೆ ಸರಿಯಾಗಿ ಕೋಚಿಗೆ ವಾಪಸಾಗಬೇಕೆಂದು ಆಣತಿ ನೀಡುತ್ತಿದ್ದ. ದಂಪತಿಗಳ ಒಂದು ಜೊತೆಯನ್ನು ಬಿಟ್ಟು ಮತ್ತೆಲ್ಲರೂ ಇದರಂತೆ ನಡೆದುಕೊಳ್ಳುತ್ತಿದ್ದರು. ಆ ದಂಪತಿಗಳ ಈ ನಡವಳಿಕೆಯಿಂದ ಆತ ರೋಸಿಹೋಗಿದ್ದ. ಲಂಡನ್ನಿನ ಪ್ರವಾಸದ ನಂತರ ನಾವು ಒಂದು ಬೆಳಿಗ್ಗೆ ೬-೩೦ಕ್ಕೆ ಕೋಚ್‌ನಲ್ಲಿ ಡೋವರ್ ಬಂದರಿಗೆ ವಾಪಸಾಗುವುದೆಂದಿತ್ತು. ಸಮಯಕ್ಕೆ ಸರಿಯಾಗಿ ಕೋಚನ್ನು ಏರಲೇಬೇಕೆಂದು ಡ್ರೈವರ್ ಎಲ್ಲರಿಗೂ ಹಿಂದಿನ ದಿನವೇ ಆಣತಿ ಇತ್ತಿದ್ದ. ಹಾಗೆಯೇ ಆ ತಡಮಾಡುವ ದಂಪತಿಗಳ ವಿನಾ ನಾವೆಲ್ಲ ಸಮಯಕ್ಕೆ ಸರಿಯಾಗಿ ಕೋಚನ್ನು ಏರಿದೆವು. ಆ ದಂಪತಿಗಳನ್ನು ಕಾಣದೆ ಮೊದಲೇ ಅವರ ಮೇಲೆ ರೋಸಿಹೋಗಿದ್ದ ಡ್ರೈವರ್ ಸಿಡಿಮಿಡಿಗೊಂಡು ಅವರನ್ನು ಬಿಟ್ಟು ಡೋವರ್‌ಗೆ ಹೊರಟೇಬಿಟ್ಟ. ಡೋವರ್‌ನಲ್ಲಿ ನಾವು ಫ್ರಾನ್ಸ್‌ನ ಕೇಲೇಸ್ ಬಂದರಿಗೆ ಹೋಗಲು ಜಹಜನ್ನು ಏರುವವರಿದ್ದೆವು. ಆ ದಂಪತಿಗಳಿಗೆ ಕಿಸೆಯಿಂದ ಹಣ ತೆತ್ತು ಟ್ಯಾಕ್ಸಿ ಮಾಡಿಕೊಂಡು ಡೋವರ್‌ಗೆ ಬರಬೇಕಾಯಿತು. ಅವರು ಬರುವಷ್ಟರಲ್ಲಿ ನಾವೆಲ್ಲರೂ ಹಡಗನ್ನು ಏರಿದ್ದೆವು. ಅವರು ಒಂದೈದು ನಿಮಿಷ ತಡವಾಗಿದ್ದರೂ ಎಷ್ಟೋ ಗಂಟೆ ಕಾದು ಹಣತೆತ್ತು ಬೇರೆ ಹಡಗನ್ನು ಏರಿ ಪ್ಯಾರಿಸ್ಸಿನಲ್ಲಿ ನಮ್ಮನ್ನು ಕೂಡಿಕೊಳ್ಳಬೇಕಾಗಿತ್ತು.

ಹಾಲೆಂಡ್ ಹೂವುಗಳ ದೇಶ. ಅಲ್ಲಿಯ ಜನ ತೋಟಪ್ರಿಯರೂ ಹೌದು. ರಸ್ತೆಗಳ ಬದಿಗಳಲ್ಲಿ, ಎರಡು ರಸ್ತೆಗಳ ಮಧ್ಯದಲ್ಲಿ ಗುಲಾಬಿ ಗಿಡಗಳನ್ನು ಬೆಳೆಸಿದ್ದರು. ನಮ್ಮಲ್ಲಿಯ ಜನರಂತೆ ಅವುಗಳನ್ನು ಕಿತ್ತು ನಾಶಮಾಡಿದ್ದನ್ನು ನಾವು ನೋಡಲಿಲ್ಲ. ಇದೇ ರೀತಿ ಹಚ್ಚಹಸಿರಿನಿಂದ ತುಂಬಿದ ಸ್ವಿಟ್ಜರ್‌ಲೆಂಡ್‌ನಲ್ಲೂ ಮನೆಯ ಮುಂದೆ, ಕಿಟಕಿಗಳ ಮೇಲೆ, ಗೇಟ್ ಕಂಬಗಳ ಮೇಲೆ ಹೂದಾನಿಗಳಲ್ಲಿ ಬಣ್ಣಬಣ್ಣದ ಹೂವುಗಳನ್ನು ಬೆಳೆಸಿದ್ದರು. ಅಲ್ಲಿಯೂ ಅವಕ್ಕೆ ಯಾವ ತೊಂದರೆಯೂ ಇದ್ದಂತೆ ಕಾಣಲಿಲ್ಲ. ಅಲ್ಲಿಯ ಜನರ ಶಿಸ್ತಿನ ಗುಣ ಹಾಗೂ ಪರಿಸರ ಪ್ರಜ್ಞೆಯನ್ನು ಕಂಡು ನನಗೆ ಅಚ್ಚರಿಯಾಯಿತು.

ಈ ಸಂಚಾರದಲ್ಲಿ ಭಾಷೆಯ ಗೊಂದಲ ಮತ್ತು ಹೋದ ದೇಶಗಳಲ್ಲೆಲ್ಲ ಹಣದ ವಿನಿಮಯದ ತೊಂದರೆ ನಮ್ಮನ್ನು ಕಾಡಿಸಿತ್ತು. ಕೈರೋದಲ್ಲಿ ನಮ್ಮ ಇಂಗ್ಲಿಷ್‌ನಿಂದ ಯಾವ ಹೆಚ್ಚಿನ ಪ್ರಯೋಜನವೂ ಕಾಣಲಿಲ್ಲ. ಅದೇ ರೀತಿ ಸ್ವಿಟ್ಜರ್‌ಲೆಂಡ್, ಜರ್ಮನಿ (ಆಗಿನ ಪ. ಜರ್ಮನಿ) ಮತ್ತು ಫ್ರಾನ್ಸ್ ದೇಶಗಳನ್ನು ಬಿಟ್ಟು ನಾವು ಸಂಚರಿಸಿದ ಯುರೋಪಿನ ಇನ್ನಿತರ ದೇಶಗಳಲ್ಲಿ ಇಂಗ್ಲಿಷ್ ಬರುವವರು ಅಷ್ಟಾಗಿ ಕಾಣಸಿಗಲಿಲ್ಲ. 'ಇಂಗ್ಲಿಷ್ ಭಾಷೆ ಅಂತಾರಾಷ್ಟ್ರೀಯ ಭಾಷೆ. ಅದನ್ನು ಕಲಿಯಲೇಬೇಕು. ಅದರಿಂದಲೇ ಬದುಕು' ಎಂದು ನಮ್ಮಲ್ಲಿ ಪ್ರಚಾರ ಮಾಡುವುದು ನೆನಪಾಗಿ ನನಗೆ ತುಂಬಾ ಆಶ್ಚರ್ಯವಾಯಿತು. ರೋಮ್ ನಗರದ ಬ್ಯಾಂಕುಗಳಲ್ಲೂ ಇಂಗ್ಲಿಷ್ ಬಾರದವರೇ ಇದ್ದುದರಿಂದ ಪ್ರವಾಸಿಗರಲ್ಲಿ ಒಬ್ಬರಿಗೆ ಹಣವನ್ನು ವಿನಿಮಯ ಮಾಡಿಕೊಳ್ಳಲು ತುಂಬಾ ತೊಂದರೆಯಾಯಿತು. ಅದೇ ರೀತಿ ವೆನಿಸ್‌ನ ಪ್ರವಾಸಿಗರಲ್ಲಿ ಅನೇಕರು ನಮ್ಮನ್ನು ಭಾರತೀಯರೆಂದು ಗುರುತಿಸಿ ಮುಗುಳ್ನಗೆ ಬೀರಿ ಸ್ವಾಗತಿಸಿದರೇ ಹೊರತು ಅವರಿಗೆ ಇಂಗ್ಲಿಷ್ ಬಾರದ ಕಾರಣ ಪರಸ್ಪರ ಮಾತನಾಡಲಾಗಲಿಲ್ಲ. ಕೈ ಸನ್ನೆ, ಬಾಯಿಸನ್ನೆಯಿಂದಲೇ ಅವರು ಹಾಗೂ ನಾವು ಜಿಜ್ಞಾಸೆಯನ್ನು ಪರಿಹರಿಸಿಕೊಂಡಿದ್ದಾಯಿತು.

ಯುರೋಪಿನಲ್ಲಿನ ಮೂವತ್ತು ಚಿಕ್ಕಪುಟ್ಟ ದೇಶಗಳಿಗೂ ತಮ್ಮದೇ ಆದ ಭಾಷೆ, ಹಣ, ಸಂಸ್ಕೃತಿ ಇದೆ. ಅಲ್ಲಿಯ ಒಂದೊಂದು ದೇಶವೂ ನಮ್ಮ ದೇಶದ ಒಂದೊಂದು ರಾಜ್ಯಕ್ಕಿಂತ ವಿಸ್ತೀರ್ಣ ಹಾಗೂ ಜನಸಂಖ್ಯೆಯ ದೃಷ್ಟಿಯಿಂದ ಎಷ್ಟೋ ಸಣ್ಣದಾಗಿದೆ. ಆದರೂ ಅವುಗಳೆಲ್ಲ ನಮ್ಮ ದೇಶಕ್ಕಿಂತ ಅನೇಕಾನೇಕ ವಿಷಯಗಳಲ್ಲಿ ಮುಂದುವರಿದಿವೆ. ಅಲ್ಲಿರುವ ಸುಖ-ಸೌಲಭ್ಯಗಳು, ಶುದ್ಧವಾದ ನೀರಿನ ಅನುಕೂಲತೆ, ಒಳ್ಳೆಯ ರಸ್ತೆಗಳು, ಶುಚಿಯಾದ ಶೌಚಾಲಯಗಳು, ಉತ್ತಮ ದನಕರುಗಳು ಮೊದಲಾದವನ್ನು ನೋಡಿ ಜನರ ಜೀವನಕ್ಕೆ ಎಷ್ಟೊಂದು ಘನತೆ ಹಾಗೂ ಗೌರವ ನೀಡಲಾಗಿದೆಯೆಂದು ನಮಗೆ ಅನಿಸದಿರಲಿಲ್ಲ. ●



# ಲಕ್ವ ಬಾರದಂತೆ ಮಾಡುವುದು ಹೇಗೆ?

• ಡಾ. ವಿದ್ಯಾ ಜೈನ್



ಲಕ್ವ ಸದ್ಯದ ದಿನಗಳಲ್ಲಿ ಒಂದು ಕಷ್ಟಸಾಧ್ಯವಾದ ರೋಗವಾಗಿ ಪರಿಣಮಿಸಿದೆ. ಅದರಲ್ಲೂ 'ವೃದ್ಧಾಪ್ಯದ ಅಂಚು' ಎಂದು ಯಾವುದನ್ನು ಗುರುತಿಸಲಾಗುತ್ತದೆಯೋ ಆ ವಯೋಮಾನದವರಿಗೆ ಇದೊಂದು ಕೆಟ್ಟ ಕನಸಾಗಿ ಕಾಡುತ್ತದೆ. ಆಧುನಿಕ ವೈದ್ಯಶಾಸ್ತ್ರ ಪೆರಲಿಸಿಸ್ ಎಂದು ಹೆಸರಿಸಿರುವ ಈ ರೋಗ ಭಾರತದಲ್ಲಿ ಪಕ್ಷಾಘಾತ, ಪಕ್ಷವಾತ, ಅರ್ಧಾಂಗವಾತ, ಅರ್ಧಾಂಗವಾಯು, ಏಕಾಂಗವಾತ, ಪಕ್ಷವಧ ಇವೇ ಮುಂತಾಗಿ ಕರೆಯಲ್ಪಡುತ್ತದೆ.

ಸಾಮಾನ್ಯವಾಗಿ ಈ ರೋಗದಿಂದ ಶರೀರದ ಒಂದು ಭಾಗ ಪ್ರಭಾವಿತವಾಗಿ ಆ ಭಾಗವಿಡೀ ನಿಷ್ಕ್ರಿಯವಾಗುತ್ತದೆ. ಬಲ ಇಲ್ಲವೆ ಎಡಭಾಗದ ಕೈ-ಕಾಲು, ಬಾಯಿಗಳೆಲ್ಲ ಈ ರೋಗ ಪೀಡಿತವಾಗುವುದುಂಟು. ಒಮ್ಮೊಮ್ಮೆ ಕೇವಲ ಮುಖಕ್ಕೇ ಲಕ್ವ ಹೊಡೆಯಬಹುದು. ಆಗ ಮುಖವಿಕಾರ, ಬಾಯಿ ಸೊಟ್ಟಗಾಗುವಿಕೆಗಳು ಎದ್ದು ಕಾಣುವ ಲಕ್ಷಣಗಳಾಗುತ್ತವೆ. ಇದನ್ನು ಅರ್ದಿತ (Facial paralysis) ಎಂದು ಗುರುತಿಸಲಾಗುತ್ತದೆ. ಮಕ್ಕಳಿಗೆ ಅರ್ಧಾಂಗವಾಯು ರೋಗ ತಗಲಿದರೆ ಅದನ್ನು 'ಬಾಲ ಪಕ್ಷಾಘಾತ'ವೆಂದು ವೈದ್ಯರು ಹೇಳುತ್ತಾರೆ. ಮಕ್ಕಳಿಗೆ ಪೀಡೆಯಾಗಿ ಪರಿಣಮಿಸುವ ಪೋಲಿಯೋ ಕೂಡ ಅರ್ಧಾಂಗವಾಯುವಿಗೆ ಸಂಬಂಧಿಸಿದ ರೋಗವೆ.

ಕಳೆದ ಕಾಲು ಶತಮಾನದ ಅವಧಿಯಲ್ಲಿ ಅರ್ಧಾಂಗವಾಯುವಿನಿಂದ ಬಳಲುವವರ ಸಂಖ್ಯೆ ವೃದ್ಧಿಗೊಳ್ಳುತ್ತಲೇ ನಡೆದಿದೆ. ಮೊದಲೆಲ್ಲ ಇದನ್ನು ಅವಸ್ಥಾಜನ್ಯ ವಿಕೃತಿಯ ಪರಿಣಾಮ ಸ್ವರೂಪವಾಗಿ ಉಂಟಾಗುವ ರೋಗ ಎಂದು ತಿಳಿಯಲಾಗುತ್ತಿತ್ತು. ಆದರೆ ಈಗ ಈ ರೋಗವನ್ನುಂಟು ಮಾಡಲು ಇನ್ನೂ ಅನೇಕ ಕಾರಣಗಳಿವೆ ಎಂಬುದನ್ನು ಪತ್ತೆ ಹಚ್ಚಲಾಗಿದೆ. ಇವುಗಳಲ್ಲಿ ಇಂದಿನ ದಿನಗಳಲ್ಲಿನ ವಾತಾವರಣ, ಆಹಾರ ಹಾಗೂ ಬದುಕಿನ ರೀತಿಗಳು ಮುಖ್ಯವೆನಿಸುತ್ತವೆ. ಇಂದಿನ ಬದುಕೇ ಧಾವಂತದ್ದು. ಜತೆಗೆ ಕಲಬೆರಕೆಯ ಆಹಾರಗಳು, ಔಷಧಯುಕ್ತ ಗೊಬ್ಬರ ಬಳಕೆಯಿಂದ ಬೆಳೆಸಿದ ಕಾಳು-ಕಡಿ-ಕಾಯಿಪಲ್ಯಗಳು, ಕೃತ್ರಿಮ ಆಹಾರ, ಪೇಯಗಳು ಆತನ ಸ್ವಾಸ್ಥ್ಯವನ್ನು ಇನ್ನಷ್ಟು ಕೆಡಿಸು

ತ್ತವೆ. ಇವುಗಳೊಂದಿಗೆ ಜಲಮಾಲಿನ್ಯ, ವಾಯು ಮಾಲಿನ್ಯಗಳ ಪಾಲು ಬೇರೆ. ಇವೆಲ್ಲ ಆತನ ರಕ್ತದ ಒತ್ತಡವನ್ನು ಹೆಚ್ಚಿಸುತ್ತವೆ. ಇದರ ಪರಿಣಾಮ ಸ್ನಾಯುವ್ಯವಸ್ಥೆಯ ಮೇಲಾಗುತ್ತದೆ. ಮಾನಸಿಕ ಸಂತುಲನವೂ ಏರುಪೇರಾಗುತ್ತದೆ. ಸ್ನಾಯುವ್ಯವಸ್ಥೆಯ ಮೇಲಿನ ದುಷ್ಪರಿಣಾಮ ಮಾಂಸ ಪೇಶಿಗಳಲ್ಲಿ ವಿಕೃತಿಯುಂಟು ಮಾಡು ವುದರಿಂದ ಅವುಗಳ ಸ್ವಾಭಾವಿಕ ಕಾರ್ಯಕ್ಕೆ ಅಡ್ಡಿ ಮತ್ತು ಅವರೋಧ ಉಂಟಾಗುತ್ತದೆ. ಈ ಕಾರಣ ದಿಂದಾಗಿಯೇ ಆಯಾ ಭಾಗದ ಶರೀರ ಇಲ್ಲವೆ ಅಂಗಗಳು ನಿಷ್ಕ್ರಿಯಗೊಳ್ಳುತ್ತವೆ. ಈ ನಿಷ್ಕ್ರಿಯ ತೆಯೇ ಲಕ್ವ.

ಆಯುರ್ವೇದದಲ್ಲಿ ಈ ರೋಗದ ಬಹು ವಿಸ್ತಾರವಾದ ವಿವರ ಹಾಗೂ ಚರ್ಚೆ ಇದೆ. ಆಯು ರ್ವೇದಾಚಾರ್ಯರು, ಪ್ರಕುಪಿತವಾಯು ಮಸ್ತಿಷ್ಕದ ಭಾಗಗಳನ್ನು ಪ್ರಭಾವಿತಗೊಳಿಸಿ ಯಾವ ಭಾಗವನ್ನು ನಿಷ್ಕ್ರಿಯಗೊಳಿಸುವದೋ ಆ ಭಾಗವು ಕ್ರಿಯಾರಹಿತವೂ ಸಂಜ್ಞಾರಹಿತವೂ ಆಗಿ ಬಿಡುತ್ತದೆ; ಅದು ವಾಮಭಾಗವೇ ಆಗಿರ ಬಹುದು, ದಕ್ಷಿಣಭಾಗವೂ ಇರಬಹುದು; ಆ ಪಾರ್ಶ್ವದಲ್ಲಿ ಸಂಜ್ಞಾಹೀನತೆ, ವಾಣಿಸ್ತಂಭನಗಳು ಕಾಣಿಸಿಕೊಳ್ಳುತ್ತವೆ; ಕೈ-ಕಾಲು ಸಂಕುಚಿತ ಗೊಂಡಂತೆನಿಸುತ್ತದೆ ಎಂದಿದ್ದಾರೆ. ಹೀಗಾದಾಗ ಇದರಿಂದ ಒಂದೇ ಅಂಗ ಪ್ರಭಾವಿತವಾಗಿದ್ದರೆ ಅದನ್ನು 'ಏಕಾಂಗಾಘಾತ'ವೆಂದೂ ಸರ್ವಾಂಗ ಗಳು ಪ್ರಭಾವಿತಗೊಂಡಿದ್ದರೆ 'ಸರ್ವಾಂಗಾಘಾತ' ವೆಂದೂ ಗುರುತಿಸಲಾಗುತ್ತದೆ.

## ಕಾರಣಗಳು

ಆಯುರ್ವೇದದ ಪ್ರಕಾರ ಈ ರೋಗದ ಪ್ರಮುಖ ಕಾರಣ ಶರೀರದಲ್ಲಿ ವಾಯುಪ್ರಕೋಪ. ಹಾಗೆ ನೋಡಿದರೆ ನಮ್ಮ ಶರೀರದಲ್ಲಿ ಸದಾಕಾಲವೂ ಇರುವ ವಾಯು ನಮ್ಮ ಅಂಗಾಂಗ ಗಳ ಕ್ರಿಯೆಗಳ ಸಂಚಾಲಕನಾಗಿ ಕೆಲಸ ಮಾಡುತ್ತಿರುತ್ತದೆ. ಆದರೆ ನಮ್ಮ ಆಹಾರಾದಿ ಗಳಲ್ಲಿ ಏನಾದರೂ ಹೆಚ್ಚು-ಕಡಿಮೆಯಾದಾಗ ಉಳಿದ ಭಾಗಗಳಲ್ಲದೆ ವಾಯುವಿನ ಮೇಲೂ ಅದರ ಪ್ರಭಾವವುಂಟಾಗಿ, ವಾಯು ದೂಷಿತ ವಾಗುತ್ತದೆ, ವಿಕೃತವಾಗುತ್ತದೆ ಅಥವಾ ಪ್ರಕುಪಿತ ಗೊಳ್ಳುತ್ತದೆ. ಸ್ನಾಯುವ್ಯವಸ್ಥೆ ಮತ್ತು ನರಮಂಡಲ ಈ ವಾಯುವಿನಿಂದಲೇ ನಿಯಂತ್ರಿಸ ಲ್ಪಡುತ್ತದಾದ್ದರಿಂದ ಪ್ರಕುಪಿತ ವಾಯು ಪಕ್ಷಾ ಘಾತವನ್ನುಂಟುಮಾಡುತ್ತದೆ.

ಹಾಗಾದರೆ ಆಹಾರಾದಿಗಳಲ್ಲಿ ಹೆಚ್ಚು-ಕಡಿಮೆ ಎಂದರೇನು? ಅದು ಯಾಕಾಗುತ್ತದೆ? ಆಯು ರ್ವೇದದ ಪ್ರಕಾರ ಅತ್ಯಧಿಕ ರೂಕ್ಷ ಮತ್ತು ಶೀತಲ ದ್ರವ್ಯಗಳ ಸೇವನೆಯೇ ಇದಕ್ಕೆ ಕಾರಣ. ಅಲ್ಲದೆ ಅಧಿಕ ಮೈಥುನ, ಅಧಿಕ ವ್ಯಾಯಾಮ, ಮಲ-ಮೂತ್ರಗಳ ವಿಸರ್ಜನೆಯನ್ನು ತಡೆಗಟ್ಟಿಕೊಳ್ಳು ವುದು, ಚಿಂತಾಧಿಕ್ಯ, ಶೋಕ ಮತ್ತು ಕ್ರೋಧಾಧಿಕ್ಯ ಗಳಲ್ಲದೆ ಹೆಚ್ಚೆಚ್ಚು ಉಪವಾಸ ಮಾಡುವಿಕೆ, ಶರೀ ರದ ಅತಿಸ್ಥೂಲತೆ, ವಿಷಾರಿ ಇಲ್ಲವೆ ತೀವ್ರ ಔಷಧಿ ಗಳ ಸೇವನೆ, ಸತತ ಸಂಚಾರ, ಅಧಿಕ ಧೂಮ್ರ ಪಾನ-ಮದ್ಯಪಾನ-ಮಾದಕ ಪದಾರ್ಥ ಸೇವನೆ, ಮಧುಮೇಹ ಇಲ್ಲವೆ ಕ್ಷಯರೋಗ ಮುಂತಾದವು ಗಳ ಕಾರಣದಿಂದ ಉಂಟಾದ ಕ್ಷೀಣತೆಗಳಿಂದಾಗಿ ವಾಯು ಪ್ರಕುಪಿತಗೊಂಡು ಪಕ್ಷಾಘಾತ ಇಲ್ಲವೆ ಲಕ್ವಕ್ಕೆ ದಾರಿ ಮಾಡಿಕೊಡುತ್ತದೆ.

## ಉಪಚಾರ

ಲಕ್ವ ಹೊಡೆದಿದೆಯೆಂಬುದು ಗಮನಕ್ಕೆ ಬಂದ ಕೂಡಲೇ ರೋಗಿಯನ್ನು ತುರ್ತಾಗಿ ಯೋಗ್ಯ ಚಿಕಿ ತ್ಸಕನ ಬಳಿಗೋ ಒಳ್ಳೆಯ ಆಸ್ಪತ್ರೆಗೋ ಕೊಂಡೊ ಯ್ಯಬೇಕು. ಇದರಲ್ಲಿ ವಿಳಂಬ ಮಾಡಲೇ ಕೂಡದು. ಆಯುರ್ವೇದ ಪದ್ಧತಿಯ ಉಪಚಾರ ಕುರಿತು ಹೇಳಬೇಕೆಂದರೆ ಅದು ಮುಖ್ಯವಾಗಿ ವಾಯುಶಮನಗೊಳಿಸುವ ಕ್ರಮವೇ ಆಗಿರುತ್ತದೆ. ಇದಕ್ಕೆ ಸ್ನಿಗ್ಧ ಪದಾರ್ಥಗಳಾದ ಎಣ್ಣೆ ಅಥವಾ ತುಪ್ಪದ ಬಳಕೆ ಮಾಡಲಾಗುತ್ತದೆ. ಸಾಮಾನ್ಯವಾಗಿ ರೋಗಿಗೆ ಹಸುವಿನ ತುಪ್ಪ ಇಲ್ಲವೆ ಔಷಧಿ ಸಾಧಿತ ತುಪ್ಪವನ್ನು ದಿನಕ್ಕೆ ಎರಡು ತೊಲ (೨೩ ಗ್ರಾಂ) ಮುಂಜಾನೆ ಹೊಟ್ಟೆಯಲ್ಲಿ ಕೊಡುತ್ತಾರೆ. ಜತೆಗೆ ಔಷಧಿ ಸಾಧಿತ ತೈಲಗಳಾದ ಕ್ಷೀರಬಲ ತೈಲ, ನಾರಾಯಣ ತೈಲ ಇತ್ಯಾದಿಗಳಿಂದ ರೋಗಿಗೆ ಮಾಲಿಶ್ (ಅಭ್ಯಂಗ) ಮಾಡುವುದುಂಟು. ಅಭ್ಯಂ ಗದ ನಂತರ ಕೆಲನಿಮಿಷ ಬೆವರಿಳಿಯಲು ಅವಕಾಶ ಮಾಡಿಕೊಡುವುದು ಅವಶ್ಯ. ಇದಕ್ಕೂ ಅನೇಕ ಕ್ರಮಗಳಿವೆ. ಯೋಗ್ಯ ಚಿಕಿತ್ಸಕರೊಂದಿಗೆ ಪರಾ

ಮರ್ಶಿಸಿದ ನಂತರ ಸೂಕ್ತ ಕ್ರಮ ಅನುಸರಿಸಬೇಕು. ಈ ರೋಗೋಪಚಾರದಲ್ಲಿ ಹೊಟ್ಟೆ ಸ್ವಚ್ಛವಾಗಿರುವುದು ಅತ್ಯಂತ ಅಗತ್ಯ. ಯಾಕೆಂದರೆ ವಾಯು ವಿನ ಉತ್ಪತ್ತಿ, ನಿಯಂತ್ರಣ ಮೊದಲಾದುವೆಲ್ಲ ನಡೆಯುವುದು ಪಕ್ವಾಶಯ (ದೊಡ್ಡ ಕರುಳಿನ ಅಂತಿಮ ಭಾಗ)ದಲ್ಲಿಯೆ. ಈ ಪಕ್ವಾಶಯವನ್ನು ಸ್ವಚ್ಛಗೊಳಿಸಲು- ಎನಿಮಾವನ್ನೇ ಹೋಲುವ, ಆದರೂ ಭಿನ್ನವಾಗಿರುವ ಬಸ್ತಿ ಪ್ರಯೋಗ ಒಳ್ಳೆಯದು. ಬಸ್ತಿ ಪ್ರಯೋಗದಲ್ಲೂ ಅನೇಕ ವಿಧಾನಗಳಿವೆ. ಸಾಮಾನ್ಯವಾಗಿ ಪಕ್ವಾಶಯವನ್ನು ಶುದ್ಧೀಕರಿಸುವ ಬಸ್ತಿ ಪ್ರಯೋಗವೆಂದರೆ ದಶಮೂಲದ ಕಾಢೆ ಮಾಡಿ ಅದರಲ್ಲಿ ಕ್ಷೀರಬಲ ತೈಲ ಇಲ್ಲವೆ ನಾರಾಯಣ ತೈಲಗಳನ್ನು ಮಿಶ್ರ ಮಾಡಿ ಪಿಚಕಾರಿಯಲ್ಲಿ ತುಂಬಿಕೆಂಡು ಗುದದ್ವಾರದ ಮೂಲಕ ಒಳಕ್ಕೆ ಚಿಮ್ಮಿಸುವುದು. ಇದಾಗಿ ಕೆಲ ಕ್ಷಣಗಳಲ್ಲಿಯೆ ಮಲ ಪ್ರವೃತ್ತಿ ಪ್ರಾರಂಭವಾಗುವುದು. ಆದ್ದರಿಂದ ಶೌಚಾಲಯ ಅತಿ ಸಮೀಪವಿರುವ ಅಂದರೆ ಅಟ್ಯಾಚ್ಡ್ ಟಾಯ್ಲೆಟ್ ಇರುವ ಜಾಗ ಈ ಬಸ್ತಿ ಪ್ರಯೋಗಕ್ಕೆ ಬೇಕು. ವಾಯುವಿನ ಪ್ರಕೋಪದಿಂದಾಗಿ ಮಲ ಗಟ್ಟಿಗೊಂಡಿರುತ್ತದೆ, ಆಡಿನ ಒಕ್ಕೆಯಂತೆ ಉಂಡೆಉಂಡೆಯಾಗಿರುತ್ತದೆ.

ಒಟ್ಟಾಗಿ ಸುಲಭದಲ್ಲೇ ವಿಸರ್ಜನೆಗೊಳ್ಳದೇ ತೊಂದರೆಯುಂಟಾಗಿರುತ್ತದೆ. ಬಸ್ತಿ ಪ್ರಯೋಗ ಮಲವಿಸರ್ಜನೆಗೆ ಮಾರ್ಗ ಸುಗಮಗೊಳಿಸಲು ಸಹಾಯಕ.

ಶಿರೋಬಸ್ತಿ ಪ್ರಯೋಗವೂ ಈ ರೋಗದಲ್ಲಿ ಉಪಯುಕ್ತ. ಅಲ್ಲದೆ ಲಾಭದಾಯಕ ಕೂಡ. ಯಾಕೆಂದರೆ ಶಿರಾಗ್ರದ ಮೇಲೆ ಬೀಳುವ ತರ್ಪಣದಿಂದ ವಾಯು ಶಮನಗೊಳ್ಳುವುದಲ್ಲದೇ ಸ್ನಾಯು ತಂತ್ರ ಸಾಮಾನ್ಯವಾಗಿ ಕಾರ್ಯ ನಿರ್ವಹಿಸಲಾರಂಭಿಸುತ್ತದೆ.

ಲಕ್ವದ ಉಪಚಾರದಲ್ಲಿ ಅನೇಕ ಆಯುರ್ವೇದೀಯ ಔಷಧಿಗಳನ್ನು ವಿಧಿಸಲಾಗುತ್ತದೆ. ಯೋಗ್ಯ ಚಿಕಿತ್ಸಕರ ಸಲಹೆಯಂತೆ ಈ ಔಷಧಿಗಳನ್ನು ಸೇವಿಸಬೇಕು. ಬೃಹತ್ ವಾತ ಚಿಂತಾಮಣಿ ರಸ, ಏಕಾಂಗ ವೀರ ರಸ, ರಸರಾಜ ರಸ, ವಾತಕುಲಾಂತಕ ರಸ, ವಾತ ವಿಧ್ವಂಸ ರಸ, ಮಹಾಯೋಗರಾಜ ಗುಗ್ಗುಲ, ಬ್ರಾಹ್ಮಿ ವಟಿ ಇತ್ಯಾದಿ.

## ಪಂಚಕರ್ಮ ಉಪಚಾರ

ಲಕ್ವಕ್ಕೆ ಪಂಚಕರ್ಮ ಉಪಚಾರ ಸರ್ವೋತ್ತಮ ಚಿಕಿತ್ಸೆ. ಇದು ದೀರ್ಘಾವಧಿಯ ಕ್ರಮ. ಆದ್ದರಿಂದ ಲಕ್ವ ಪೀಡಿತನನ್ನು ಒಳ್ಳೆಯ ಆಯುರ್ವೇದ ಚಿಕಿತ್ಸಾಲಯದಲ್ಲಿ ದಾಖಲು ಮಾಡಬೇಕಾಗುತ್ತದೆ. ಇದರಿಂದ ರೋಗಮುಕ್ತಿಗೆ ಹೆಚ್ಚು ಅನುಕೂಲ.

ಪಂಚಕರ್ಮ ಆಯುರ್ವೇದದ ಶ್ರೇಷ್ಠ ಚಿಕಿತ್ಸಾ ವಿಧಿ. ಇದು ಅನೇಕ ರೋಗಗಳ ಮೂಲೋತ್ಪಾಟನಕ್ಕೆ ಉಪಯೋಗಿ. ಪಕ್ಷಾಘಾತಗಳಂಥ ವಾತವ್ಯಾಧಿಗಂತೂ ಅತ್ಯಂತ ಸೂಕ್ತ ಕ್ರಮ ಇದು.

## ಪಥ್ಯ ಕ್ರಮ

ತೀವ್ರ ಗುಣಮುಖನಾಗುವ ದಿಶೆಯಲ್ಲಿ ಲಕ್ವ ಪೀಡಿತನಿಗೆ ನೀಡುವ ಆಹಾರಗಳ ವಿಷಯವಾಗಿ ಆದಷ್ಟು ಜಾಗ್ರತೆ ವಹಿಸಬೇಕಾಗುತ್ತದೆ. ಕೊಡಬೇಕಾದ ಮತ್ತು ಕೊಡಬಾರದ ಆಹಾರ ಪದಾರ್ಥಗಳ ಕುರಿತು ಒಂದು ಪಟ್ಟಿಯನ್ನೇ ಮಾಡಿಟ್ಟುಕೊಳ್ಳುವುದಂತೂ ಅತ್ಯುತ್ತಮ ಕ್ರಮ. ರೋಗಿಗೆ ವಾತಪ್ರಕೋಪಕ್ಕೆ ಕಾರಣವಾಗುವ ಸಜ್ಜೆ, ಕಡಲೆ, ಉದ್ದಿನಬೇಳೆ, ಕಡಲೆಬೇಳೆ, ಕಡಲೆಹಿಟ್ಟು, ಅಕ್ಕಿ, ಬೆಂಡೆಕಾಯಿ, ಮಟಾಣಿ, ಸೇಂಗಾ ಮುಂತಾದವುಗಳನ್ನು ಕೊಡಲೇಕೂಡದು. ಅಲ್ಲದೆ ಸ್ರೋತಸವರೋಧಕಾರಕವಾದ ಮೊಸರು ಕೂಡ ಲಕ್ವ ಪೀಡಿತರಿಗೆ ವರ್ಜ್ಯ. ಲಘುವಾದ ಸುಲಭವಾಗಿ ಜೀರ್ಣಿಸಬಲ್ಲ ಆಹಾರ ಪದಾರ್ಥಗಳನ್ನು ಮಾತ್ರ ರೋಗಿಗೆ ನೀಡಬೇಕು. ಮಾತ್ರಾನುಸಾರ ತುಪ್ಪವನ್ನು ಕೊಡಲು ಅಡ್ಡಿಯಿಲ್ಲ.

ಧೂಮಪಾನ, ನೋವು ನಿವಾರಕ ಔಷಧಿ ಸೇವನೆ, ಮಾದಕ ಮತ್ತು ಮಂಪರು ತರಿಸುವ ಔಷಧ ದ್ರವ್ಯಗಳಿಂದ ರೋಗಿಯನ್ನು ದೂರವಿಡಬೇಕೆಂಬುದನ್ನು ಗಮನಿಸಬೇಕು.

ಈ ರೋಗದ ಆಕ್ರಮಣ ಯಾವ ಹೊತ್ತಿನಲ್ಲಿ, ಯಾರ ಮೇಲಾದರೂ ಆಗಬಹುದಾಗಿದೆ. ಆದ್ದರಿಂದ ಇದರಿಂದ ದೂರವಿರಲು ಉಪಾಯ ಹುಡುಕುವುದೇ ಜಾಣರ ಲಕ್ಷಣ. ಈ ಕೆಳಗಿನ ಅಂಶಗಳನ್ನು ಗಮನಿಸಿ:

೧. ನಿರಂತರವಾಗಿ ಇಲ್ಲವೆ ಹೆಚ್ಚು ಕಾಲ ಕೂಲರ್ ಅಥವಾ ವಾತಾನುಕೂಲಿತ ಕೋಣೆಯಲ್ಲಿ

ಇರಬೇಡಿ. ಈ ಕೃತ್ರಿಮ ತಂಪು ಹವೆ ಲಕ್ವವನ್ನು ಆಮಂತ್ರಿಸಿಕೊಳ್ಳಲು ಕಾರಣವಾಗುತ್ತದೆ.

೨. ಶೀತ ಮತ್ತು ಉಷ್ಣ ವಾತಾವರಣಗಳಲ್ಲಿ ಮೇಲಿಂದ ಮೇಲೆ ಇರುವುದು ಶರೀರದ ಸ್ನಾಯು ವ್ಯವಸ್ಥೆ ಮತ್ತು ವಾತ ವ್ಯವಸ್ಥೆಯನ್ನು ಅಸಂತುಲಿತಗೊಳಿಸುತ್ತದೆ. ಇದರಿಂದ ಪಕ್ಷಾಘಾತಕ್ಕೆ ಪಕ್ಕಾಗುವ ಸಾಧ್ಯತೆ ಹೆಚ್ಚು. ಆದ್ದರಿಂದ ಇಂಥ ಸ್ಥಿತಿಗಳಿಂದ ಶರೀರವನ್ನು ಕಾಪಾಡಿಕೊಳ್ಳುವುದು ಅಗತ್ಯ.

೩. ರಕ್ತದೊತ್ತಡ ಹೆಚ್ಚಿಗಿರುವ ವ್ಯಕ್ತಿಗಳೇ ಲಕ್ವಪೀಡಿತರಾಗುವುದು ಸಾಮಾನ್ಯವಾಗಿ ಗಮನಿಸಲ್ಪಟ್ಟಿರುವ ಅಂಶ. ಆದ್ದರಿಂದ ರಕ್ತದೊತ್ತಡವನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಬೇಕಾದ್ದು ಅನಿವಾರ್ಯ.

೪. ಋತುಯೋಗ್ಯವಲ್ಲದ ತರಕಾರಿಗಳು, ಹಣ್ಣು-ಹಂಪಲುಗಳ ಸೇವನೆ ಶರೀರದ ಮೇಲೆ ಪ್ರತಿಕೂಲ ಪರಿಣಾಮಗಳನ್ನುಂಟು ಮಾಡುತ್ತದೆ. ಆದ್ದರಿಂದ ಅಂಥವುಗಳನ್ನು ಸೇವಿಸದಿರುವುದೇ ಒಳ್ಳೆಯದು.

೫. ತಂಗಳು ಆಹಾರವನ್ನು ಮರುದಿನ ಬಿಸಿ ಮಾಡಿಕೊಂಡು ತಿನ್ನುವುದು ಹಾನಿಕಾರಕ. ಇಂಥ ಆಹಾರದಲ್ಲಿ ಒಂದು ರೀತಿಯ ವಿಷ ಉತ್ಪನ್ನವಾಗಿರುತ್ತದೆ. ಅದು ಅಷ್ಟು ತೀವ್ರವಾಗಿರದಿದ್ದರೂ ಹಾನಿಕಾರಕನಂತೂ ದಿಟ. ಇಂಥ ಆಹಾರ ಸೇವನೆಯಿಂದ ಅವಯವಗಳ ಕ್ರಿಯೆಗೆ ಅಡ್ಡಿಯುಂಟಾಗುತ್ತದೆ.

೬. ರಾತ್ರಿ ಹೊತ್ತು ಮೊಸರು ಸೇವಿಸುವುದು ಒಳಿತಲ್ಲ. ಇದರಿಂದ ಸ್ರೋತೋರೋಧ ಉಂಟಾಗುತ್ತದೆ. ಈ ಸ್ರೋತೋರೋಧ ಪಕ್ಷಾಘಾತಕಾರಕವಾದ ಪ್ರಮುಖ ಕಾರಣಗಳಲ್ಲೊಂದು.

೭. ಮಲ-ಮೂತ್ರ ವಿಸರ್ಜನೆ ಆಯಾ ಸಮಯಾನುಸಾರ ಆಗಬೇಕು. ಅದನ್ನೆಂದೂ ತಡೆಗಟ್ಟಲು ಹೋಗಬೇಡಿ. ಒಂದು ವೇಳೆ ತಡೆಗಟ್ಟಿದಿರೋ ಶರೀರದ ವಾತ ವ್ಯವಸ್ಥೆ ಅಸ್ತವ್ಯಸ್ತಗೊಳ್ಳುತ್ತದೆ. ಮತ್ತು, ಅರ್ಧಾಂಗವಾಯು ಅತ್ಯಾನಂದದಿಂದ ಆಕ್ರಮಣ ನಡೆಸುತ್ತದೆ.



## ಪುಷ್ಪ ಭೋಜನ!

ಹೂಗಳನ್ನು ಬರಿ ಅಲಂಕಾರಕ್ಕಾಗಿ ಬಳಸಿದರೇನು ಬಂತು? ಅಥವಾ ಅವುಗಳ ಸುವಾಸನೆಯನ್ನು ನೋಡಿ ಒಗೆದರೇನು ಬಂತು?- ಅವು ಇಷ್ಟೊಂದು ಜೀವಸತ್ವಗಳನ್ನೂ ಸಸಾರಜನಕಗಳನ್ನೂ ಒಳಗೊಂಡಿರುವಾಗ! ಎಂಬ ವಿಚಾರ ಫ್ರಾಂಕೋಯಿ ಲ ಲೆಗಾಡೆ ಎಂಬ ಫ್ರೆಂಚ್ ತೋಟಗಾರಿಕೆ ತಜ್ಞನಿಗೆ ಬಂತು. ಸರಿ. ಬಾಯಿಯನ್ನೇ ಪ್ರಯೋಗಶಾಲೆಯನ್ನಾಗಿಸಿಕೊಂಡು ಪ್ರಯೋಗಗಳನ್ನು ನಡೆಸಿ ರುಚಿಕರವಾದ ಹೂಗಳನ್ನು ಗುರುತಿಸಿಯೇ ಬಿಟ್ಟ. ಆ ಹೂಗಳನ್ನೇ ಬಳಸಿ ಹೊಸ ಹೊಸ ಪಾಕವಿಧಾನಗಳನ್ನೂ ರೂಪಿಸಿದ. ಹೂಗಳ ಅಡುಗೆ ರುಚಿಕರವಾಗಿದ್ದರಿಂದ ಹಾಗೂ ತಿನ್ನಬಹುದಾದ ಹೂಗಳನ್ನು ಅಡುಗೆಯ ಮೇಲೆ ಅಲಂಕಾರಕ್ಕಾಗಿಯೂ ಬಳಸಬಹುದಾದ್ದರಿಂದ ಅನೇಕ ಫ್ರೆಂಚ್ ಐಷಾರಾಮಿ ಹೊಟೇಲುಗಳು ಲೆಗಾಡೆಯ ಪಾಕವಿಧಾನವನ್ನು ಅನುಸರಿಸುತ್ತಿವೆ. ಈ ಹೊಟೇಲುಗಳಿಗೆ ಪೂರೈಸಲು ಲೆಗಾಡೆಯೀಗ ಖಾದ್ಯಯೋಗ್ಯ ಹೂಗಳನ್ನು ಬೆಳೆಯುತ್ತಿದ್ದಾನೆ.

ಮೂರು ಸಾವಿರ ವರ್ಷಗಳಿಂದಲೂ ಹಾಗೆಯೆ ಇದೆ

# ಆಲಸಿಗರ ನಾಡು ಜೆರ್ಬಾ

• 'ಎಂ. ದೀಪಾ'

(ಆಧಾರ: ಪ್ಯಾರಿಸ್ಸಿನ 'ರಿಯಲಿಟೀಸ್')

ನಮಗೆ ಮಹಾಭಾರತ ಹೇಗೋ ಗ್ರೀಕರಿಗೆ ಒಡಿಸ್ಸಿ. ಟ್ರೋಜನ್‌ಯುದ್ಧ ಮುಗಿದ ನಂತರ ಯೂಲಿಸಸ್ ತಾಯಿನಾಡಾದ ಇಥಾಕಾವನ್ನು ಸೇರುವ ಮುನ್ನ ಪಥಭ್ರಷ್ಟನಾಗಿ ನಾನಾ ನಾಡುಗಳನ್ನು ಅಲೆದದ್ದನ್ನು ಒಡಿಸ್ಸಿಯ ಕರ್ತೃವಾದ ಹೋಮರನು ಒಳ್ಳೆ ರಸವತ್ತಾಗಿ ವರ್ಣಿಸುತ್ತಾನೆ. ಅವನು ಹೀಗೆ ವರ್ಣಿಸಿದ ನಾಡುಗಳಲ್ಲಿ ಈಗ ಟ್ಯುನೀಶಿಯಕ್ಕೆ ಸೇರಿರುವ ಜೆರ್ಬಾ ದ್ವೀಪವೂ ಒಂದು. ಮೂರು ಸಾವಿರ ವರ್ಷಗಳ ಹಿಂದೆ ಹೋಮರನು ವರ್ಣಿಸಿದಾಗ ಹೇಗಿತ್ತೋ ಇಂದಿಗೂ ಜೆರ್ಬಾ ಹಾಗೆಯೆ ಇದೆ. ಬಹುಶಃ ಕಾಲರಾಯನ ಪ್ರತಾಡನೆಯಿಂದ ಆಘಾತಕ್ಕೊಳಗಾಗದ ಪ್ರದೇಶವೆಂದರೆ ಇಡಿ ಜಗತ್ತಿನಲ್ಲಿ ಜೆರ್ಬಾ ಒಂದೆ ಎಂದು ಜಾನ್ ಬ್ಲೂಮ್‌ಫೀಲ್ಡ್ ಎಂಬ ಬ್ರಿಟಿಶ್ ಲೇಖಕ ಹೇಳಿದ್ದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ಹೋಮರನು ಜೆರ್ಬಾವನ್ನು ರಸವತ್ತಾಗಿ ವರ್ಣಿಸಿದ್ದರೂ ವಾಸ್ತವವಾಗಿ ಇದೊಂದು ನೀರಸ ದ್ವೀಪ. ವಿಮಾನದಿಂದ ನೋಡಿದಾಗ ಈಜು ರೆಕ್ಕೆಯ ಮೀನೊಂದು ಸತ್ತು ಬಿದ್ದಂತೆಯೆ ಕಾಣುತ್ತದೆ. ಬಹಳವೆಂದರೆ ದ್ವೀಪ ಇಪ್ಪತ್ತು ಮೈಲು ಉದ್ದ, ಹದಿನೈದು ಮೈಲು ಅಗಲವಿದ್ದೀತು. ಇಲ್ಲಿ



ಪರ್ವತಗಳಿಲ್ಲ, ಪ್ರಾಕೃತಿಕ ದೃಶ್ಯಗಳಿಲ್ಲ, ಕೆರೆ-ಸರೋವರಗಳಿಲ್ಲ; ಕೊನೆಗೆ ಒಂದು ಸಣ್ಣ ತೊರೆಯೂ ಇಲ್ಲ.

ಅಲ್ಲಲ್ಲಿ ಸುಣ್ಣ ಬಳಿದ ಮನೆಗಳು. ಪ್ರತಿ ಮನೆಗೂ ಒಂದೊಂದು ಗುಮ್ಮಟ. ಬಾಗಿಲುಗಳ ಅಕ್ಕಪಕ್ಕದಲ್ಲಿ ಕಿಟಕಿಗಳೇ ಇಲ್ಲದ್ದರಿಂದ ಒಳಗೆಲ್ಲಾ ಬಿಸಿಬಿಸಿ ವಾತಾವರಣ. ಮನೆಯಲ್ಲಿ ಹೊಕ್ಕೊಡನೆಯೆ ಕೋಟೆಯಲ್ಲಿ ಹೊಕ್ಕಂತೆಯೇ ಆಗುತ್ತದೆ. ಒಂದೊಂದು ಮನೆಯೂ ಒಂದೊಂದು ಕೋಟೆ.

ಊರಲ್ಲಿ ಸಾಗುತ್ತಿರುವಾಗ ಮೋಟುಗೋಡೆ ಸುತ್ತುವರೆದ ತೋಟಗಳು. ಮೋಟು ಗೋಡೆಯ ಹಿಂದೆಯೆ ಪಾಪಾಸು ಕಳ್ಳಿ. ಬಹುಶಃ ಕಳ್ಳರಿಗೆ ಅಭೇದ್ಯವಾಗಿರಲು ಅಲ್ಲಿಯವರು ಈ ವ್ಯವಸ್ಥೆ ಮಾಡಿರಬೇಕು. ಈ ಪಾಪಾಸು ಕಳ್ಳಿಗಳ ಆಚೆ ಖರ್ಜೂರದ ಗಿಡಗಳು, ಆಲಿವ್ ವೃಕ್ಷಗಳು, ತರಹ ತರಪದ ಹಣ್ಣಿನ ಗಿಡಗಳು. ಅಲ್ಲದೆ ಇಲ್ಲಿ ಬಾರ್ಲಿಯನ್ನೂ ಮೆಣಸನ್ನೂ ಹೇರಳವಾಗಿ ಬೆಳೆಯಲಾಗುತ್ತಿದೆ. ಇಲ್ಲಿನ ಬದನೆ ಬಲು ರುಚಿ. ಹಾಗೆಂದೆ ದಿನ ನಿತ್ಯ ನಾವೆಗಳ ಮೂಲಕ ಮಾತೃ ಭೂಮಿಯಾದ ಟ್ಯುನೀಶಿಯಕ್ಕೆ ಅವುಗಳ ಸಾಗಾಟ. ಸಮುದ್ರದ ನೀರಿನಿಂದ ಇವುಗಳನ್ನೆಲ್ಲ ಬೆಳೆಯಲು ಸಾಧ್ಯವಿಲ್ಲದ್ದರಿಂದ ಈ ಪುಟ್ಟ ದ್ವೀಪದಲ್ಲಿ ೪೦೦೦ ಕಡೆ ಬಾವಿಗಳನ್ನು ತೋಡಿ ಪಂಪ್ ಮೂಲಕ ತೋಟಗಳಿಗೆ ನೀರನ್ನು ಪೂರೈಸಲಾಗುತ್ತಿದೆ. ಒಂದು ತೋಟಕ್ಕೆ ನೀರನ್ನು ಪೂರೈಸಿದ ನಂತರ ಇನ್ನೊಂದು ತೋಟಕ್ಕೆ. ನೀರಿನ ವಿತರಣೆ ಸರಿಯಾಗಿರಲು ಇಲ್ಲಿ ಅಧಿಕಾರಿಗಳನ್ನೇ ನಿಯಮಿಸಲಾಗಿದೆ.

ರಸ್ತೆಗಳು ಕೂಡುವಲ್ಲೆಲ್ಲ ಒಂದೊಂದು ಚಿಕ್ಕ ಮಸೀದೆ. ಪ್ರಾಂಗಣದ ಒಳಗೆ ಒಂಟೆ ಕಟ್ಟಲು ಸ್ಥಳ. ಒಂದೆಡೆ ಮುಖಮಾರ್ಜನಕ್ಕಾಗಿ ಒಂದು ಬಾವಿ. ಪ್ರಾರ್ಥನೆಗಾಗಿ ವಿಶಾಲವಾದ ಸ್ಥಳ. ಇಪ್ಪತ್ತು ಮೈಲು ಉದ್ದ, ಹದಿನೈದು ಮೈಲು ಅಗಲದ ಈ ದ್ವೀಪದಲ್ಲಿ ಮುನ್ನೂರಕ್ಕೂ ಹೆಚ್ಚು ಮಸೀದೆಗಳು! ಆದರೆ ವಿನ್ಯಾಸದಲ್ಲಿ ಒಂದೊಂದು ಮಸೀದೆಯೂ ಒಂದೊಂದು ತೆರ.

ನಮ್ಮ ಲೆಕ್ಕದಲ್ಲಿ ಒಂದು ಹಳ್ಳಿ ಯೆನಿಸಬಹುದಾದರೂ ಇಲ್ಲಿನವರ ದೃಷ್ಟಿಯಲ್ಲಿ ಹೌಂಟ್ ಸೌಕ್ ಒಂದು ದೊಡ್ಡ ನಗರ. ಸೋಮವಾರ ಹಾಗೂ ಗುರುವಾರ ಹೀಗೆ ವಾರದಲ್ಲೆರಡು ಬಾರಿ ಸಂತೆ. ಕಾಲ್ನಡಿಗೆಯಿಂದಲೋ ಒಂಟೆ ಸವಾರಿಯ ಮೂಲಕವೋ ಟಾಂಗಾದ ಮೇಲಿನಿಂದಲೋ ಎತ್ತಿನ ಬಂಡಿಗಳ ಮೂಲಕವೋ ಇವಾವವೂ ಇಲ್ಲದಿದ್ದರೆ ಕತ್ತೆಯ ಮೇಲೆ ಕುಳಿತುಕೊಂಡೋ ನಸುಕಿನಲ್ಲಿ ಜನರು ಬರಲು ಆರಂಭಿಸುತ್ತಾರೆ. ಸಂಜೆಯವರೆಗೂ ಸಂತೆ. ಅಕ್ಟೋಬರಿನಲ್ಲಿ ಭರ್ಜರಿಯಾಗಿ ವ್ಯಾಪಾರ ನಡೆಯುತ್ತದೆ. ಆಗ ಸಂತೆಯಲ್ಲಿ ಎಲ್ಲಿ ನೋಡಿದಲ್ಲಿ ಖರ್ಜೂರ, ದಾಳಿಂಬ, ಗಜಗಾತ್ರದ ಕುಂಬಳ. ವ್ಯಾಪಾರಕ್ಕೆಂದು ಬರುವವರು ಕೆಲವರಾದರೆ ಸಂತೆಯನ್ನು ನೋಡಲೆಂದೇ ಬರುವವರು ಹಲವರು.

ಹೌಂಟ್ ಸೌಕ್‌ದಲ್ಲಿ ಅಲ್ಲಲ್ಲಿ ಚಿಕ್ಕ ಚಿಕ್ಕ ಚಹದಂಗಡಿಗಳು. ಅಂಗಡಿಗಳ ಸುತ್ತ ಗಿಡಗಳು. ಗಿಡಗಳ ನೆರಳಿನಲ್ಲಿ ಗಿರಾಕಿಗಳಿಗೆ ಚಹದ, ತಿಂಡಿತಿನಿಸುಗಳ ಸರಬರಾಜು. ಸಂಜೆಯ ಮುಂದೆ ಬರುವ ಗಿರಾಕಿಗಳು ಇಸ್ಪೀಟನ್ನೋ ಪಗಡೆಯ ಆಟವನ್ನು ಹೋಲುವ ಡಾಮಿನೋವನ್ನೋ ಆಡುತ್ತಾ ಕಾಲ ಕಳೆಯುತ್ತಾರೆ. ಚಹದಂಗಡಿಯವರೇ ಚಹದೊಟ್ಟಿಗೆ ಇವುಗಳನ್ನೂ ಬಾಡಿಗೆಗೆ ಸರಬರಾಜು ಮಾಡುತ್ತಾರೆ. ಇಲ್ಲಿ ಜನರು ಆಡುವ ಜೂಜಾಟದಿಂದಲೂ ಹೊಟೇಲಿನವರಿಗೆ ಭರ್ಜರಿ ಆದಾಯ. ಬೇಕೆಂದರೆ ಹುಕ್ಕಾ ಕೂಡ ಬಾಡಿಗೆಯಿಂದ ಲಭ್ಯ.

ಕಾನೂನಿನ ಪ್ರಕಾರ ಸ್ತ್ರೀಯರಿಗೂ ಪುರುಷರಿಗೂ ಸಮಾನವಾದ ಅಧಿಕಾರ. ಆದರೆ ಹೋಟೆಲನ್ನು ಪ್ರವೇಶಿಸುವ ಧೈರ್ಯವನ್ನು ಈವರೆಗೆ ಯಾವ ಹೆಂಗಸೂ ಮಾಡಿಲ್ಲ. ಗಂಡ ಒಳ್ಳೆ ಜರ್ಬಿನಿಂದ ಕತ್ತೆಯ ಮೇಲೆ ಸಾಗುತ್ತಿದ್ದರೆ ಹೆಂಡತಿ ನಡೆದುಕೊಂಡೇ ಬರಬೇಕು- ಅವಳೂ ಕತ್ತೆಯ ಮೇಲೆ ಕುಳಿತರೆ ಗಂಡನ ಮರ್ಯಾದೆಗೆ ಎಲ್ಲಿ ಧಕ್ಕೆ ಬರುವುದೋ ಎಂಬ ಕಾರಣದಿಂದ. ಆದರೂ ಅಲ್ಲಿನವರ ಪ್ರಕಾರ ಈಗೀಗ ಜೆರ್ಬಾದಲ್ಲಿ ಅಷ್ಟಿಷ್ಟು ಸುಧಾರಣೆಯ ಗಾಳಿ ಬೀಸುತ್ತಿದೆ-

ಹೆಂಗಸರು ಮೊದಲಿನ ಹಾಗೆ ಘೋಷಾ ಧರಿಸುವುದಿಲ್ಲ. ಆದರೆ ದಾರಿಯಲ್ಲಿ ನಡೆಯುವಾಗ ಎದುರಿಗೆ ಯಾರಾದರೂ ಗಂಡಸರು ಬರುವುದನ್ನು

ನೋಡಿದರೆ ತಕ್ಷಣ ನಿಲುವಂಗಿಯಿಂದ ಮುಖ ಮುಚ್ಚಿಕೊಳ್ಳಲು ಮರೆಯುವುದಿಲ್ಲ.

ಇಲ್ಲಿನ ಜನ ಯಾವುದನ್ನೂ ತಲೆಗೆ ಹಚ್ಚಿಕೊಳ್ಳದವರು. ಪ್ರವಾಸಿಯೊಬ್ಬ ಕ್ಷೌರ ಮಾಡಿಸಿಕೊಳ್ಳಲು ಗೂಡಂಗಡಿಗೆ ಹೋದ. ಕ್ಷೌರ ನಡೆಯುತ್ತಿರುವಾಗಲೆ ಛಾವಣಿಯಿಂದ ಮಣ್ಣು ಬೀಳಲಾರಂಭಿಸಿತು. ಇದೇನು ನಿತ್ಯದ ಸಂಗತಿ ಎನ್ನುವ ಹಾಗೆ ಹಜಾಮ ಅದರತ್ತ ಒಂದಿಷ್ಟು ಗಮನ ಹರಿಸದೆ ಕ್ಷೌರ ಮಾಡುತ್ತಲೇ ಹೋದ. ಕ್ಷೌರಿಕನ ಸೇವಕನೊಬ್ಬ ಬಿದ್ದ ಮಣ್ಣನ್ನೆಲ್ಲ ಗುಡಿಸಿ ಇನ್ನೂ ಮೇಲಿನಿಂದ ಆಗಾಗ ಬೀಳುತ್ತಿದ್ದ ಮಣ್ಣನ್ನು ನೋಡುತ್ತಾ ಹಾಗೆಯೆ ಕುಳಿತ. ಛಾವಣಿ ಎಲ್ಲಿ ಕಡಿದುಕೊಂಡು ಬೀಳುತ್ತದೋ ಎಂಬ ಆತಂಕ ಆ ಪ್ರವಾಸಿಗೆ. ಆದರೆ ಕ್ಷೌರಿಕನಿಗೆ ಅದರತ್ತ ಗಮನವೇ ಇಲ್ಲ.

ಹನ್ನೆರಡರಿಂದ ಹದಿನಾರನೆಯ ಶತಮಾನದ ಮಧ್ಯದ ಅವಧಿಯನ್ನು ಹೊರತುಪಡಿಸಿದರೆ ಇತಿಹಾಸಕಾಲದಿಂದಲೂ ಜೆರ್ಬಾ ಹಿಂಸೆಯನ್ನು ಅನುಭವಿಸಿಲ್ಲ; ಯುದ್ಧದ ರುಚಿಯನ್ನು ಕಂಡಿಲ್ಲ. ಆದರೆ ಆ ಅವಧಿಯಲ್ಲಿ ಮಾತ್ರ ದ್ವೀಪ ಸಮುದ್ರಗಳ್ಳರಿಂದ ಜರ್ಜರಿತವಾಯಿತು. ೧೫೬೦ರಲ್ಲಿ ಬರ್ಬರ ಜನಾಂಗದ ಡ್ರಾಗುಟ್ ಎಂಬ ಸಮುದ್ರಗಳ್ಳನ ನೇತೃತ್ವದಲ್ಲಿ ಕೊಳ್ಳೆ ಹೊಡೆದ ಗುಂಪಂತೂ ಇಲ್ಲಿನ ಜನರನ್ನು ಕೊಂದು, ಮುಂಡದಿಂದ ರುಂಡವನ್ನು ಬೇರ್ಪಡಿಸಿ ಹೌಂಟ್‌ಸೌಕ್‌ದ ಹೊರಗೆ ಒಟ್ಟಿತಂತೆ. ಸತ್ತವರ ದಿಬ್ಬ ಇನ್ನೂ ಇದೆ.

ಇಲ್ಲಿನ ಹಾರಾ ಕಬೀರಾ ಮತ್ತು ಹಾರಾ ಶ್ರೀರಾ ಎಂಬ ಎರಡು ಹಳ್ಳಿಗಳಲ್ಲಿ ಮಾತ್ರ ಯಹೂದ್ಯರಿದ್ದಾರೆ. ಉಳಿದ ಕಡೆಗಳಲ್ಲಿ ಬರಿ ಮುಸಲ್ಮಾನರು. ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ನೆಬುಛಡ್ನೆಜರನ ಕಾಲದಲ್ಲಿ ಅವನ ಕಾಟವನ್ನು ತಾಳಲಾರದೆ ಯಹೂದ್ಯರು ಇಲ್ಲಿಗೆ ಬಂದರಂತೆ. ಅಂದಿನಿಂದಲೂ ಅವರು ಸ್ಥಳೀಯರೊಂದಿಗೆ ಸಾಮರಸ್ಯದಿಂದಲೆ ಇದ್ದಾರೆ. ಇಲ್ಲಿನ ಸಿನಾಗಾಗ್‌ನಲ್ಲಿ ಯಹೂದ್ಯ ಧರ್ಮಪಂಡಿತರು ಎರಡು ಸಾವಿರ ವರ್ಷಗಳಷ್ಟು ಹಳೆಯದಾದ, ಚರ್ಮದ ಕಾಗದದ ಮೇಲೆ ಬರೆದ 'ಥೋರಾ' ಧರ್ಮಗ್ರಂಥವನ್ನು ಜತನವಾಗಿರಿಸಿದ್ದಾರೆ.

ಗುಯೆಲ್ಲಾ ಎಂಬ ಹಳ್ಳಿ ಕುಂಬಾರರ ಹಳ್ಳಿಯೆಂದೇ ಪ್ರಖ್ಯಾತ. ಇಲ್ಲಿ ತಯಾರಾಗುವ ವಿವಿಧ ಆಕಾರದ ಚಿತ್ತಾರದ ಕೆಲಸವುಳ್ಳ ಮಡಿಕೆಗಳಿಗೆ ಪ್ರವಾಸಿಗರಿಂದ ಭಾರಿ ಬೇಡಿಕೆ.

ಆಧುನಿಕತೆಗೆ ಬೇಸತ್ತು ಹಳೆಗಾಲದ ಅನುಭವವನ್ನು ಪಡೆಯಬೇಕೆನ್ನುವವರು ಮಾತ್ರ ಬರುವ ದ್ವೀಪವಿದು. ಇಲ್ಲಿಗೆ ಬರುವವರೆಲ್ಲ ಬಹುತರವಾಗಿ ಯುರೋಪಿಯನ್ನರೆ.

●

---

## ಹೊಟ್ಟೆಬಾಕ ಬರೆದ ಮಿತಾಹಾರದ ಪುಸ್ತಕ

**ಲು**ಯ್ಗಿ ಕೊರ್ನಾರೋ ಎಂಬಾತ ಆಢ್ಯಕುಲಕ್ಕೆ ಸೇರಿದ ಇಟಾಲಿಯನ್ ಮನುಷ್ಯ. ವೆನಿಸ್ಸಿನಲ್ಲಿ ವಾಸ. ನಾಲ್ವತ್ತು ವರ್ಷಗಳಾಗುವವರೆಗೂ ಹೊಟ್ಟೆ ಬಿರಿಯುವಂತೆಯೇ ತಿಂದ; ತಿಂಡಿಪೋತನೆಂದೆ ಹೆಸರಾದ. ಆದರೆ ಹಾಗೆಲ್ಲ ಲಂಗುಲಗಾಮಿಲ್ಲದೆ ತಿನ್ನುವುದು ಆರೋಗ್ಯಕ್ಕೂ ಅಪಾಯಕರ ಎಂಬ ಜ್ಞಾನೋದಯ ನಾಲ್ವತ್ತನೆಯ ವರ್ಷ ನಡೆಯುತ್ತಿದ್ದಾಗ ಆಯಿತೇನೋ, ಬೇಕಾಬಿಟ್ಟೆಯಾಗಿ ತಿನ್ನುವುದನ್ನು ನಿಲ್ಲಿಸಿ ನಿತ್ಯದ ಆಹಾರ ಸೇವನೆಯನ್ನು ಬರಿ ಹದಿನಾಲ್ಕು ಔಂಸುಗಳಿಗೆ ಮಿತಗೊಳಿಸಿದ. ಆತ ೧೦೨ ವರ್ಷಗಳವರೆಗೂ ಬದುಕಿದ್ದ. ಬದುಕಿರುವವರೆಗೂ ಗಟ್ಟಿಮುಟ್ಟಾಗಿಯೇ ಇದ್ದ. ೧೫೬೬ರಲ್ಲಾತ ತೀರಿಕೊಂಡ. ತೀರಿಕೊಳ್ಳುವುದಕ್ಕಿಂತ ಸ್ವಲ್ಪ ಮೊದಲು ಮಿತಾಹಾರವೇ ಆರೋಗ್ಯಕ್ಕೆ ದೀರ್ಘಾಯುಷ್ಯಕ್ಕೂ ತಾರಕ ಎನ್ನುವುದನ್ನು ಬಿಂಬಿಸುವ ಪ್ರಬಂಧ ಸಂಕಲನವೊಂದನ್ನು ಹೊರತಂದ. ಬಹಳ ವರ್ಷಗಳಿಂದ ಧೂಳು ತಿನ್ನುತ್ತ ಬಿದ್ದ ಅವನ ಕೃತಿ ಇತ್ತೀಚೆಗೆ ವಿಜ್ಞಾನಿಗಳ ಗಮನವನ್ನು ಸೆಳೆಯುತ್ತಿದೆ.

# ಸಾವು

• ಸವಿತಾ ನಾಗಭೂಷಣ

ಅವನದು–
ಮಾತಿನಿಂದ ಮೈಥುನದವರೆಗೆ
ಎಲ್ಲವೂ ಹಿತಮಿತ
ತೂಕದ ವ್ಯವಹಾರ.
ಅರವತ್ತರ ಇಳಿವಯಸ್ಸಿನಲ್ಲೂ
ಕಪ್ಪನೆಯ ಒತ್ತಾದ ಕೂದಲು
ಉಬ್ಬರಿಸದ ಹೊಟ್ಟೆ
ಸಂಯಮ ಫಲ.

ಇವನದು–
ಅತಿಯೆ ಆಡಂಬರ
ಪೂಜೆ–ಪುನಸ್ಕಾರ
ತುಂಬಿದ ಸಂಸಾರ
ಹೆಣ್ಣು ಹೊನ್ನು ಮಣ್ಣಿನಲಿ
ಹೆಚ್ಚು ರುಚಿ.
ಮೋಸ–ದಗಾ–ವಂಚನೆ
ಎಲ್ಲಾ ಒಂದೇ......
ಗೊಂದಲವಿಲ್ಲ;

ಇದು–
ಮರದ ಹಾಗೆ ಬೆಳೆಯಿತು
ಜೀವ.
ನದಿಯ ಹಾಗೆ ಹರಿಯಿತು
ಭಾವ.
ಫಳಫಳ ಫಳಫಳ
ಮಿಂಚಿ ಹೋಯಿತು ಕಾಲ.

ಅವರವರ ಮನೆಯಲಿ
ಗೊತ್ತಾದ ಸಮಯದಲಿ
ಯಾರೂ ಬಂದ ಹಾಗಿರಲಿಲ್ಲ
ಯಾರೂ ಹೋದ ಹಾಗಿರಲಿಲ್ಲ;
ಆ ಕ್ಷಣವು ತಲ್ಲಣವೋ.....
ಆ ಕ್ಷಣವು ರೋಮಾಂಚನವೋ....

ಅವರು–
ಇದ್ದಂತೆ ಇರಲಿಲ್ಲ;



# ಆದರದು ಬಲು ರೋಚಕ ಇತಿಹಾಸ



ವ್ಯಕ್ತಿಯೊಬ್ಬನ ಎತ್ತರ, ದಪ್ಪ,ಮೈ ಬಣ್ಣ ಕೂದಲಿನ ಬಣ್ಣ ಹಾಗೂ ಉದ್ದ, ಆತನ ಮೈಮೇಲಿನ ಚುಕ್ಕೆಗಳು ಇತ್ಯಾದಿಗಳಿಂದ ಆತನನ್ನು ಗುರುತಿಸುವುದು ಬಹು ಹಿಂದಿನಿಂದ ರೂಢಿಯಲ್ಲಿರುವ ಪದ್ಧತಿ. ಆದರೆ ಇದು ಪರಿಪೂರ್ಣ ಪದ್ಧತಿಯೇ ? ಅಲ್ಲವೆಂದೇ ಹೇಳಬೇಕಾಗುತ್ತದೆ. ಯಾಕೆಂದರೆ ಒಬ್ಬ ವ್ಯಕ್ತಿಯ ಈ ಚಹರೆಗಳನ್ನೆಲ್ಲ ಹೋಲುವ ಇನ್ನೊಬ್ಬನಿರುವ ಸಾಧ್ಯತೆಯೂ ಇದೆಯಲ್ಲ. ಅಲ್ಲದೆ, ಅವಳಿ ಮಕ್ಕಳಲ್ಲಿ ಇಂಥ ಸಾಮ್ಯ ನೂರಕ್ಕೆ ನೂರರಷ್ಟು ಇರುತ್ತದೆ. ಇಂಥದರಲ್ಲಿ ನಿಜವಾದ ಅಪರಾಧಿಯನ್ನು ಹಿಡಿಯುವ ಕೆಲಸ ಅಷ್ಟು ಸುಲಭದ್ದಾಗಿರಲಿಲ್ಲ. ಅಪರಾಧಿಯ ಬದಲಾಗಿ ಆತನನ್ನೇ ಹೋಲುವ ನಿಷ್ಪಾಪಿ-ಮುಗ್ಧ ವ್ಯಕ್ತಿ ಸಿಕ್ಕಿ ಬಿದ್ದು ಸಂಕಷ್ಟಕ್ಕೀಡಾದ ಉದಾಹರಣೆಗಳೂ ಅನೇಕ.

ಆ ಕಾಲದಲ್ಲಿ ಕಳವು, ದರೋಡೆ, ಕನ್ನ ಮುಂತಾದ ಅಪರಾಧಗಳಲ್ಲಿ ತೊಡಗಿದ ವ್ಯಕ್ತಿಗೆ ವಿಧಿಸುತ್ತಿದ್ದ ಶಿಕ್ಷೆಯೆಂದರೆ ಅಂಥವನ ಕೈ ಕತ್ತರಿಸಿ ಹಾಕುವುದು. ಸ್ತ್ರೀಯರ ಮೇಲಿನ ಅತ್ಯಾಚಾರ,

# 'ಬೆರಳು ಮುದ್ರೆ'ಗಳ ಶಾಸ್ತ್ರ ಬೆಳೆದು ಬಂದದ್ದು ಹೀಗೆ.....

• ಈಶ್ವರ ಎಸ್. ಎಣ್ಣೇರ

ಶೀಲಹರಣ ಮುಂತಾದ ಅಪರಾಧಗಳು ಸಾಬೀತಾದರೆ ಅಂಥ ವ್ಯಕ್ತಿಯ ಮೂಗು ಕುಯ್ದು ಹಾಕುವ ಪದ್ಧತಿಯೂ ಆಗ ಇತ್ತು. ಆದರೆ ವ್ಯಕ್ತಿಯೊಬ್ಬ ತನ್ನ ವೃತ್ತಿಸಂಬಂಧಿ ಅವಘಡಗಳಲ್ಲಿ ಅಥವಾ ಇನ್ನಿತರ ಆಕಸ್ಮಿಕಗಳಿಂದಾಗಿ ಕೈ ಇಲ್ಲವೆ ಮೂಗು ಕಳೆದುಕೊಂಡರಂತೂ ಅಂಥವನಿಗೆ ಇಬ್ಬಗೆಯ ಸಂಕಟ: ಒಂದು, ಅಂಗವನ್ನು ಕಳೆದುಕೊಂಡದ್ದು ಮತ್ತು ಇನ್ನೊಂದು, ನಿಷ್ಕಾರಣವಾಗಿ ತಾನು ಅಪರಾಧಿ ಎಂದು ಜನ ತಿಳಿದುಕೊಳ್ಳುವರಲ್ಲ ಎಂಬುದು.

ಹಾಗಾದರೆ ನಿಜವಾದ ಅಪರಾಧಿಯನ್ನು ಗುರುತಿಸಲು ಈಗ ಬಳಸಲಾಗುತ್ತಿರುವ 'ಬೆರಳು ಮುದ್ರೆ'ಗಳನ್ನು ಅನುಸರಿಸುವ ವಿಧಾನ ಬೆಳೆದು ಬಂದದ್ದು ಯಾವಾಗ ?

ಕ್ರಿಸ್ತಶಕ ಪೂರ್ವದಲ್ಲಿ ಚೀನ ಮತ್ತು ಈಜಿಪ್ತ್ ದೇಶಗಳಲ್ಲಿ ಮಣ್ಣಿನ ಮಡಕೆಗಳ ಮೇಲೆ ಬೆರಳು ಮುದ್ರೆಗಳ ಗುರುತುಗಳನ್ನು ಮೂಡಿಸುತ್ತಿದ್ದರು. ಬ್ರಿಟಿಶ್ ಮ್ಯೂಜಿಯಂನಲ್ಲಿ ಕಾದಿರಿಸಲಾಗಿರುವ ಮಡಿಕೆಗಳೇ ಇದಕ್ಕೆ ಸಾಕ್ಷಿ. ಆ ದೇಶಗಳಲ್ಲಿ 'ಬೆರಳು ಮುದ್ರೆ'ಗಳೇ ವ್ಯಕ್ತಿಯೊಬ್ಬನ ಸಹಿ ಎಂದೂ ಗುರುತಿಸಲ್ಪಡುತ್ತಿದ್ದುವಂತೆ. ಕ್ರಿಸ್ತಶಕ ೬೧೮ ರಿಂದ ೯೦೭ರ ವರೆಗೆ ಚೀನವನ್ನಾಳಿದ ಟಾಂಗ್ ವಂಶದವರ ಅವಧಿಯಲ್ಲಿ ಮೊಹರು ಮಾಡುವಾಗಲೂ 'ಬೆರಳು ಮುದ್ರೆ'ಗಳನ್ನು ಬಳಸುತ್ತಿದ್ದರು.ಇದೆಲ್ಲ ಪ್ರಾಚೀನ ಕಾಲದ ಮಾತಾಯಿತು.

ಕ್ರಿಸ್ತಶಕ ೧೭೭೦ರಲ್ಲಿ ಥಾಮಸ್ ಬೀವಿಕ್ ಎಂಬ ಆಂಗ್ಲನೊಬ್ಬ ಲೇಖಕನಾಗಿದ್ದಂತೆ ಮರಗೆಲಸದಲ್ಲಿ ನಿಪುಣನೂ ಆಗಿದ್ದ. ಆತ ತನ್ನದೇ ಬೆರಳು ಮುದ್ರೆಗಳನ್ನು ಕಟ್ಟಿಗೆಯಲ್ಲಿ ಕೊರೆದು ಆ ಕುರಿತ ಪುಸ್ತಕವನ್ನು ಪ್ರಕಟಿಸಿದನಲ್ಲದೆ ತನ್ನ ಸಹಿ ಎಂದು ಬೆರಳು ಮುದ್ರೆಗಳನ್ನೇ ಅಲ್ಲಿ ಕಾಣಿಸಿದ.

ಕೈ ಬೆರಳು ಮುದ್ರೆಗಳಲ್ಲದೆ ಅಂಗೈ ಹಾಗೂ ಅಂಗಾಲು ಮುದ್ರೆಗಳೂ ವ್ಯಕ್ತಿಯನ್ನು ಗುರುತಿಸಲು

---

ಶ್ರೀ ಈಶ್ವರ ಎಸ್. ಎಣ್ಣೇರ ಅವರು ಕರ್ನಾಟಕ ರಾಜ್ಯ ಬೆರಳು ಮುದ್ರೆ ಸಂಗ್ರಹಾಲಯದ ಪೊಲೀಸ್ ನಿರೀಕ್ಷಕರು ಹಾಗೂ ಬೆರಳು ಮುದ್ರೆ ತಜ್ಞರು. ಈ ದಿಶೆಯಲ್ಲಿನ ತಮ್ಮ ಅಪಾರ ಅನುಭವದ ಹಿನ್ನೆಲೆಯಲ್ಲಿ ಅವರು "ಬೆರಳು ಮುದ್ರೆಗಳು" ಎಂಬ ಒಂದು ಬೃಹತ್ ಗ್ರಂಥವನ್ನು ಬರೆದು ಕನ್ನಡದಲ್ಲಿ ಇದ್ದ ಒಂದು ಕೊರತೆಯನ್ನು ನೀಗಿದ್ದಾರೆ. ಬೆರಳು ಮುದ್ರೆಗಳು ಅಪರಾಧ ಶೋಧ ತಜ್ಞರಿಗೆ ವರದಾನವಾಗಿ ಬಂದ ಹಿನ್ನೆಲೆಯಿಂದ ಹಿಡಿದು ಈಗ ಅವು ವಹಿಸುತ್ತಿರುವ ಮಹತ್ವದ ಪಾತ್ರಗಳವರೆಗಿನ ಬೆಳವಣಿಗೆ, ಪ್ರಯೋಗಗಳು ಇತ್ಯಾದಿಗಳವರೆಗಿನ ಸೋದಾಹರಣ ವಿವರ ಈ ಪುಸ್ತಕದಲ್ಲಿದೆ. ಪ್ರಸಕ್ತ ಲೇಖನ ಆ ಪುಸ್ತಕದ ಮೊದಲ ಅಧ್ಯಾಯದಿಂದ ಎತ್ತಿಕೊಂಡದ್ದು.

• ಸಂಪಾದಕ

ಸಹಾಯಕವಾಗುತ್ತವೆ. ಯಾಕೆಂದರೆ ಉಬ್ಬು-ತಗ್ಗು-ರೇಖೆಗಳಿಂದ ಒಡಗೂಡಿದ ಈ ಭಾಗಗಳ ಮುದ್ರೆಗಳು ಸುಲಭದಲ್ಲಿ ಮೂಡುವಂಥವು. ತಾಯಿಯ ಗರ್ಭದಲ್ಲಿರುವಾಗಲೇ ಈ ರೇಖೆಗಳು ಮೂಡಲಾರಂಭಿಸುತ್ತವೆ. ಮಗು ಬೆಳೆದಂತೆ ಈ ರೇಖೆಗಳೂ ಗಾತ್ರವನ್ನು ಬೆಳೆಸಿಕೊಳ್ಳುತ್ತವೆ. ಆದರೆ ಅವು ತಮ್ಮ ನಿರ್ದಿಷ್ಟ ರೂಪಗಳನ್ನು ಬದಲಿಸಿಕೊಳ್ಳುವುದಿಲ್ಲ. ಅಷ್ಟೇ ಅಲ್ಲ, ವ್ಯಕ್ತಿ ಸತ್ತ ಮೇಲೆ ಹೂಳಲ್ಪಡುವ ಆತನ ಶವ ಕೊಳೆತು ನಾಶವಾಗುವವರೆಗೂ ಈ ರೇಖೆಗಳು ಉಳಿದಿರುತ್ತವೆ.

೧೮೫೮-೮೦ರ ಅವಧಿಯಲ್ಲಿ ಸರ್ ವಿಲಿಯಂ ಹರ್ಷಲ್ ಎಂಬ ಆಂಗ್ಲ ವಿಜ್ಞಾನಿ ಬಂಗಾಳದ ಹೂಗ್ಲಿ ಜಿಲ್ಲೆಯ ಕಲೆಕ್ಟರ್ ಆಗಿದ್ದಾಗ 'ಬೆರಳು ಮುದ್ರೆ'ಗಳ ಅಧ್ಯಯನ-ಪ್ರಯೋಗಗಳಲ್ಲಿ ತೊಡಗಿದ. ಪ್ರತಿ ವ್ಯಕ್ತಿಯ ಬೆರಳು ಮುದ್ರೆಗಳಲ್ಲಿರುವ ಭಿನ್ನತೆ ಮತ್ತು ವಿಶಿಷ್ಟತೆಗಳಿಂದಾಗಿ ಖಂಡಿತವಾಗಿ ಆತನನ್ನು ಗುರುತಿಸುವುದು ಸಾಧ್ಯವೆಂಬುದನ್ನು ತೋರಿಸಿಕೊಟ್ಟ. ಮೊಟ್ಟಮೊದಲ ಬಾರಿಗೆ ಒಪ್ಪಂದ (ಕಾಂಟ್ರಾಕ್ಟ್) ಒಂದಕ್ಕೆ ಇಂಥ ಕೈ ಬೆರಳ ಮುದ್ರೆಯನ್ನಾತ ಸಹಿಯ ರೂಪದಲ್ಲಿ ಪಡೆದ. ರಾಜಧರ್ ಕನಾಯ್ ಎಂಬ ಒಬ್ಬ ಬಂಗಾಳಿ ಕಂತ್ರಾಟುದಾರ (ಕಾಂಟ್ರಾಕ್ಟರ್)ನಿಗೆ ಕಾಮಗಾರಿಯೊಂದನ್ನು ವಹಿಸಿಕೊಟ್ಟು ಅದಕ್ಕಾಗಿ ಪಡೆದ ಒಪ್ಪಂದ ಪತ್ರವಿದು. ಇಂದಿಗೂ ಈ ಒಪ್ಪಂದ ಪತ್ರ ಐತಿಹಾಸಿಕವೆಂದು ಲಂಡನ್ನಿನ ಮ್ಯೂಜಿಯಂನಲ್ಲಿ ಸುರಕ್ಷಿತವಾಗಿ ಇರಿಸಲ್ಪಟ್ಟಿದೆ. ಮುಂದಿನ ಹನ್ನೆರಡು ವರ್ಷಗಳಲ್ಲಿ ವಿಲಿಯಂ ಹರ್ಷಲ್ ಅಲ್ಲಿಯ ಮಹಾರಾಜ, ಪೊಲೀಸ್ ಮುಖ್ಯಸ್ಥ, ನ್ಯಾಯಾಧೀಶರೇ ಮೊದಲಾದ ಗಣ್ಯ ವ್ಯಕ್ತಿಗಳ ಬೆರಳು ಮುದ್ರೆಗಳನ್ನು ಅವರ ಸಹಿ ಎಂದು ಪಡೆದುಕೊಂಡ.

ಸ್ಕಾಟ್‌ಲ್ಯಾಂಡ್ ಯಾರ್ಡ್‌ನ ಡಾ. ಹೆನ್ರಿ ಫೌಲ್ಡ್ ಎಂಬವರು ಕೆಲದಿನಗಳ ಮಟ್ಟಿಗೆ ೧೮೭೨ರಲ್ಲಿ ಡಾರ್ಜಲಿಂಗ್‌ಗೆ ಬಂದು ಉಳಿದರು. ಅಲ್ಲಿಂದ ಅವರು ಜಪಾನಿಗೆ ಹೋದರು. ಟೋಕಿಯೋದ ಟಸ್ಕಿ ಆಸ್ಪತ್ರೆಗೆ ಸೇರಿದ ಮೇಲೆ ೧೮೭೭ರಲ್ಲಿ ಜಪಾನಿಯರ ಪಾತ್ರೆಗಳ ಮೇಲೆ ಇರುವ ಹಾಗೂ ಜಪಾನಿಯರ ಘೋಷಣಾ ಪತ್ರಗಳ ಮೇಲಿರುವ ಬೆರಳು ಮುದ್ರೆಗಳನ್ನು ಹೋಲಿಸಿ ನೋಡುವ ಮೂಲಕ ಈ ಶಾಸ್ತ್ರಕ್ಕೊಂದು ಹೊಸ ಆಯಾಮವನ್ನೇ ಇತ್ತರು. ಬೆರಳಿನ ಮುಂಭಾಗ (ಉಗುರಿನ ಕೆಳಗಿನ ಭಾಗ)ದಲ್ಲಿರುವ ರೇಖೆಗಳು ಹೆಚ್ಚು ಮಹತ್ವವೆಂದವರು ತೋರಿಸಿಕೊಟ್ಟರು. ೧೮೮೦ರ ಆಕ್ಟೋಬರ್ ೨೮ರಂದು 'ನೇಚರ್' ಎಂಬ ಇಂಗ್ಲಿಷ್ ಜರ್ನಲ್ಲನ್ನು ಬಿಡುಗಡೆ ಮಾಡಿದ ಫೌಲ್ಡ್ ಅದರಲ್ಲಿ ಬೆರಳು ಮುದ್ರೆಗಳನ್ನು ತೆಗೆದುಕೊಳ್ಳುವ ವಿಧಾನ, ಹಾಗೂ ಅದರ ವೈಜ್ಞಾನಿಕ ಪರೀಕ್ಷೆಯ ಪರಿಣಾಮಗಳನ್ನು ಕುರಿತು ವಿವರವಾಗಿ ಬರೆದರು. ಎರಡು ಅಪರಾಧ ಪ್ರಕರಣಗಳಲ್ಲಿ ಬೆರಳು ಮುದ್ರೆಗಳ ಪರಸ್ಪರ ಹೋಲಿಕೆಯಿರುವುದನ್ನು ಸಿದ್ಧಪಡಿಸಿ, ಆ ಕುರಿತು ಒಂದು ಹಸ್ತಪ್ರತಿಯನ್ನು ಬಿಡುಗಡೆ ಮಾಡಿದವರಲ್ಲಿ ಡಾ. ಫೌಲ್ಡ್ ಅವರೇ ಮೊದಲಿಗರು. ಆದರೆ ತಮ್ಮ ಹಸ್ತಪ್ರತಿಯಲ್ಲೆಲ್ಲೂ ಅಪರಾಧ ಸ್ಥಳಗಳಲ್ಲಿ ದೊರೆಯುವ ಅಗೋಚರ ಅವಕಾಶಿತ ಬೆರಳು ಮುದ್ರೆಗಳನ್ನು ಗೋಚರಿಸುವಂತೆ ಮಾಡುವ ಮತ್ತು ಇಂಥ ಮುದ್ರೆಗಳನ್ನು ಹೇಗೆ ಹೋಲಿಸಿ ನೋಡಬೇಕೆನ್ನುವ ಕುರಿತ ವಿಧಾನಗಳನ್ನು ತಿಳಿಸಿಯೇ ಇಲ್ಲ.

೧೮೮೦ರ ನಂತರ ಡಾ. ಫೌಲ್ಡ್ ಅವರ ಹಸ್ತಪ್ರತಿಯಿಂದ ಪ್ರೇರಿತರಾದ ಪ್ರಾಣಿಶಾಸ್ತ್ರಜ್ಞ ಸರ್ ಫ್ರಾನ್ಸಿಸ್ ಗಾಲ್ಟನ್ ಎಂಬವರು ಸ್ವಂತದ ಪ್ರಯೋಗಶಾಲೆಯೊಂದನ್ನು ತೆರೆದು ಅಲ್ಲಿ ಪ್ರಯೋಗನಿರತರಾದರು. ಆಳ ಅಧ್ಯಯನ ಹಾಗೂ ಪ್ರಯೋಗಗಳ ಪರಿಣಾಮವಾಗಿ ಬೆರಳು ಮುದ್ರೆಗಳ ಮಹತ್ವವನ್ನು ಜನಕ್ಕೆ ತೋರಿಸಿಕೊಟ್ಟರು. ಅಲ್ಲದೆ ಗಾಜು, ಸ್ಟೀಲ್ ಮತ್ತು ತಾಮ್ರದ ಪಾತ್ರೆಗಳ ಮೇಲೆ ಒತ್ತಿ ಮೂಡಿಸಿದಂತಹ ಬೆರಳ ಮುದ್ರೆಗಳನ್ನು ಹೆಚ್ಚಿನ ಬೆಳಕು ಬೀರುವುದರ ಮೂಲಕ ಇಲ್ಲವೆ ಅವುಗಳ ಛಾಯಾ ಪ್ರತಿಗಳ ಸಹಾಯದಿಂದ ಹೋಲಿಸಿ ನೋಡಬಹುದು ಎಂಬುದನ್ನು ಕಂಡುಕೊಂಡರು. ಇದೇ ದಿಶೆಯಲ್ಲಿ ಹೆಚ್ಚಿನ ತಿಳುವಳಿಕೆಗಾಗಿ, ಸರ್ ವಿಲಿಯಂ ಹರ್ಷಲ್ ಮತ್ತು ರಾಮಗಟಿ ಬ್ಯಾನರ್ಜಿಯವರು ಅರ್ಧಕ್ಕೆ ನಿಲ್ಲಿಸಿದ್ದ ಬೆರಳು ಮುದ್ರೆಯ ವಿಜ್ಞಾನಕ್ಕೆ ತಮ್ಮ ಪ್ರಯೋಗಗಳ ಫಲಿತಾಂಶಗಳನ್ನೂ ಸೇರಿಸಿ, ಪ್ರತಿ ವ್ಯಕ್ತಿಯ ಬೆರಳು ಮುದ್ರೆಗಳೂ ಬೇರೆ ಬೇರೆಯೇ

ಆಗಿರುವ ಕಾರಣ ಅವುಗಳ ಮೂಲಕ ವ್ಯಕ್ತಿಯನ್ನು ನಿಸ್ಸಂಶಯವಾಗಿ -ನಿಖರವಾಗಿ ಗುರುತು ಹಿಡಿಯಲು ಸಾಧ್ಯ ಎಂಬುದನ್ನು ಮನಗಾಣಿಸಿಕೊಟ್ಟರು. ಒಂಟಿಯಾಗಿ ದೊರೆತ ಹೆಬ್ಬೆರಳ ಮುದ್ರೆಯನ್ನು ಬಹಳವಾಗಿ ದಾಖಲಾಗಿರುವ ಬೆರಳು ಮುದ್ರೆಗಳಲ್ಲಿ ಹೇಗೆ ಶೋಧಿಸಿ ತೆಗೆಯಬಹುದು ಎಂಬುದನ್ನೂ ಸ್ಪಷ್ಟಪಡಿಸಿದ ಗಾಲ್ಟನ್ ಬೆರಳ ರೇಖೆಗಳಲ್ಲಿರುವ ವಿಶಿಷ್ಟ ಚಿನ್ಹೆಗಳನ್ನೂ ಅವುಗಳ ರೂಪಗಳನ್ನೂ ಹೆಸರಿಸಿದರು. ಇವು 'ಗಾಲ್ಟನ್ ಡೀಟೇಲ್ಸ್' (ಗಾಲ್ಟನ್ ವಿವರಗಳು) ಎಂದೇ ಪ್ರಖ್ಯಾತ. ಇವೆಲ್ಲದರ ಆಧಾರದ ಮೇಲೆ ೧೮೯೨ರಲ್ಲಿ ಹೊರಬಂತು ಅವರ ಪುಸ್ತಕ 'ಫಿಂಗರ್ ಪ್ರಿಂಟ್ಸ್' ಅರ್ಥಾತ್ 'ಬೆರಳು ಮುದ್ರೆಗಳು.'

ಆ ನಂತರದಲ್ಲಿ ಆದ ಪ್ರತಿ ಪ್ರಯೋಗವೂ ಈ ನಿಟ್ಟಿನಲ್ಲಿಟ್ಟ ಒಂದೊಂದು ಪ್ರಗತಿಕಾರಕ ಹೆಜ್ಜೆಯೆ. ಆಗ ಬಂಗಾಳದ ಪೊಲೀಸ್ ಮಹಾನಿರೀಕ್ಷಕರಾಗಿದ್ದ ಸರ್ ಎಡ್ವರ್ಡ್ ಹೆನ್ರಿಯವರು ಆದಾಗಲೇ ಭಾರತದಲ್ಲಿ ಚಾಲ್ತಿಯಲ್ಲಿದ್ದ ಸಹಿಯ ಬದಲಿಗೆ ಎಡಗೈ ಹೆಬ್ಬೆಟ್ಟಿನ ಗುರುತು ಪಡೆಯುವ ಕ್ರಮದಿಂದ ಆಕರ್ಷಿತರಾದರು. ಬಂಗಾಳಿ ಅಧಿಕಾರಿಗಳಾಗಿದ್ದ ಖಾನ್ ಬಹಾದ್ದೂರ್ ಅಝುಜುಲ್ ಹಕ್ ಹಾಗೂ ರಾಯ್‌ಬಹಾದ್ದೂರ ಹೇಮಚಂದ್ರ ಬೋಸ್‌ರ ಸಹಾಯದಿಂದ ಹಾಗೂ ಗಣಿತ ಶಾಸ್ತ್ರದ ನೆರವಿನಿಂದ ಕೈಯ ಹತ್ತೂ ಬೆರಳು ಮುದ್ರೆಗಳನ್ನು ವರ್ಗೀಕರಿಸುವ, ದಾಖಲಿಸುವ ಮತ್ತು ದಾಖಲೆಗಳಿಂದ ಶೋಧಿಸಿ ತೆಗೆಯುವ ಸರಳ ವಿಧಾನಗಳನ್ನು ಬರೆದಿಟ್ಟರು. ಈ ವಿಧಾನ ೧೮೯೬ರಲ್ಲಿ ಸೂಕ್ತ ಹಾಗೂ ಸಮಾಧಾನಕರ ವಿಧಾನವೆಂದು ಭಾರತ ಸರಕಾರದ ಅನುಮತಿಯನ್ನು ಪಡೆಯಿತು. ಮರುವರ್ಷ ಭಾರತ ಸರಕಾರದ ಅನುಮೋದನೆ ಪಡೆದು ಕಲಕತ್ತೆಯಲ್ಲಿ ಮೊಟ್ಟಮೊದಲ 'ಬೆರಳು ಮುದ್ರೆಗಳ ಸಂಗ್ರಹಾಲಯ' ಅಧಿಕೃತವಾಗಿ ಸ್ಥಾಪಿಸಲ್ಪಟ್ಟಿತು (ಜೂನ್ ೧೮೯೭). ಹೀಗಾಗಿ ಭಾರತಾದ್ಯಂತ, ಲಿಂಗಭೇದವಿಲ್ಲದೆ, ಯಾವುದೇ ಸಂಶಯಿತ ವ್ಯಕ್ತಿಯ ಬೆರಳು ಮುದ್ರೆಯನ್ನು ಪಡೆಯಬಹುದು ಎಂಬ ಒಮ್ಮತಾಭಿಪ್ರಾಯ ಬೆರಳು ಮುದ್ರೆಯ ವಿಜ್ಞಾನಿಗಳದಾಯಿತು. ಅಪರಾಧ ತನಿಖೆಯ ದಿಶೆಯಲ್ಲಿ ಪೊಲೀಸ್ ಇಲಾಖೆಯು ಬೆರಳು ಮುದ್ರೆ ಪಡೆಯುವಿಕೆ, ಅವುಗಳ ವಿಶ್ಲೇಷಣೆ ಮುಂತಾದ ಕ್ರಮಗಳು ಪ್ರಾರಂಭವಾದದ್ದು ಇಲ್ಲಿಂದಲೇ.

## ಕಂಗ್ಲಿ ಚರಣ ಪ್ರಕರಣ

೧೮೯೭ರ ಆಗಸ್ಟ್ ೧೬. ಬಂಗಾಳದ ಜಲಪಾಯ್ ಗುರಿ ಜಿಲ್ಲೆಯ ಕಟಲ್‌ಗುರಿ ಚಹತೋಟದಲ್ಲೊಂದು ಕೊಲೆ ನಡೆಯಿತು. ಆ ತೋಟದ ಕಾರಭಾರಿ (Manager) ಹೃದಯನಾಥ್ ಘೋಷ್ ಎಂಬಾತ ತನ್ನ ಕೋಣೆಯಲ್ಲಿ ಸತ್ತುಬಿದ್ದಿದ್ದ. ಅದೊಂದು ಅಮಾನುಷ ಕೊಲೆ. ಅಷ್ಟೇ ಅಲ್ಲ, ಅಲ್ಲಿದ್ದ ಕೆಲ ವಸ್ತುಗಳು ದೋಚಲ್ಪಟ್ಟಿದ್ದವು. ಆದರೆ ನೂರು ರೂಪಾಯಿಗಳ ನೋಟುಗಳಿಗೆ ಪಾತಕಿ ಕೈ ಹಚ್ಚಿರಲಿಲ್ಲ. ಕೊಲೆಗೀಡಾದ ವ್ಯಕ್ತಿಯ ಸಮೀಪವೇ ಒಂದು ಚೂರಿ ಬಿದ್ದುಕೊಂಡಿತ್ತು.

ತನಿಖೆ ಶುರುವಾಯಿತು. ಕೋಣೆಯಲ್ಲಿನ ಮರದ ಪೆಟ್ಟಿಗೆಯೊಂದರಲ್ಲಿದ್ದ ಬಂಗಾಳಿ ಪಂಚಾಂಗದ ಮೇಲೆ ರಕ್ತಮಯವಾಗಿದ್ದ ಅಸ್ಪಷ್ಟ ಬೆರಳು ಮುದ್ರೆಗಳು ಕಂಡುಬಂದುವು. ಮುಂದುವರಿದ ಪತ್ತೆ ಕಾರ್ಯದಲ್ಲಿ ಆ ಬೆರಳ ಮುದ್ರೆಗಳು ರಂಜನ್‌ಸಿಂಗ್ ಎಂಬವನ ಬೆರಳು ಮುದ್ರೆಗಳನ್ನು ಹೋಲುತ್ತವೆಂಬುದು ತಿಳಿದುಬಂತು. ಈ ಹಿಂದೊಮ್ಮೆ ಆತ ಇದೇ ಹೃದಯನಾಥ್ ಘೋಷರ ಮನೆಯಲ್ಲಿ ಕಳುವು ಮಾಡಿ ಆರು ತಿಂಗಳು ಸೆರೆವಾಸ ಅನುಭವಿಸಿದ್ದ. ರಂಜನ್ ಸಿಂಗ್ ಬೀರ್‌ಭೂಮ್ ಜಿಲ್ಲೆಯವ. ಬಲು ವಿಪತ್ಕಾರಿ. ಆದರೆ ಅವನ ಅದೃಷ್ಟಕ್ಕೆಂಬಂತೆ ಆಗ ಒದಗಿ ಬಂದ ವಿಕ್ಟೋರಿಯಾ ಮಹಾರಾಣಿಯವರ ಸಿಂಹಾಸನಾರೋಹಣದ ವಜ್ರಮಹೋತ್ಸವ ಸಂದರ್ಭದಿಂದಾಗಿ ೧೮೯೭ನೆಯ ಜುಲೈ ೫ ರಂದು ರಂಜನ್ ಸಿಂಗ್ ಬಿಡುಗಡೆಹೊಂದಿದ್ದ. ಆತ ಜೈಲಿನಿಂದ ಹೊರಬರುವ ಮುನ್ನ ಆಗ ಆದಾಗಲೇ ರೂಢಿಗೆ ಬಂದಿದ್ದಂತೆ ರಂಜನ್ ಸಿಂಗನ ಬಲಗೈ ಹೆಬ್ಬೆರಳಿನ ಮುದ್ರೆಯನ್ನು ತೆಗೆದುಕೊಳ್ಳಲಾಗಿತ್ತು.

ಜೈಲಿನಿಂದ ಹೊರಬಂದ ಮೇಲೆ ರಂಜನ್ ಸಿಂಗ್ ಹೆಸರು ಬದಲಿಸಿಕೊಂಡ. 'ಕಂಗ್ಲಿ ಚರಣ್' ಎಂದು ತನ್ನನ್ನು ಪರಿಚಯಿಸಿಕೊಂಡ. ಜೈಲಿನಲ್ಲಿದ್ದಾಗ ತಾನು ಹೃದಯನಾಥರ ಮೇಲೆ ಸೇಡು

ತೀರಿಸಿಕೊಳ್ಳುವುದು ಖಂಡಿತ ಎಂದು ಹೇಳುತ್ತಿದ್ದನೆಂದು ಆತನ ಜತೆಗಿದ್ದ ಕೈದಿಗಳಿಂದ ಗೊತ್ತಾಯಿತು.

ಹೃದಯನಾಥರ ಕೊಲೆ ಪ್ರಕರಣದಲ್ಲಿ ಕೆಲವರನ್ನು ಸಂಶಯದ ಮೇಲೆ ಬಂಧಿಸಲಾಗಿತ್ತಾದರೂ ಅವರಲ್ಲಿ ಯಾರ ಬೆರಳು ಮುದ್ರೆಯೂ ರಕ್ತಸಿಕ್ತ ಬಂಗಾಳಿ ಪಂಚಾಂಗದ ಮೇಲೆ ಕಂಡುಬಂದ ಬೆರಳು ಮುದ್ರೆಗಳನ್ನು ಹೋಲಲಿಲ್ಲ. ರಂಜನ್ ಸಿಂಗ್ ಯಾನೆ ಕಂಗ್ಲಿ ಚರಣನ ಬೆರಳು ಮುದ್ರೆಗಳು ಮಾತ್ರ ಜೇಲಿನಲ್ಲಿ ಪಡೆಯಲಾಗಿದ್ದ ಬೆರಳು ಮುದ್ರೆ ಹಾಗೂ ಬಂಗಾಳಿ ಪಂಚಾಂಗದ ಮೇಲಿನ ಅಸ್ಪಷ್ಟ ಬೆರಳು ಮುದ್ರೆಗಳಂತೆಯೇ ಕಂಡುಬಂದುವು. ಸರ್ ಎಡ್ವರ್ಡ್ ಹೆನ್ರಿ ಈ ದಿಶೆಯಲ್ಲಿ ಹಗಲಿರುಳು ಪರೀಕ್ಷೆ ನಡೆಸಿದರು. ಬೆರಳು ಮುದ್ರೆಗಳು ನಿಸ್ಸಂಶಯವಾಗಿಯೂ ರಂಜನ್‌ಸಿಂಗ್ ಅಥವಾ ಕಂಗ್ಲಿ ಚರಣನವೇ ಎಂದು ದೃಢಪಟ್ಟಿತು. ಆದರೆ ಇಷ್ಟಕ್ಕೇ ತೃಪ್ತರಾಗದ ತನಿಖಾಧಿಕಾರಿಗಳು ಮತ್ತೆ ಮತ್ತೆ ಪರೀಕ್ಷೆ ನಡೆಸಿ ಕೊನೆಗೆ ಕಂಗ್ಲಿ ಚರಣನನ್ನು ಬೀರ್‌ಭೂಮ್‌ನಲ್ಲಿ ದಸ್ತಗಿರಿ ಮಾಡಿದರು. ಆತನ ಮೇಲೆ ಕೊಲೆ ಹಾಗೂ ಕಳ್ಳತನದ ಆರೋಪದ ವಿಚಾರಣೆ ಶುರುವಾಯಿತು. ರಂಜನ್ ಸಿಂಗ್ ಕೊಲೆಗೈದಿದ್ದಾನೆಂದು ಹೇಳಲು ಪ್ರತ್ಯಕ್ಷ ಸಾಕ್ಷಿಗಳಾವವೂ ಇರಲಿಲ್ಲ. ಹೀಗಾಗಿ ಕೊಲೆ ಆರೋಪದಿಂದ ಆತ ಮುಕ್ತನಾದರೂ ಕಳ್ಳತನದ ಆರೋಪ ಸಿದ್ಧಪಟ್ಟು ರಂಜನ್‌ಸಿಂಗನಿಗೆ ೧೮೯೮ರ ಮೇ ೨೫ರಂದು ಎರಡು ವರ್ಷಗಳ ಕಾರಾಗೃಹವಾಸ ವಿಧಿಸಲ್ಪಟ್ಟಿತು. ಕಂಗ್ಲಿ ಚರಣ್ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿ ತಾನು ನಿರಪರಾಧಿಯೆಂದು ವಾದಿಸಿದ. ನ್ಯಾಯಾಧೀಶರು ಆತನ ಮನವಿಯನ್ನು ತಿರಸ್ಕರಿಸಿ ಶಿಕ್ಷೆಯನ್ನು ಖಾಯಂಗೊಳಿಸಿದರು. ಆದರೆ, ಈ ಹಂತದಲ್ಲಿ ಬೆರಳು ಮುದ್ರೆ ತಜ್ಞರ ಅಭಿಪ್ರಾಯಕ್ಕಿನ್ನೂ ನ್ಯಾಯಾಲಯದಲ್ಲಿ ಮನ್ನಣೆ ದೊರೆತಿರಲಿಲ್ಲ.

ಮರುವರ್ಷದ ಹೊತ್ತಿಗೆ ಬೆರಳು ಮುದ್ರೆಗಳ ಪ್ರಾಮುಖ್ಯವು ಖಾಯಿದೆ ತಜ್ಞರ ಗಮನಕ್ಕೆ ಬಂತು. ಹೀಗಾಗಿ ೧೮೯೯ರಲ್ಲಿ ಬೆರಳು ಮುದ್ರೆ ತಜ್ಞರ ಸಾಕ್ಷಿಯನ್ನು ಭಾರತೀಯ ಸಾಕ್ಷ್ಯ ಅಧಿನಿಯಮದ (Indian Evidence Act) ಕಲಂ ೪೫ರಲ್ಲಿ ಪರಿಗಣಿಸಬಹುದೆಂದು ಖಾಯಿದೆ ಮಂಡಳಿಯು ಅಭಿಪ್ರಾಯಪಟ್ಟು ದಾಖಲಾತಿಗಾಗಿ ಬೆರಳು ಮುದ್ರೆಗಳನ್ನು ಪಡೆಯುವುದನ್ನು ಕಾನೂನಿನ ಅಡಿಯಲ್ಲಿ ತರಲಾಯಿತು.

## ಬೆರಳು ಮುದ್ರೆಯ ಸಾಕ್ಷಿ

ಬೆರಳು ಮುದ್ರೆಗಳ ಆಧಾರದ ಮೇಲೆ ಅಪರಾಧಿಯನ್ನು ಗುರುತಿಸುವ ಪ್ರಕ್ರಿಯೆ ಪ್ರಾರಂಭವಾಯಿತು. ೧೯೦೪ರಲ್ಲಿ ಇಸ್ವಿ. ಮನೆಯ ಬೀಗ ಮುರಿದು ಕಳ್ಳತನ ಮಾಡಿದ ಅಪರಾಧದಲ್ಲಿ (ಎಂಪರರ್ ವಿರುದ್ಧ ಸಹದೇವ್, ೨ ನಾಗಪುರ, ಎಲ್.ರಿಪೋ.೧ ಭಾರತ ೧೯೦೪) ನ್ಯಾಯಾಲಯ ಐತಿಹಾಸಿಕವಾದ ತೀರ್ಪೊಂದನ್ನಿತ್ತಿತು: "ಎರಡು ಬೆರಳು ಮುದ್ರೆಗಳು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ವೇಳೆಯಲ್ಲಿ ಮೂಡಿದವುಗಳಾದ್ದರಿಂದ ಮತ್ತು ಎರಡೂ ಮುದ್ರೆಗಳಲ್ಲಿ ಸಾಮ್ಯ ಹೊಂದುವ ಸಾಕಷ್ಟು ರೇಖಾ ಚಿನ್ಹೆಗಳು ದೊರೆಯುವುದರಿಂದ, ಹಾಗೂ, ಯಾವುದೇ ರೇಖಾ ಚಿನ್ಹೆಗಳು ಭಿನ್ನವಾಗಿರದ್ದರಿಂದ, ಎರಡೂ ಬೆರಳು ಮುದ್ರೆಗಳು ಒಬ್ಬನವೇ ಎಂದು ಖಚಿತವಾಗಿರುವುದರಿಂದ ಬೇರೆ ಯಾವದೇ ಸಾಕ್ಷಿಯ ಅವಶ್ಯಕತೆ ಇರುವುದಿಲ್ಲ."

ಈ ಅಪರಾಧಕ್ಕೆ ಶಿಕ್ಷೆ ವಿಧಿಸುವಾಗ ನ್ಯಾಯಾಲಯವು ಈ ಹಿಂದೆ ನಡೆದ ಒಂದು ಕೇಸಿನ ಉದಾಹರಣೆಯನ್ನೂ (ಅಲಹಾಬಾದ್ ಸತ್ರ ನ್ಯಾಯಾಧೀಶರ ತೀರ್ಪು) ಉಚ್ಚರಿಸಿತು. ಈ ಅಪರಾಧ ಪ್ರಕರಣದಲ್ಲಿ ಕೊಲೆ ನಡೆದ ಸ್ಥಳದಲ್ಲಿ ಅಪರಾಧಿ ತನಗರಿವಿಲ್ಲದಂತೆ ಉಳಿಸಿದ ರಕ್ತಸಿಕ್ತ ಹೆಬ್ಬೆರಳ ಮುದ್ರೆಯೇ ಆತನನ್ನು ಹಿಡಿದು ಹಾಕಿತ್ತು. ಆತ ತಾನು ನಿರಪರಾಧಿ ಎಂದು ನಿರೂಪಿಸಲೆತ್ನಿಸಿದನಾದರೂ ನ್ಯಾಯಾಧೀಶರು, "ಹತ್ತಾರು ಸಾಧಾರಣ ಸಾಕ್ಷಿಗಳಿಗಿಂತ ಒಂದು ಅತ್ಯುತ್ತಮ ಸಾಕ್ಷಿ ದೊರೆತರೆ ಸಾಕು. ೨೦೦ ಜನ ಸ್ಥಳೀಯರು ಸಾಯಂಕಾಲ ೬ ರಿಂದ ಬೆಳಗಿನ ೬ರ ತನಕ ಬೇರೆಲ್ಲೂ ಈ ವ್ಯಕ್ತಿಯ (ಅಪರಾಧಿ) ಸುತ್ತ ಕುಳಿತಿದ್ದವು ಎಂದು ಪ್ರಮಾಣ ಮಾಡಿ ಸಾಕ್ಷಿ ನುಡಿದಿದ್ದರೂ ಅಪರಾಧ ಸ್ಥಳದಲ್ಲಿ ದೊರೆತ ರಕ್ತಸಿಕ್ತ ಹೆಬ್ಬೆರಳ ಮುದ್ರೆಯು ಅಪರಾಧಿಯು ಆ

ಸ್ಥಳದಲ್ಲಿದ್ದುದಕ್ಕೆ ಶ್ರೇಷ್ಠ ಸಾಕ್ಷಿ" ಎಂದು ಹೇಳಿ ಅಪರಾಧಿಗೆ ಮರಣದಂಡನೆ ಶಿಕ್ಷೆಯನ್ನು ವಿಧಿಸಿದರು.

ಲಂಡನ್ನಿನ ಡೆಪ್ಟ್‌ಫೋರ್ಡ್‌ನಲ್ಲಿ (೧೯೦೫ರಲ್ಲಿ) ಒಂದು ಜೋಡಿ ಕೊಲೆ ಪ್ರಕರಣ ನಡೆಯಿತು. ಇಲ್ಲಿಯೂ ಅಪರಾಧಿಗಳನ್ನು 'ಹಿಡಿದು' ಹಾಕಿದ್ದು ಬೆರಳು ಮುದ್ರೆಗಳೇ. ಥಾಮಸ್ ಪಾರ್ರೋವ್ ಹಾಗೂ ಅವನ ಹೆಂಡತಿಯ ಕೊಲೆಯ ಪ್ರಕರಣವಿದು. ಅವರಿಬ್ಬರೂ ಪ್ರತಿರಾತ್ರಿ ಅಂದಿನ ತಮ್ಮ ಉಳಿತಾಯದ ಹಣವನ್ನು ಒಂದು ಸಣ್ಣ ಪೆಟ್ಟಿಗೆಯಲ್ಲಿಟ್ಟು ದಿಂಬಿನ ಅಡಿಯಲ್ಲಿ ಮುಚ್ಚಿಟ್ಟು ಮಲಗುತ್ತಿದ್ದರು. ಇದು ಗೊತ್ತಾಗಿ ಅಪರಾಧಿಗಳು ನಸುಕಿಗೆ ಮುಂಚೆ ಅವರ ಮನೆ ಹೊಕ್ಕು ಸಣ್ಣ ಹಾರೆಯಿಂದ ಆ ದಂಪತಿಯನ್ನು ಹೊಡೆದು ಹಾಕಿ ಹಣದ ಪೆಟ್ಟಿಗೆಯನ್ನು ಅಪಹರಿಸಿಕೊಂಡು ಓಡಿದ್ದರು. ಗಂಡ-ಹೆಂಡತಿಯಿಬ್ಬರೂ ಸ್ವಲ್ಪೇ ಸಮಯದಲ್ಲಿ ಜೀವಬಿಟ್ಟಿದ್ದರು. ಸ್ಕಾಟ್‌ಲಂಡ್‌ಯಾರ್ಡಿನ ಪೊಲೀಸರಿಂದ ತನಿಖೆ ಆರಂಭವಾಯಿತು. ಬೆರಳು ಮುದ್ರೆ ತಜ್ಞರು ಆ ಸ್ಥಳದಲ್ಲಿ ಕೂಲಂಕಷವಾಗಿ ಪರಿಶೀಲಿಸಿದಾಗ ಹಣದ ಪೆಟ್ಟಿಗೆಯ ಒಳಗೆ ಅಸ್ಪಷ್ಟವಾದ ರಕ್ತಸಿಕ್ತ ಬೆರಳು ಮುದ್ರೆಗಳು ಗೋಚರಿಸಿದವು. ಅವುಗಳ ಛಾಯಾಚಿತ್ರ ತೆಗೆದುಕೊಂಡು ಬೆರಳು ಮುದ್ರೆ ಸಂಗ್ರಹಾಲಯದ ದಾಖಲೆಗಳಲ್ಲಿ ಹೋಲಿಸಿ ನೋಡಿದರೂ ಪ್ರಯೋಜನವಾಗಲಿಲ್ಲ. ಕೆಲದಿನಗಳ ನಂತರ ಕುಮಾರಿ ಎಥೆಲ್ ಸ್ಟ್ಯಾಂಟನ್ ಎಂಬಾಕೆಯಿಂದ ಒಂದಷ್ಟು ಸುಳಿವು ದೊರೆಯಿತು. ಕೃತ್ಯ ನಡೆದ ನಸುಕಿನಲ್ಲಿ ಡೆಪ್ಟ್‌ಫೋರ್ಡ್ ರಸ್ತೆಯಲ್ಲಿ ಇಬ್ಬರು ಓಡಿಹೋಗುತ್ತಿದ್ದುದನ್ನು ತಾನು ಕಂಡುದಾಗಿಯೂ, ಆ ಪೈಕಿ ಒಬ್ಬ ತನಗೆ ಪರಿಚಿತನಾದ ಆಲ್‌ಫ್ರೆಡ್ ಸ್ಟ್ರಾಟನ್ ಎಂದೂ ಆಕೆ ಹೇಳಿದಳು. ತನಿಖಾಧಿಕಾರಿಗಳು ಆಲ್‌ಫ್ರೆಡ್‌ನನ್ನು ದಸ್ತಗಿರಿ ಮಾಡಿದರು. ಆತನ ಬೆರಳು ಮುದ್ರೆ ಪಡೆದು ಹೋಲಿಸಿ ನೋಡಲು ಕಳಿಸಿಕೊಟ್ಟರು. ಹಣದ ಪೆಟ್ಟಿಗೆಯ ಒಳಗೆ ದೊರೆತ ರಕ್ತಸಿಕ್ತ ಬೆರಳು ಮುದ್ರೆ ಆಲ್‌ಫ್ರೆಡ್‌ನ ಬಲಗೈ ಹೆಬ್ಬೆರಳಿನ ಮುದ್ರೆಗಳನ್ನು



ಬಂಗಾಳಿ ಪಂಚಾಂಗದ ಮೇಲೆ ದೊರೆತ
ರಕ್ತ ಸಿಕ್ತ ಸಂಭವನೀಯ ಮುದ್ರೆ



ಅಪರಾಧಿ ಕಂಗಲಿ ಚರಣನ ಬಲಗೈ
ಹೆಬ್ಬೆರಳ ಮುದ್ರೆ

ಪೂರ್ಣವಾಗಿ ಹೋಲುತ್ತಿದ್ದವು. ಇವುಗಳ ಛಾಯಾ ಪ್ರತಿಗಳಲ್ಲಿ ಅನುಕ್ರಮವಾಗಿ ಹೋಲಿಕೆಯಾದ ರೇಖಾಚಿನ್ಹೆಗಳನ್ನು ಗುರುತು ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಲಾಯಿತು. ವಿಚಾರಣೆಯ ಕಾಲಕ್ಕೆ ಆಲ್‌ಫ್ರೆಡ್ ಅಪರಾಧವನ್ನು ಒಪ್ಪಿಕೊಂಡನಲ್ಲದೆ ತನ್ನೊಂದಿಗೆ ಇದ್ದಾತ ಸೋದರ ಆಲ್ಬರ್ ಎಂದು ಹೇಳಿದ. ಇಬ್ಬರಿಗೂ ಮರಣದಂಡನೆ ಶಿಕ್ಷೆ ವಿಧಿಸಲಾಯಿತು.

ಇಂಗ್ಲಂಡಿನಲ್ಲಿ ನಡೆದ ಇನ್ನೊಂದು ಅಪರಾಧವೂ ಇದೇ ತೆರನಾದದ್ದು. ೧೯೦೮ರಲ್ಲಿ ಒಂದು ದರೋಡೆ ಪ್ರಕರಣ ನಡೆಯಿತು. ಇಲ್ಲಿ ಅಪರಾಧಿ ತಾನು ಬಳಸಿದ್ದ ಮೇಣದ ಬತ್ತಿಯೊಂದನ್ನು ಅಪರಾಧ ಸ್ಥಳದಲ್ಲೇ ಬಿಟ್ಟು ಹೋಗಿದ್ದ. ಆದರೆ ಅದರ ಮೇಲೆ ತನ್ನ ಬೆರಳು ಮುದ್ರೆಗಳಿವೆಯೆಂಬುದು ಆತನಿಗೆ ಆ ಆವಸರದಲ್ಲಿ ಗೊತ್ತೂ ಆಗಲಿಲ್ಲ. ಆ ಮುದ್ರೆಗಳ ಛಾಯಾಪ್ರತಿಯನ್ನು ಬೆರಳು ಮುದ್ರೆ ಸಂಗ್ರಹಾಲಯದ ದಾಖಲೆಗಳಲ್ಲಿ ಹೋಲಿಸಿದಾಗ ಅಪರಾಧಿ ಯಾರೆಂಬ ಸುಳಿವು ಸಿಕ್ಕಿತು. ಅವರ ಡನ್ನೂ ನ್ಯಾಯಾಲಯದೆದುರು ಹಾಜರುಪಡಿಸಲಾಯಿತು. ಬಂಧಿತ ಅಪರಾಧಿ "ಬೇರೆ ಯಾವ ಆಧಾರಗಳೂ ನನ್ನ ಮೇಲೆ ಅಪರಾಧದ ಹೊಣೆ ಹೊರಿಸಲು ಇರದಿದ್ದುದರ ಕಾರಣ ಕೇವಲ ಬೆರಳು ಮುದ್ರೆಗಳ ಸಹಾಯದಿಂದಲೇ ನಾನೇ ಅಪರಾಧಿ ಎಂಬುದನ್ನು ಸಿದ್ಧಪಡಿಸುವುದು ಸಾಧ್ಯವಿಲ್ಲ," ಎಂದು ವಾದಿಸಿದ. ಆದರೆ, ಮುಖ್ಯ ನ್ಯಾಯಾಧೀಶರು ಆತನ ಮನವಿಯನ್ನು ತಿರಸ್ಕರಿಸಿ, "ನನಗೆ ಬೆರಳು ಮುದ್ರೆಗಳ ಅಭ್ಯಾಸದಲ್ಲಿ ಆಸಕ್ತಿ ಮತ್ತು ನಂಬಿಕೆ ಇರುವುದರಿಂದ ಸಾಕ್ಷಿಯ ವಿವರಗಳನ್ನು ಪೂರ್ಣವಾಗಿ ಓದಿ ತಿಳಿದುಕೊಂಡಿದ್ದೇನೆ. ಸಾವಿರಾರು ಬೆರಳು ಮುದ್ರೆಗಳನ್ನು ನೋಡಿ ಪ್ರಾವೀಣ್ಯವನ್ನು ಪಡೆದುಕೊಂಡಿರುವ ಬೆರಳು ಮುದ್ರೆ ತಜ್ಞರ ಸಾಕ್ಷಿಯು ತಪ್ಪಾಗಲಿಕ್ಕೆ ಸಾಧ್ಯವೇ ಇಲ್ಲ. ಆದುದರಿಂದ ಮೇಣದ ಬತ್ತಿಯ ಮೇಲೆ ದೊರೆತ ಮುದ್ರೆಯು ನ್ಯಾಯಾಂಗ ಬಂಧನದಲ್ಲಿರುವ ಈ ಆರೋಪಿಯದೇ ಹೊರತು ಬೇರೆಯಾರದೂ ಆಗಿರಲಿಕ್ಕೆ ಸಾಧ್ಯವಿಲ್ಲ. ಈ ಪ್ರಕರಣದಲ್ಲಿ ನಾನು ನನ್ನ ಮುಂದೆ ಪ್ರದರ್ಶಿಸಲ್ಪಟ್ಟ ಬೆರಳು ಮುದ್ರೆಗಳನ್ನು ನೋಡುತ್ತಿದ್ದೇನೆ. ಅವುಗಳಲ್ಲಿಯೂ ಬಲಗೈಯ ಮಧ್ಯದ ಬೆರಳು ಮತ್ತು ತೋರು ಬೆರಳುಗಳು ಹೀಗೆಯೇ ಇರುವಾಗ ನನಗೆ ಕಿಂಚಿತ್ತೂ ಬೆರಳು ಮುದ್ರೆ ತಜ್ಞರ ಸಾಕ್ಷಿಯ ಮೇಲೆ ಸಂಶಯ ಉಂಟಾಗುತ್ತಿಲ್ಲ. ಅವರು ಒದಗಿಸಿದ ಸಾಕ್ಷಿ ಪುರಾವೆಗಳು ಸರಿಯಾಗೇ ಇವೆ," ಎಂದು ಹೇಳಿ ಅಪರಾಧಿಗೆ ಶಿಕ್ಷೆ ಘೋಷಿಸಿದರು.

ಹೀಗೆ ಸಂಭವನೀಯ ಬೆರಳು ಮುದ್ರೆಗಳ ಶೋಧನೆಯಲ್ಲಿ ಪ್ರಗತಿಕಾರಕ ಪ್ರಯೋಗಗಳು ನಡೆಯುತ್ತಲೇ ಬಂದವು. ಆದರೆ ಇದು ತೀರ ಕಷ್ಟದಾಯಕ ಕೆಲಸವಾದುದರಿಂದ ಒಂದೊಂದೇ ಬೆರಳಿನ ಮುದ್ರೆಯನ್ನು ವರ್ಗೀಕರಿಸಿ ದಾಖಲಿಸಿದರೆ ತನಿಖಾಧಿಕಾರಿಗಳಿಗೆ ಅಪರಾಧಿಯ ಗುರುತು ಹಿಡಿಯಲು ತಡವಾಗದು ಎಂಬ ವಿಚಾರ ಬೆರಳು ಮುದ್ರೆ ತಜ್ಞರಿಗೆ ಬಂತು. ಭಾರತದಲ್ಲಿ ಮೊಟ್ಟ ಮೊದಲು ಬೆರಳು ಮುದ್ರೆ ಸಂಗ್ರಹಾಲಯದಲ್ಲಿ ಪೋಲೀಸ್ ಅಧಿಕಾರಿಯಾಗಿದ್ದು, ಹೆನ್ರಿಯವರಿಗೆ 'ಹತ್ತು ಬೆರಳುಗಳ ವರ್ಗೀಕರಣ'ಕ್ಕೆ ಸಹಾಯಕನಾಗಿದ್ದ ರಾಯ್ ಬಹಾದ್ದೂರ್ ಹೇಮಚಂದ್ರ ಬೋಸ್ ಅವರು ಏಕಾಂಗುಲೀ ವರ್ಗೀಕರಣ ಪದ್ಧತಿಯನ್ನು ಕಂಡುಹಿಡಿದರು. ಯುರೋಪಿನಾದ್ಯಂತದ ಎಲ್ಲಾ ಬೆರಳು ಮುದ್ರೆ ತಜ್ಞರ ಪ್ರಶಂಸೆ ಪಡೆದರು. ಆದರೆ ಇದರಲ್ಲಿನ ಕೆಲವು ದೋಷಗಳು ಮತ್ತು ಸ್ಕಾಟ್‌ಲಂಡ್‌ಯಾರ್ಡಿನ ಬೆರಳು ಮುದ್ರೆ ಸಂಗ್ರಹಾಲಯದ ಅಧೀಕ್ಷಕ ಚಾರ್ಲ್ಸ್ ಸ್ಟಾಕ್ಲೇ ಕೋಲಿನ್ಸ್‌ರು ಕಂಡು ಹಿಡಿದಿದ್ದ ಏಕಾಂಗುಲೀ ಪದ್ಧತಿಗಳಲ್ಲಿನ ದೋಷಗಳನ್ನೂ ಗಮನಿಸಿದವರು ಹ್ಯಾರಿ ಬ್ಯಾಟ್ಲೇ ಎಂಬವರು. ೧೯೩೦ರಲ್ಲಿ ಅವರು ಸ್ಕಾಟ್‌ಲಂಡ್ ಯಾರ್ಡಿನ ಬೆರಳು ಮುದ್ರೆ ಸಂಗ್ರಹಾಲಯದ ಮುಖ್ಯ ನಿರೀಕ್ಷಕರಾಗಿದ್ದ ಸಂದರ್ಭದಲ್ಲಿ ಸರಳ ಮತ್ತು ಸುಲಭ ಏಕಾಂಗುಲೀ ವರ್ಗೀಕರಣ ಪದ್ಧತಿಯನ್ನು ಕಂಡು ಹಿಡಿದು ಅಪರಾಧ ಶೋಧ ಜಗತ್ತಿನವರೆಲ್ಲ ತಲೆದೂಗುವಂತೆ ಮಾಡಿದರು. ಈಗ ಜಗತ್ತಿನ ಬಹುತೇಕ ಕಡೆ ಅನುಸರಿಸಲ್ಪಡುತ್ತಿರುವ ಪದ್ಧತಿ ಇದು. ●



## ಪುಸ್ತಕ ವಿಭಾಗ

# ದೇವನೊಲಿದ ಜೀವ

ಇಂಗ್ಲಿಷ್ ಮೂಲ:
ನಾ ಕಸ್ತೂರಿ



ಕನ್ನಡಕ್ಕೆ:
ಕೆ.ಬಿ. ಪ್ರಭುಪ್ರಸಾದ



ಸಂಗ್ರಹ:
ಎಸ್ಕೆ ಹಳೆಯಂಗಡಿ

# ದೇವನೊಲಿದ ಜೀವ

ಕೇರಳದಲ್ಲಿ ಹುಟ್ಟಿ, ಮೈಸೂರಿನಲ್ಲಿ ಕೆಲಸಕ್ಕೆ ಸೇರಿ, ಕನ್ನಡ ಕಲಿತು ತಮ್ಮ ಹಾಸ್ಯ ಬರಹಗಳಿಂದ ಕರ್ನಾಟಕದಾದ್ಯಂತ 'ಕಸ್ತೂರಿ'ಯಂತೆ ಘಮ-ಘಮಿಸಿ ಸಾಯಿ ಕೃಪಾಶ್ರಯ ಪಡೆದು, ಭಕ್ತರಾಗಿ ಸಾಧಕರಾಗಿ ಬೆಳೆದು ೯೦ರ ಪ್ರಾಯದಲ್ಲಿ ನಿಧನರಾದ ಪ್ರೊ. ಕಸ್ತೂರಿಯವರು ಸಾಹಿತ್ಯ ಪ್ರತಿಭೆ ಮತ್ತು ಭಗವದ್ಭಕ್ತಿಗಳಿಂದ ಕೂಡಿದ ಮಹಾಚೇತನ. ಅವರು ಇಂಗ್ಲಿಷ್‌ನಲ್ಲಿ ಬರೆದ ಆತ್ಮ ಕಥೆ 'Loving God' ೧೯೮೬ರಲ್ಲಿ ಅವರ ೮೬ನೇ ಜನ್ಮ ದಿನದಂದು ಪ್ರಕಟವಾಯಿತು. ಅವರ ವಿದ್ಯಾರ್ಥಿಗಳಲ್ಲಿ ಒಬ್ಬರಾದ ಕೆ. ಬಿ. ಪ್ರಭುಪ್ರಸಾದ್ ಅದನ್ನು 'ದೇವನೊಲಿದ ಜೀವ' ಎಂಬ ಹೆಸರಿನಲ್ಲಿ ಕಸ್ತೂರಿಯವರೇ ಕನ್ನಡದಲ್ಲಿ ಬರೆದಿರುವರೇನೋ ಎನ್ನುವಷ್ಟು ಸಹಜವಾಗಿ ಮತ್ತು ಸಮರ್ಥವಾಗಿ ಅನುವಾದಿಸಿ ೧೯೯೦ರಲ್ಲಿ ಅದರ ಮೊದಲ ಭಾಗವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಅಪಾರ ಜನ ಮೆಚ್ಚುಗೆ ಪಡೆದ ಆ ಪುಸ್ತಕ ಸಂಕ್ಷಿಪ್ತ ಸಂಗ್ರಹ ಇಲ್ಲಿದೆ

## ಅಧ್ಯಾಯ ೧

## ಅಮ್ಮ ಚೆಲ್ಲಿದ ಮುತ್ತು

ಈ ಸಲ ಅಂದರೆ ಈ ಜನ್ಮದಲ್ಲಿ ನಾನು ಹುಟ್ಟಿದುದು ೧೮೯೭ರ ಡಿಸೆಂಬರ್ ಕ್ರಿಸ್‌ಮಸ್ ದಿನ. ಹುಟ್ಟಿದ ಕೂಡಲೇ ಮೊಟ್ಟ ಮೊದಲು ನಾನು ಮಾಡಿದ ಕೆಲಸ ಕಟಬಾಯ್ ಜೊಲ್ಲು ಸುರಿಸುತ್ತಾ 'ವ್ಯಾ-ವ್ಯಾ' ಎಂದು ಅಳತೊಡಗಿದ್ದು!

ನಾನು ಹುಟ್ಟಿದ ಹಳ್ಳಿಯ ಹೆಸರು 'ತಿರುಪುಣಿತ್ತುರ.' ಅಲ್ಲಿ ಅದರ ಹೃದಯದಂತೆ ಒಂದು ದೇಗುಲವಿದೆ. ಹೆಸರು ಪಾರ್ಥಸಾರಥಿ ದೇವಸ್ಥಾನ. ನನ್ನ ತಾತನೇ ಆ ದೇವಸ್ಥಾನದ ಪಾರುಪತ್ತೇಗಾರ. ಆದ್ದರಿಂದ ಸ್ವಾಮಿ ಪಾರ್ಥಸಾರಥಿಯ 'ಸಿಹಿ ಪೊಂಗಲ್' ಪ್ರಸಾದದ ಸಿಂಹಪಾಲು ಸದಾ ನನಗೇ!

ಅಜ್ಜಿಯೇ ನನ್ನನ್ನು ಹೆರಿಗೆ ಮಾಡಿಸಿದ ಸೂಲಗಿತ್ತಿ. ಅಪ್ಪನ ಬಣ್ಣವನ್ನೇ ಬಹುಮಟ್ಟಿಗೆ ಪಡೆದಿದ್ದೆ. ಕಪ್ಪುಬಣ್ಣ! ಆದರೆ ಅಜ್ಜಿಗೆ ನನ್ನ ಬಣ್ಣದ ಚಿಂತೆ ಆಗಲಿಲ್ಲ. ಎಷ್ಟೇ ಆಗಲಿ 'ನಾನೊಂದು ಗಂಡು ಮಗುತಾನೆ?' ಚಿಂತೆ ಆದದ್ದು ಗಾಳಿಗೆ ಹಾರಿ ಹೋಗುವಂತಿದ್ದ ನನ್ನ ತೂಕದ ಬಗ್ಗೆ!

ಅಜ್ಜಿಯ ಬುದ್ಧಿ ಶಕ್ತಿಗೂ, ತಾಳ್ಮೆಗೂ ಸವಾಲೆಸೆದಂತೆ ನಾನು ಮತ್ತೊಂದು ಸಮಸ್ಯೆಯ ಶಿಶುವಾಗಿದ್ದೆ. ಚಿಕ್ಕ ಪ್ರಮಾಣದ ಅಧಿಕಾಂಗನಾ

ಈ ಸಂಗ್ರಹದೊಂದಿಗೆ ಬಳಸಿಕೊಳ್ಳಲಾದ ವಿಶೇಷ ಉಲ್ಲೇಖ(Box Itemes)ಗಳಿಗಾಗಿ ಎ.ಕೆ. ಭಟ್ ಮತ್ತು ಬ.ನ. ಗುಂಡೂರಾವು ಅವರಿಗೆ ಋಣಿ.

– ಸಂಗ್ರಾಹಕ

ಗಿಯೇ ಭುವಿಗಿಳಿದು ಬಂದಿದ್ದೆ. ನನ್ನ ಎರಡು ಕೈ, ಎರಡು ಕಾಲು, ಊಡಿದಾರ ಜೊತೆ 'ಆರೂ' ಇರಲಿ ಎಂಬಂತೆ ಪ್ರತಿಯೊಂದು ಕೈಯಲ್ಲೂ ಕಾಲಿನಲ್ಲೂ ಒಂದೊಂದು ಅಧಿಕ ಬೆರಳು ಮೂಡಿ ಬಂದಿತ್ತು. ನನಗೆ ಅವುಗಳಿಂದ ಯಾವ ಬಾಧೆಯೂ ಇರಲಿಲ್ಲ. ಬಾಧೆ ಆದದ್ದು ಅಜ್ಜಿಯ ಮನಸ್ಸಿಗೆ. ಅವಳಿಂದ ತಡೆಯುವುದಾಗಲಿಲ್ಲ. ಒಂದು ಕತ್ತರಿ ತೆಗೆದುಕೊಂಡು ಅನವಶ್ಯಕವಾಗಿದ್ದ ನಾಲ್ಕು ಬೆರಳುಗಳನ್ನೂ ಯಾವ ಮುಲಾಜಿಲ್ಲದೆ ಕತ್ತರಿಸಿ ಹಾಕಿದಳು. ಯಾವ ವೈದ್ಯರಿಗೂ ಕಾಯಲಿಲ್ಲ. ಮುನ್ನೆಚ್ಚರಿಕೆಯನ್ನೂ ವಹಿಸಲಿಲ್ಲ. ಅಷ್ಟು ಚೊಕ್ಕವಾಗಿ 'ಶಸ್ತ್ರ ಚಿಕಿತ್ಸೆ' ಮಾಡಿದುದಕ್ಕೆ ಹೆಮ್ಮೆಪಟ್ಟುಕೊಂಡಳು.

ಪಾಪ! ಬೆರಳುಗಳನ್ನು ಕತ್ತರಿಸಿ ಹಾಕಿದಾಗ ಅಜ್ಜಿಯ ಉದ್ದೇಶವೇನೋ ನಿಷ್ಕಲ್ಮಷವಾಗಿತ್ತು. ಆದರೆ ಕತ್ತರಿ ನಿಷ್ಕಲ್ಮಷವಾಗಿರಲಿಲ್ಲ. ಕತ್ತರಿಸಿದ ಗಾಯಗಳಿಂದ ನಂಜಾಗಿ ನನ್ನನ್ನು ಮೃತ್ಯುಲೋಕದ ಕಡೆಗೆ ದೂಡಿತು. ಈ ಸಂಕಟ ಬಂದಾಗ, ನನ್ನ ಸ್ಥಿತಿಯನ್ನು ಕಂಡು ಅಜ್ಜಿಗೆ ತಿರುಪತಿ ವೆಂಕಟರಮಣನ ನೆನಪಾಯಿತು. ತಿರುಪತಿ ಯಾತ್ರಿಕರ ತಂಡವನ್ನು ಅಜ್ಜಿ ಪತ್ತೆ ಹಚ್ಚಿದಳು. ಅವರ ಕೈಯಲ್ಲಿ ಹುಂಡಿಗೆ ಹಾಕಲು ಕಾಣಿಕೆ ನೀಡಿ 'ದೇವರೇ ತಪ್ಪು ಮಾಡಿ ಬಿಟ್ಟೆ ಕ್ಷಮಿಸು, ನಮ್ಮ ಮಗುವನ್ನು ರಕ್ಷಿಸು, ಅದರ ಪ್ರಾಣವನ್ನು ಉಳಿಸಿ ಕಾಪಾಡು,' ಎಂದು ಕಂಬನಿ ಸುರಿಸಿ ಪ್ರಾರ್ಥಿಸಿಕೊಂಡಳು. ಪ್ರಾರ್ಥನೆ ಕೈಗೂಡಿತು. ತಪ್ಪು ದಂಡ ಕೆಲಸ ಮಾಡಿತು. ಅಜ್ಜಿಯ ಶಸ್ತ್ರ ಚಿಕಿತ್ಸೆಯಿಂದ ಪ್ರಾಣಾಪಾಯಕ್ಕೊಳಗಾಗಿದ್ದ ನಾನು, ಶ್ರೀನಿವಾಸನ ಕೃಪೆಯಿಂದ ಚೇತರಿಸಿಕೊಂಡು ಮೈ ಕೈ ತುಂಬಿಕೊಂಡು ಬೆಳೆಯತೊಡಗಿದೆ. ಸಪ್ತಗಿರಿ ವೆಂಕಟೇಶ್ವರನ ಮಹಿಮೆಯನ್ನು ಮನೆ ಮಂದಿ ಕೊಂಡಾಡಿದರು!

ಹುಟ್ಟಿದ (ಮೊದಲ) ಕೂಸಿಗೆ ತಾತನ ಹೆಸರನ್ನೇ ಇಡುವುದು ಸಂಪ್ರದಾಯ. ಅದರಂತೆ ನನಗೆ ತಂದೆಯ ಅಪ್ಪನ ಹೆಸರನ್ನಿಟ್ಟರು. 'ಕಸ್ತೂರಿ' ಎಂಬುದನ್ನು ಬೇರೆ ಮೊದಲೇ ಸೇರಿಸಿ 'ರಂಗನಾಥ' ಎಂದು. ಅಪ್ಪ ನನ್ನನ್ನು ಆತನ ಮುಖದವರೆಗೂ ಮೇಲೆತ್ತಿ ಬಲಕಿವಿಯೊಳಗೆ ನನ್ನ ಹೆಸರನ್ನು ಮೂರು ಬಾರಿ ಬಲವಾಗಿ ಊದಿದರು. ವಿಚಿತ್ರ ಶಬ್ದಗಳ ಉದ್ದನೆಯ ಸರಮಾಲೆ - ಆ ಹೆಸರು! ಆದರೇನು ಅಂದಿನಿಂದ ಮೊದಲುಗೊಂಡು ಮುಂದೆ ಎಂದೆಂದೂ ಆ ಹೆಸರಿನಿಂದ ಕೂಗಿದಾಗಲೆಲ್ಲ ನಾನು ಹಿಂತಿರುಗಿ ನೋಡಬೇಕು. ಆ ಹೆಸರಿನಿಂದಲೇ ಎಲ್ಲರೂ ನನ್ನನ್ನು ಗುರುತಿಸುವರು. 'ಕಸ್ತೂರಿ' ಎಂದು ತಾನೆ ನನ್ನ ಹೆಸರು ಆರಂಭವಾಗುವುದು. ಅದನ್ನು ಇನ್ನಷ್ಟು ಪರಿಮಳ ಯುಕ್ತಗೊಳಿಸುವಂತಹ ಜೀವನ ಸೌಭಾಗ್ಯವನ್ನು ಈ ಮಗುವಿಗೆ ಸದಾ ಕರುಣಿಸಬೇಕೆಂದು ಅಪ್ಪ ಪಾರ್ಥಸಾರಥಿ ಸ್ವಾಮಿಯಲ್ಲಿ ಕೈ ಜೋಡಿಸಿ ಪ್ರಾರ್ಥಿಸಿಕೊಂಡರು.

ಪ್ರತಿಸಲವೂ 'ಕಸ್ತೂರಿ ರಂಗನಾಥ ಶರ್ಮ' ಎಂದು ಇಷ್ಟೊಂದು ಉದ್ದವಾಗಿ ಹೆಸರನ್ನು ಕರೆಯುವುದು ಹೇಗೆ? ಕತ್ತರಿಸಿ ಮೊಟಕುಗೊಳಿಸಬೇಕು. ಯಾವ ಭಾಗವನ್ನು ಕತ್ತರಿಸುವುದು? ಕೊನೆಗೆ ಒಂದು ನಿರ್ಧಾರಕ್ಕೆ ಬಂದು 'ಶರ್ಮಾ' ಜಾತಿವಾಚಕ ಬೇಡ. ಅದರ ಜೊತೆಗೆ 'ರಂಗನಾಥ' ಎಂಬ ಭಾರವನ್ನೂ ಕಳಚಿ ಹಾಕಿ, ಅಮ್ಮನ ಪಾಲಿಗೆ ಕೇವಲ 'ಕಸ್ತೂರಿ' ಆಗಿ ಉಳಿದೆ. ತಂದೆಯ ಹೆಸರು ಉಳಿಸುವ ಉದ್ದೇಶದಿಂದ ನಾರಾಯಣ ಸೇರಿಸಿ 'ನಾ.

---

**ಜೀವನೊಲಿದ ಜೀವ**
ಶ್ರೀ ಸತ್ಯಸಾಯಿ ಲೋಕ ಶಿಕ್ಷಣ ಟ್ರಸ್ಟ್ (ರಿ) ಅಳಿಕೆ,
ಅಂಚೆ: ಸತ್ಯಸಾಯಿ ವಿಹಾರ- ೫೭೪೨೩೫, (ದ.ಕ.)
ಪುಸ್ತಕದ ಬೆಲೆ ರೂಪಾಯಿ ೨೦.೦೦
ಪುಟಗಳು: ೩೦೫.



ಕಸ್ತೂರಿ'ಯಾದೆ!

ಬಹುಶಃ ನನಗೆ ಆರು ವರ್ಷ ಪ್ರಾಯವಾಗಿದ್ದಾಗ, ಅಮ್ಮ-ಅಪ್ಪ ಒಟ್ಟಾಗಿ ಸಂಚು ನಡೆಸಿ, ಸ್ಕೂಲಿಗೆ ಸೇರಿಸಿದರು. ಏನಾದರೇನು, ಕೇವಲ ಒಂದು ವಾರದೊಳಗಾಗಿ ನಾನು ಶಾಲೆಯನ್ನು ಬಿಟ್ಟುಬಿಡಬೇಕಾಯಿತು. ಐದು ದಿನ 'ಅಮ್ಮ ಚೆಲ್ಲಿದ ಮುತ್ತು' ಅಂದರೆ ಸಿಡುಬಿನ ಕಾಯಿಲೆಯಿಂದ ನನ್ನ ತಂದೆ ತೀರಿಕೊಂಡರು.

### ಅಧ್ಯಾಯ ೨
## ತಾತನ ಮುದ್ದಿನ ಮೊಮ್ಮಗ

ತಂದೆ ಗತಿಸಿದ ನಂತರ ನಾನು ಮತ್ತು ತಾಯಿ ನಿರ್ಗತಿಕರಾಗಿ 'ತಾತ'ನ ಮನೆ ಸೇರುವುದು ಅನಿವಾರ್ಯವಾಯಿತು. ತಾತನದು ಕೊಂಚ ವಿಚಿತ್ರ. ಸಮಸ್ಯೆಗೆ ಏನಾದರೂ ಪರಿಹಾರವನ್ನು ಹುಡುಕುವುದಿರಲಿ ಪರಿಹಾರದಲ್ಲೇ ಸಮಸ್ಯೆಗಳನ್ನು ನಿರ್ಮಿಸುವ ಸ್ವಭಾವ ಅವನದು. ತಾತನಿಗೆ ಜಮೀನು, ಹಸು, ಕರು ಯಾವುದೂ ಇರಲಿಲ್ಲ. ನಿಶ್ಚಿತವಾದ ವರಮಾನವಿಲ್ಲ. ಆದರೆ ಅವನಲ್ಲಿ ಒಂದು ಅಪೂರ್ವ, ವಿಶಿಷ್ಟ ಕಲೆ ಮೈಗೂಡಿತ್ತು. ಅದು ತೀರಾ ಅಪರೂಪದ ಕೌಶಲ! ಬಂಡವಾಳವಿಲ್ಲದ ಆ ಕಲೆಯನ್ನು ಬುದ್ಧಿಪೂರ್ವಕವಾಗಿ ಉಪಯೋಗಿಸಿದರೆ ಹಣ ಸಂಪಾದಿಸಬಹುದೆಂಬುದನ್ನು ತಾತ ಕಂಡುಹಿಡಿದುಕೊಂಡ. ಅದು ಕಾಲ್ಪನಿಕ ಕಥೆಗಳನ್ನು ಕಟ್ಟಿ, ಸ್ವಾರಸ್ಯವಾಗಿ ನಾಲ್ಕು ಜನರ ಮುಂದೆ ಬಿತ್ತರಿಸುವ ಕಲೆ! ಸರಿ. ಅದೇ ತಾತನ ಬೃಹತ್ ಉದ್ಯಮವಾಗಿ ಬೆಳೆಯಿತು. ಜನಮನವನ್ನು ಆಕರ್ಷಿಸುವಂತಾಯಿತು! ತಾತ ಕಥೆ ಆರಂಭಿಸಿದರೆ ಮಕ್ಕಳು, ಹಿರಿಯರು ಗಂಟೆಗಟ್ಟಲೆಕಾಲ ಸಂತೋಷದಿಂದ ಕುಳಿತು ಮಂತ್ರಮುಗ್ಧರಾಗಿ ಕೇಳುತ್ತಿದ್ದರು. ಅಲ್ಲೆಲ್ಲಾ ಅವನ ಖ್ಯಾತಿ ಆಗಲೇ ಹರಡಿಬಿಡುತ್ತಿತ್ತು. ಕೇವಲ ಒಂದೆರಡು ಗಂಟೆ ಸಮಯದೊಳಗೆ ಕನಿಷ್ಠ ಒಂದೆರಡು ರೂಪಾಯಿಗಳನ್ನು ಸಂಪಾದಿಸಿ ತನ್ನ 'ಪಂಚೆಯ ಚುಂಗಿನಲ್ಲಿ' ಬಿಗಿದುಕೊಂಡು ಹೋಗುತ್ತಿದ್ದ! ಎಷ್ಟೋ ಸಲ ತಾತನ ಜೊತೆಗೆ ನಾನೂ ಹೋಗುತ್ತಿದ್ದೆ. ಆಗ ಆತ ನನ್ನನ್ನೇ ಬಂಡವಾಳ ಮಾಡಿಕೊಂಡು 'ತಂದೆ ಇಲ್ಲದ ತಬ್ಬಲಿ- ವಿದ್ಯಾಭ್ಯಾಸ ಮಾಡಿಸಬೇಕು' ಎಂದು ಹೇಳಿಕೊಂಡು ಮತ್ತೊಂದು ರೂಪಾಯಿ ಹೆಚ್ಚು ಪಡೆಯುತ್ತಿದ್ದ!

ಕಥೆ ಕಟ್ಟಿ ಸ್ವಾರಸ್ಯವಾಗಿ ಹೇಳುವುದರಲ್ಲಿ ತಾತನಿಷ್ಣಾತ. ಪ್ರತಿಯೊಂದು ವಿವರವನ್ನೂ ಕಣ್ಣಿಗೆ ಕಟ್ಟುವಂತೆ ಮಾತುಗಳಲ್ಲಿ ಚಿತ್ರಿಸುವ ಕಲೆ ತಾತನಿಗೆ ದೈವದತ್ತವಾಗಿತ್ತು. ಒಮ್ಮೆ ಒಂದು ಕಥೆ ಆರಂಭಿಸಿ, ಸುಂದರ ಉದ್ಯಾನಗಳ ಅದ್ಭುತನಗರಿ ಮೈಸೂರನ್ನು ರಸವತ್ತಾಗಿ ಬಣ್ಣಿಸತೊಡಗಿದ. ಅಲ್ಲಿಯ 'ಚಾಮುಂಡಿ ಬೆಟ್ಟ', ಮಹಾರಾಜರೇ ಖುದ್ದಾಗಿ ಗಮನವಿತ್ತು ಪರಿಪಾಲನೆ ಮಾಡುತ್ತಿದ್ದ 'ಝೂ ಗಾರ್ಡನ್', 'ದಸರಾ ಮಹೋತ್ಸವ', 'ಜಂಬೂ ಸವಾರಿ' ಇತ್ಯಾದಿ ವಿಷಯಗಳನ್ನು ಚಿತ್ರಿಸಿ ನಮ್ಮ ಕಣ್ಣ ಮುಂದೆ ನಿಲ್ಲಿಸಿದ!

ರಾಜ್ಯಮಟ್ಟದ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ರ್‍ಯಾಂಕ್ ಗಳಿಸಿದ್ದರಿಂದ ನನಗೆ 'ಸ್ಕಾಲರ್‌ಶಿಪ್' ಪ್ರತಿ ತಿಂಗಳು ಐದು ರೂಪಾಯಿಗಳಂತೆ

ಪ್ರತಿ ಮೂರು ತಿಂಗಳಿಗೊಮ್ಮೆ ಹದಿನೈದು ರೂಪಾಯಿ ಮೊತ್ತ 'ಚಿನ್ನದ ಸವರೆನ್' ರೂಪದಲ್ಲಿ ಬರುತ್ತಿತ್ತು. ಅದನ್ನು ನಾನು ಹೆಮ್ಮೆಯಿಂದ ತಾತನ ಕೈಲಿ ಕೊಟ್ಟ ಕೂಡಲೇ 'ಚಿನ್ನದ ಸವೆರನ್' ತಕ್ಷಣ ಬೆಳ್ಳಿ, ನಿಕ್ಕಲ್ ಮತ್ತು ತಾಮ್ರದ ಚಿಲ್ಲರೆ ನಾಣ್ಯಗಳಾಗಿ ಪರಿವರ್ತನೆಗೊಳ್ಳುತ್ತಿತ್ತು.

ಇದರ ಜೊತೆಗೆ ಇನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದ ನನಗೆ ಮದುವೆ ಮಾಡಿ, ವರದಕ್ಷಿಣೆಯೆಂದು ಗೊತ್ತಾದ ಹಣಕ್ಕೆ (ಅಸಲು ಬರದೇ ಹೋದರೂ) ಬಡ್ಡಿಯೂ ಬರುವಂತೆ ಮಾಡಿದ! ಹೀಗೆ ಬಂದ ಹಣದ ಜೊತೆಗೆ ಕೊಚ್ಚಿನ್ ಮಹಾರಾಜರ ಅನ್ನಸತ್ರದ 'ಬಿಟ್ಟಿ ಊಟ'ಗಳಲ್ಲಿ ಓದಿ, ಫಸ್ಟ್‌ಕ್ಲಾಸ್ ರ್‍ಯಾಂಕ್ ಪಡೆದೇ ಚರಿತ್ರೆಯಲ್ಲಿ ಎಂ.ಎ ಮಾಡಿ ಹೈಸ್ಕೂಲ್ ಟೀಚರರಾಗಿ ಬಿ.ಎಲ್. ಮಾಡಿದೆ.

ಈ ನಡುವೆ ಪತ್ರಿಕಾ ಜಾಹೀರಾತೊಂದು ಕಣ್ಣಿಗೆ ಬಿತ್ತು. 'ಡಿ.ಬಿ.ಸಿ. ಹೈಸ್ಕೂಲ್' ಮೈಸೂರಲ್ಲಿ ಚರಿತ್ರೆ ಪಾಠಕ್ಕೆ ಲೆಕ್ಚರರ್ ಬೇಕೆಂದು ಕೇಳಿಕೊಂಡಿದ್ದರು. ಮೈಸೂರು ಪರವಾಗಿಲ್ಲ ಎನಿಸಿತು. ನನ್ನ ತಾತನ ಕಥೆಗಳಿಂದ ಆ ಹೆಸರು ಚಿರಪರಿಚಿತಗೊಂಡಿತ್ತು. ತೀರ ದೂರವೂ ಅಲ್ಲ, ಅರ್ಜಿ ಹಾಕಿದೆ. ಹತ್ತು ದಿನದೊಳಗೆ ನೇಮಕಗೊಂಡಿರುವುದಾಗಿ ಉತ್ತರ ಬಂತು.

## ಅಧ್ಯಾಯ ೩

## ಪರಮಹಂಸರ ಪಾಲನೆಯಲ್ಲಿ

ಭಗವಾನ್ ರಾಮಕೃಷ್ಣ ಪರಮಹಂಸರು ನನ್ನ ಜೀವನದಲ್ಲಿ ಭಾರೀ ಪರಿಣಾಮ ಬೀರಿದ್ದರು. ನನ್ನನ್ನು ಕೆಲವೊಂದು ಅಪಾಯದಂಚಿನಿಂದ ಈಚೆಗೆಳೆದು ರಕ್ಷಿಸಿದ್ದರು.

ಚಳಿಗಾಲದ ಒಂದು ಬೆಳಗು. ಮಿತ್ರ ಶಂಕರರಾವು ಎಂಬುವರು ನಮ್ಮ ಮೈಸೂರಿನ ಮನೆಗೆ ಕೇರಳದೊಬ್ಬ 'ಯುವ ಸಂನ್ಯಾಸಿ' ಮಹಾನುಭಾವರನ್ನು ಕರೆತಂದರು. ಅವರನ್ನು ನೋಡುತ್ತಲೇ ಪರಮ ಸಂತೋಷವಾಯಿತು. ಬಂದವರು ನನ್ನ ಬಾಲ್ಯ ಸ್ನೇಹಿತ ಗೋಪಾಲ್ ಮಹಾರಾಜ ಆಗಿದ್ದರು. "ಏನು, ನನ್ನ ಗುರುತು ಸಿಕ್ಕಿತೆ?" ಎಂದು ಕೇಳುತ್ತಿದ್ದಾರೆ! ಸಿಕ್ಕದೆ ಏನು, ಆದರೆ ಸಂನ್ಯಾಸ ಸ್ವೀಕರಿಸಿದ ಮೇಲೆ ಹೆಸರು' ಸಿದ್ದೇಶ್ವರನಂದಾ' ಎಂದಾಗಿದ್ದುದು ಗೊತ್ತಿರಲಿಲ್ಲ. ಈಗ ಅವರು ಮೈಸೂರಿಗೆ ಬಂದು ರಾಮಕೃಷ್ಣಾಶ್ರಮದ ನೇತೃತ್ವ ವಹಿಸಿಕೊಂಡು ನನ್ನನ್ನು ಅಲ್ಲಿಗೆ ಸೆಳೆದುಕೊಳ್ಳುವ ಸಲುವಾಗಿ ಬಂದಿದ್ದಾರೆ. ತುಂಬಾ ಸಂತೋಷದಿಂದ ಅವರೊಂದಿಗೆ ಸೇರಿಕೊಂಡು ಸುದೀರ್ಘ ಕಾಲದವರೆಗೆ ಆಶ್ರಮದ ಪ್ರಧಾನ ಕಾರ್ಯದರ್ಶಿಯಾಗಿ ದುಡಿದೆ. ಗೋಪಾಲ್ ಮಹಾರಾಜ್ ಆಶ್ರಮದ ಅಧ್ಯಕ್ಷರಾಗಿದ್ದರು.

ಆಗಾಗ ಆಶ್ರಮಕ್ಕೆ ಬಂದು ತನ್ನ ಸ್ವಂತ ಕವನಗಳನ್ನು ವಾಚಿಸಿ ಬೆರಗುಗೊಳಿಸುತ್ತಿದ್ದ ಪ್ರತಿ

"ನಗುವೊಂದು ರಸಪಾಕ- ಅಳುವೊಂದು ರಸಪಾಕ ನಗುವಾತ್ಮ ಪರಿಮಳವ ಪಸರಿಸುವ ಕುಸುಮ" ಎಂಬುದನ್ನು ದಿ. 'ನಾ. ಕಸ್ತೂರಿ' ಜೀವನದಲ್ಲಿ ಅರಗಿಸಿಕೊಂಡವರು. ನಗುವುದು, ನಗಿಸುವುದು, ನಗುವನ್ನು ಕಾಣುವುದು ಅವರ ಸಹಜ ಸ್ವಭಾವ. ಅವರ ಬಳಿಗೆ ಬಂದವರಿಗೆ ಈ ಕುರಿತು ಹೇಳಬೇಕೆ? ತಾನೂ ನಕ್ಕು ಇತರರನ್ನೂ ನಗಿಸುವ ಕಲೆ ಅವರಲ್ಲಿ ಕರತಲಾಮಲಕವಾಗಿತ್ತು. ಒಮ್ಮೆ ಪುಟ್ಟಪರ್ತಿಯಲ್ಲಿ ಶಾಲಾಮಕ್ಕಳ ವಾರ್ಷಿಕ ಪಂದ್ಯಾಟದ ಸಮಯ. ಶ್ರೀ ಭಗವಾನ್ ಸತ್ಯಸಾಯಿಬಾಬಾ,

"ಏನೇನು ಆಟಗಳು?" ಎಂದು ಕಸ್ತೂರಿಯವರಲ್ಲಿ ಕೇಳಿದರು.

'ವಾಲಿಬಾಲ್', 'ಫೂಟ್‌ಬಾಲ್'... ಮುಂತಾದ ಹಲವಾರು ಆಟಗಳ ಹೆಸರನ್ನು ಕಸ್ತೂರಿ ಹೆಸರಿಸಿದರು.

"ನೀನು ಯಾವ ಆಟದಲ್ಲಿದ್ದಿ?" ಎಂದರು ಬಾಬಾ.

"ಫುಡ್ ಬಾಲ್' ಅಂದರು ಒಡನೆಯೇ ಕಸ್ತೂರಿ.

ಬಾಬಾ ಮನಃಪೂರ್ತಿ ನಕ್ಕರು.



ಭಾವಂತ ವಿದ್ಯಾರ್ಥಿಯೊಬ್ಬ ಬಹಳ ಕಾಯಿಲೆಯಾಗಿ ಮಲಗಿದ್ದನೆಂದು ಸುದ್ದಿ ಕೇಳಿದೆವು. ಆತನ ಹೆಸರು ಕೆ.ವಿ. ಪುಟ್ಟಪ್ಪ. ಧಾನ್ಯದ ಗೋದಾಮಿನ ಮಹಡಿಯೊಂದರಲ್ಲಿ ಪುಟ್ಟಪ್ಪ ಕೆಂಡಾಮಂಡಲ ಜ್ವರದಿಂದ ನರಳುತ್ತಾ ಮಲಗಿದ್ದ. ಆತನನ್ನು ಕೂಡಲೇ ಆಸ್ಪತ್ರೆಗೆ ಸೇರಿಸಿ ಯೋಗ್ಯ ಚಿಕಿತ್ಸೆ ಮಾಡಿಸಿ, ಆಶ್ರಮಕ್ಕೆ ಕರೆತಂದೆವು. ದೀಕ್ಷಾಬದ್ಧ ಸಾಧು- ಸನ್ಯಾಸಿಗಳು ಮಾತ್ರ ಆಗ ಆಶ್ರಮದಲ್ಲಿ ವಾಸಿಸಬಹುದಾಗಿತ್ತು. ಗೋಪಾಲ್ ಮಹಾರಾಜರು ತಮ್ಮ ಬೇಲೂರು ಮಠದ ಕೇಂದ್ರ ಕಚೇರಿಗೆ ಕಾಗದ ಬರೆದರು. 'ಪುಟ್ಟಪ್ಪ ಸಾಧಾರಣ ಯುವಕನಲ್ಲ. ಭಾರತೀಯ ಸಂಸ್ಕೃತಿಯ ಭವ್ಯ ಭವನದ ಅತ್ಯಂತ ಭದ್ರ ಆಧಾರಸ್ತಂಭನಾಗುವ ಭವ್ಯ ಭವಿಷ್ಯವಿರುವ ಮಹಾನ್ ಯುವಕನಾಗಿದ್ದಾನೆ' ಎಂದು ವಿವರಿಸಿ, 'ಈ ಉದಯೋನ್ಮುಖ ಕವಿ, ತಾನು ಇಷ್ಟಪಡುವಷ್ಟು ಕಾಲ- ಅದೆಷ್ಟೇ ವರ್ಷಗಳಾಗಲಿ- ಮೈಸೂರ ಆಶ್ರಮದಲ್ಲಿ ನೆಲೆ ನಿಲ್ಲಲು ಅನುಮತಿ ಕೊಟ್ಟೇತೀರಬೇಕು,' ಎಂದು ಗೋಪಾಲ್ ಮಹಾರಾಜ್ ಪತ್ರದಲ್ಲಿ ಸ್ಪಷ್ಟಪಡಿಸಿದ್ದರು. ಕೆ.ವಿ. ಪುಟ್ಟಪ್ಪ ಆಶ್ರಮದಲ್ಲೇ ಶ್ರೇಷ್ಠ ಕವಿಯಾಗಿ ಬೆಳಗಿ ನೂತನ ಇತಿಹಾಸ ನಿರ್ಮಿಸಿದರು.

## ಅಧ್ಯಾಯ ೪
## ಶೈಕ್ಷಣಿಕ ಸಾಹಸಗಳು

ನಾನು ಮೈಸೂರಿನಲ್ಲಿದ್ದ ೧೭ ವರ್ಷಗಳೂ ನನಗಲ್ಲಿ ಉತ್ಕೃಷ್ಟ ವ್ಯಕ್ತಿಗಳೇ ಸಹೋದ್ಯೋಗಿಗಳಾಗಿ ಸಿಕ್ಕರು. ನಾವೆಲ್ಲ ಖುಷಿಯಾಗಿ ಕಾಲ ಕಳೆದವು. ದೇಶಭಕ್ತಿಯ ಸ್ಫೂರ್ತಿಯಲ್ಲಿ ಅರ್ಥವತ್ತಾಗಿ ಬಾಳಿದೆವು. 'ಟೈ' ಕಟ್ಟುವುದನ್ನು ತ್ಯಜಿಸಿದೆವು. ಪರಸ್ಪರ ಮಾತುಕತೆಗಳಲ್ಲಿ 'ಶುದ್ಧ ಕನ್ನಡ' ಭಾಷೆಯನ್ನೇ ಬಳಸಬೇಕು. ಇಂಗ್ಲಿಷ್ ಪದ ನುಸುಳಿದರೆ ಪದಕ್ಕೊಂದು ಕಾಸಿನಂತೆ ದಂಡ ಕಟ್ಟಬೇಕು ಎಂಬುದು ನಾವು-ನಾವೇ ಮಾಡಿಕೊಂಡ ಹಲವಾರು ನಿಯಮಗಳಲ್ಲಿ ಒಂದು. ವಿಶ್ವವಿದ್ಯಾನಿಲಯದ ಶಿಕ್ಷಕ ಸಂಘವೊಂದನ್ನು ಪರಿಣಾಮಕಾರಿಯಾಗಿ ಕಟ್ಟಿ ರಾಜ್ಯದಾದ್ಯಂತ ಕನ್ನಡ ಪ್ರಸಾರ ಕಾರ್ಯಕ್ರಮ ನಡೆಸಿದೆವು. ಇವುಗಳಿಗೆ ಸ್ಥಳೀಯ ಜನರಿಂದ ಭಾರೀ ಪ್ರೋತ್ಸಾಹ ಲಭಿಸಿತು. ವಯಸ್ಕರ ಶಿಕ್ಷಣ, ಗ್ರಾಮಾಂತರ ಸೇವೆ ಆರಂಭವಾಯಿತು. ನನ್ನ ನಗೆ, ಕಟಕಿ, ವ್ಯಂಗ್ಯಗಳು ಜನರಿಗೆ ತುಂಬಾ ಹಿಡಿಸಿತು. ಹಳ್ಳಿ-ಹಳ್ಳಿಗಳಿಗೆ ತೆರಳಿ 'ನಂದನಾರ್', 'ಮಂಕಾಸುರವಧೆ', 'ಏಕಚಕ್ರ', 'ಶಂಭು' ಮುಂತಾದ ನಾಟಕಗಳನ್ನು ನಾನೇ ಬರೆದು ಆಡಿಸುತ್ತಿದ್ದೆ. ಹರಿಕಥೆ ಆರಂಭಿಸಿದೆ. ಪ್ರೊಫೆಸರ್ ಒಬ್ಬರು 'ಹರಿಕಥಾದಾಸರ' ವೇಷದಲ್ಲಿ ಬೆಳ್ಳಿ ಚಿಟಿಕೆ, ತಾಳ-ತಂಬೂರಿ ಬಾರಿಸುತ್ತ ಊರು ಹೊರಟದ್ದು ಇದೇ ಮೊದಲು. ಅಂದಿನಿಂದ ಹರಿಕಥಾ ವೃತ್ತಿಗೆ 'ಶುಕ್ರದೆಸೆ' ಆರಂಭವಾಯಿತು.

ನಾನು ಕನ್ನಡದಲ್ಲಿ ಬರೆದ ವ್ಯಂಗ್ಯ ವಿಡಂಬನಾತ್ಮಕ ಲೇಖನ, ಹಾಸ್ಯ ಚುಟುಕುಗಳು, ಅಣಕವಾಡು, ಶ್ಲೇಷಾರ್ಥ ಪದಗಳ ಲೇಖನಗಳಿಗೆ

ಲೆಕ್ಕವಿಲ್ಲ. ಅವೆಲ್ಲ ನಿರಂತರವಾಗಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. 'ಯದ್ವಾ ತದ್ವಾ', 'ಅಲ್ಲೋಲ ಕಲ್ಲೋಲ,' 'ಉಪಾಯ ವೇದಾಂತ', 'ಅಣುಕು-ಮಿಣುಕು,' 'ಗಾಳಿ ಗೋಪುರ', 'ಶಂಖವಾದ್ಯ', 'ಗೃಹದಾರಣ್ಯಕ', 'ರಂಗನಾಯಕಿ', 'ಬೆಂಗಳೂರ ಚಲುವ', 'ಅಶೋಕ' ಮುಂತಾದ ಎಷ್ಟೋ ಗ್ರಂಥಗಳು ಪ್ರಕಟವಾದವು. ಅವುಗಳಲ್ಲಿ 'ಅನರ್ಥ ಕೋಶ' ಒಂದು ವಿನೂತನ ಪ್ರಯೋಗ. ಯಾವ ಭಾಷೆಯಲ್ಲೂ ಅಂಥದೊಂದು ಗ್ರಂಥವಿಲ್ಲ. ಪೂರ್ತಿ ನನ್ನ ಸ್ವಂತ ತಯಾರಿಕೆ!

ಇಲ್ಲಿಂದ ಡಾ. ಶಿವರಾಂ ಪರಿಚಯವಾಯಿತು. 'ಕೊರವಂಜಿ' ಆರಂಭಿಸಿದೆವು. ಅದರ ವ್ಯಂಗ್ಯ ಚಿತ್ರಗಳಿಗಾಗಿ ವಿದ್ಯಾರ್ಥಿ ವೃಂದದಿಂದ ಆರ್.ಕೆ. ಲಕ್ಷ್ಮಣ್ ಮತ್ತು ನಾಡಿಗ್‌ರಂತಹ ಯುವ ಪ್ರತಿಭೆಗಳನ್ನು ಹೆಕ್ಕಿ ತೆಗೆದೆ. 'ಶಂಕರ್ಸ್ ವೀಕ್ಲಿ'ಯಲ್ಲಿ ದಶಕದಷ್ಟು ಕಾಲ ತಪ್ಪದೆ 'MERE PRATTLE' 'ಗೊಡ್ಡು ಹರಟೆ' ಅಂಕಣ ಬರೆದೆ.

ಮಹಾರಾಜಾ ಕಾಲೇಜಿನ ಮನಃಶಾಸ್ತ್ರ ವಿಭಾಗದ ಪ್ರಯೋಗ ಶಾಲೆಯಲ್ಲಿ 'ಬಿಳಿ ಇಲಿಗಳ' ಬಗ್ಗೆಯೇ ಸದಾ ಮಗ್ನರಾಗಿದ್ದರೂ ಆಗಾಗ ನನ್ನ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದವರು ಡಾ. ಎಂ.ವಿ. ಗೋಪಾಲಸ್ವಾಮಿ. ಒಮ್ಮೆ 'ಕಾಲೇಜ್ ಡೇ' ಸಮಾರಂಭದಲ್ಲಿ ಭಾಷಣ ಮಾಡುತ್ತಾ ಪ್ರಿನ್ಸಿಪಾಲ್ ಜೆ.ಸಿ. ರಾಲೋ ನನ್ನನ್ನು ಕಾಲೇಜಿನ ಒಂದು 'ಒಂಟೆ' ಎಂದು ಬಣ್ಣಿಸಿ ಪ್ರಶಂಸಿಸಿದಾಗ ಡಾ. ಸ್ವಾಮಿಯೂ ಇದ್ದರು. ಎಷ್ಟು ಭಾರ ಹೊರಿಸಿದರೂ ಗೊಣಗದೇ ಹೊತ್ತು ನಿಭಾಯಿಸುತ್ತಿದ್ದುದರಿಂದ ರಾಲೋ ನನ್ನನ್ನು 'ಒಂಟೆ' ಎಂದು ಕರೆದಿದ್ದರು. ಅನೇಕ ಭಾರದ ಹೇರುಗಳನ್ನು ಹೊರಿಸಿದರೂ ಪ್ರತಿಭಟಿಸದೆ ಇದ್ದುದು ಮಾತ್ರವಲ್ಲ, ನನಗೆ ಇದೆಲ್ಲ ಇಷ್ಟ, ಇನ್ನೂ ಏನಾದರೂ ಇದ್ದರೆ ಹೇಳಿ, ಹೊರಬಲ್ಲೆ ಎಂದು ಕೇಳುತ್ತಿದ್ದೆ. ಹೀಗಿದ್ದುದರಿಂದ ಡಾ. ಗೋಪಾಲಸ್ವಾಮಿ ನನ್ನ ಬೆನ್ನ ಮೇಲೆ ಇನ್ನೊಂದು ಹೇರನ್ನಿಡಲು ತೀರ್ಮಾನಿಸಿದರು. ತಾವು ಹಾಲಂಡ್‌ನಿಂದ ತಂದಿದ್ದ 'ಫಿಲಿಪ್ಸ್ ರೇಡಿಯೋ ಟ್ರಾನ್ಸ್‌ಮೀಟರ್, ಒಂದನ್ನು ಮೈಸೂರು ನಗರಪಾಲಿಕೆಯವರಿಗೆ ಬಾಡಿಗೆಗೆ ನೀಡಿದರು. ಅದರಿಂದ ಪ್ರೋತ್ಸಾಹಿತರಾಗಿ ನಿತ್ಯ ಒಂದು ಘಂಟೆ 'ಶ್ರೀಸಾಮಾನ್ಯರಿಗೆ ಶಿಕ್ಷಣ' ಎಂಬ ಕಾರ್ಯಕ್ರಮವನ್ನು ರೂಪಿಸಿ ಪ್ರಸಾರ ಮಾಡಲು ಡಾ. ಸ್ವಾಮಿ ನನ್ನನ್ನು ವಿನಂತಿಸಿಕೊಂಡರು. ಇದು ನನಗೂ ಪ್ರಿಯವಾದ ಕೆಲಸವಾಯಿತು 'ಮೈಸೂರು ರೇಡಿಯೋ ಕೇಂದ್ರ' ದಿನದಿಂದ ದಿನಕ್ಕೆ ಜನಪ್ರಿಯವಾಗತೊಡಗಿತು. ವೈವಿಧ್ಯಮಯವಾಯಿತು. ಒಂದು ದಿನ ಡಾ. ಎಂ. ವಿ. ಗೋಪಾಲ್‌ಸ್ವಾಮಿ ತಮ್ಮ ತಲೆ ತಿನ್ನುತ್ತಿದ್ದ ಒಂದು ವಿಚಾರವನ್ನು ನಮ್ಮೆಲ್ಲರ ಮುಂದಿಟ್ಟು, "ಈ ತಲೆಶೂಲೆಯನ್ನು ಗುಣಪಡಿಸುವ ಔಷಧಿಯೊಂದನ್ನು ಕೊಡಬಲ್ಲಿರಾ?" ಎಂದು ಸವಾಲೆಸೆದರು.

ಮೈಸೂರು ಪ್ರಸಾರ ಕೇಂದ್ರಕ್ಕೆ ಯಾವ ಹೆಸರನ್ನಿಡಬೇಕು? ಎಂಬುದೇ ತಲೆಶೂಲೆಯುಂಟು ಮಾಡಿದ ವಿಚಾರ. ಎಲ್ಲ ಪ್ರೊಫೆಸರ್‌ಗಳು ತಲೆ ಕೆರೆದುಕೊಳ್ಳುತ್ತ ರಾತ್ರಿ-ಹಗಲು ಗಹನವಾಗಿ ಆಲೋಚಿಸಿದರು. ಹೊಳೆದ ಕೆಲವು ಹೆಸರುಗಳು ಕಿವಿ-ಬಾಯಿಗಳ ನಡುವೆ ಹಾರಾಡಿದವು. ಅದೊಂದು ಶುದ್ಧ ಭಾರತೀಯ ಪದ

> ನಿರಂತರ ನಲವತ್ತು ವರ್ಷಗಳಿಂದಲೂ 'ಕಸ್ತೂರಿ' ಅವರ ಮನಸ್ಸು ಒಮ್ಮೆಯೂ ಬಾಬಾ ಅವರನ್ನು ಬಿಟ್ಟು ಕದಲಲಿಲ್ಲ. ಅವರು ಅಕ್ಷರಶಃ ಋಷಿಸದೃಶ ಜೀವನವನ್ನೇ ಬಾಳಿ ಸಾಯಿಯಲ್ಲಿ ಐಕ್ಯರಾದರು. ಶ್ರೀ ರಾಮಕೃಷ್ಣ ಪರಮಹಂಸರ ನೇರ ಶಿಷ್ಯರಾಗಿದ್ದ ಶ್ರೀ ತಪಸ್ವಿ ಜೀಮಹಾರಾಜ ಅವರ ದಿವ್ಯಹಸ್ತದಿಂದ ಮಂತ್ರದೀಕ್ಷೆಯನ್ನು ಹೊಂದಿದ್ದ ಕಸ್ತೂರಿ ನಿಜಕ್ಕೂ ವಿಶ್ವಸಂಸಾರಿಯಾಗಿದ್ದರು.

ಆಗಿರಬೇಕು ಎಂಬುದು ಡಾಕ್ಟರ್ ಸ್ವಾಮಿಯವರ ಆಸೆ. ಆಗ ನಾನು ಸೂಚಿಸಿದ ಹೆಸರನ್ನು ಅತ್ಯಂತ ಹರ್ಷದಿಂದ ಕೂಡಲೇ ಒಪ್ಪಿಕೊಂಡುಬಿಟ್ಟರು. ನಾನು ಸೂಚಿಸಿದ ಹೆಸರು 'ಆಕಾಶವಾಣಿ' ಎಂದು. ಹಾಗೆ ಮಾಡಿದ ನಾಮಕರಣವೇ ಶಾಶ್ವತವಾಗಿ ನೆಲೆನಿಂತಿತು. ಈಗ ಭಾರತದ 'ಆಲ್ ಇಂಡಿಯ ರೇಡಿಯೋ'ದ ಎಲ್ಲಾ ಕೇಂದ್ರಗಳಿಗೂ 'ಆಕಾಶವಾಣಿ' ಎಂಬ ಹೆಸರೇ ಸ್ಥಿರವಾಗಿದೆ.

೧೯೪೬ರಲ್ಲಿ ನನ್ನನ್ನು ಬೆಂಗಳೂರಿನ ಇಂಟರ್‌ಮಿಡಿಯೆಟ್ ಕಾಲೇಜಿಗೆ ವರ್ಗ ಮಾಡಿದರು. ನನ್ನ ಹಿರಿಯ ಪುತ್ರ ಸೈನ್ಸ್‌ನಲ್ಲಿ ಸಂಶೋಧನ ವಿದ್ಯಾರ್ಥಿಯಾಗಿ ತನ್ನ ವ್ಯಾಸಂಗವನ್ನು ಮುಗಿಸಿದ್ದ. ಕಿರಿಯ ಪುತ್ರ ವೆಂಕಟಾದ್ರಿ ಬೆಂಗಳೂರು ಇಂಜಿನಿಯರಿಂಗ್ ಕಾಲೇಜನ್ನು ಸೇರಿದ. ಮೈಸೂರಿನ ನನ್ನ ಮನೆ ಮಾರಿದೆ. 'ಕೊರವಂಜಿ', 'ಶಂಕರ್ಸ್ ವೀಕ್ಲಿ'ಗಳ ನನ್ನ ಕೆಲಸ ಕಾರ್ಯಗಳಿಗೆ ಅನುಕೂಲವಾಗುವಂತೆ ಸದ್ದುಗದ್ದಲಗಳಿಲ್ಲದ ಒಂದು ಮನೆಯನ್ನು ಬೆಂಗಳೂರಿನಲ್ಲಿ ಹುಡುಕತೊಡಗಿದೆ.

ವೃದ್ಧಾಪ್ಯದ ದೆಸೆಯಿಂದ ಒಮ್ಮೆ ಗಾಲಿಕುರ್ಚಿಯಲ್ಲಿ ಕುಳಿತು ಕಸ್ತೂರಿಯವರು ಮಂದಿರದ ಬಳಿ ಬಂದಿದ್ದರು. ಬಾಬಾ ಅವರ ಹತ್ತಿರ ಬಂದು, "ನಿನಗೆಷ್ಟು ಕಾಲುಗಳು?" ಎಂದರು.

ಕಸ್ತೂರಿ: ಐದು ಸ್ವಾಮಿ.

ಬಾಬಾ: ಹೇಗೆ?

ಕಸ್ತೂರಿ: ನನ್ನ ಎರಡು, ಈ ಮೊಮ್ಮಗನ ಎರಡು, ಮತ್ತೆ ಕೈಯಲ್ಲಿರುವ ಈ ವಾಕಿಂಗ್ ಸ್ಟಿಕ್ ಹೀಗೆ ಒಟ್ಟು ಐದು.

"ಐದು ಸಾಕು, ಆರು ಆಗದಿರಲಿ" (ಚೇಳು!) ಎಂದು ಹೇಳಿ ಬಾಬಾ, ಕಸ್ತೂರಿಯವರನ್ನು ನಗುತ್ತಾ ಆಶೀರ್ವದಿಸಿದರು.

## ಅಧ್ಯಾಯ ೫

## ವಿಪತ್ತು ಮತ್ತು ಪರಿಹಾರ

೧೯೪೭ ಆಗಸ್ಟ್ ೧೫ಕ್ಕೆ ಭಾರತ ಸ್ವತಂತ್ರವಾಯಿತು. ನನ್ನ ಕಿರಿಯ ಮಗ ವೆಂಕಟಾದ್ರಿ ಬಹು ಚುರುಕಾದ ತರುಣ. ಎಲ್ಲರ ಕಣ್ಮಣಿ. ಕಾಯಿಲೆ ಬಿದ್ದ. ನನ್ನ ಪ್ರಿಯ ಮಿತ್ರರೂ 'ಕೊರವಂಜಿ'ಯ ಖ್ಯಾತರೂ ಆದ ಡಾ. ಶಿವರಾಂ ಅವರೇ ಅವನ ಡಾಕ್ಟರ್ ಆಗಿದ್ದರು. ಆದರೇನು? ನರ್ಸಿಂಗ್ ಹೋಮನಲ್ಲಿ ಅವನ ಕುಂದುತ್ತಿದ್ದ ಶಕ್ತಿಯನ್ನು ತಡೆಹಿಡಿಯಲು ಸಾಧ್ಯವಾಗಲಿಲ್ಲ. ಸ್ವತಂತ್ರ ಭಾರತದಲ್ಲಿ ಕೇವಲ ಒಂಬತ್ತು ದಿನ ಉಸಿರಾಡಿ ಅವನು ತೀರಿಕೊಂಡ.

## ಅಧ್ಯಾಯ ೬

## ಸತ್ಯ ಸಾಯಿ ಪ್ರವೇಶ

ಮಗ ತೀರಿದ ಒಂದು ವಾರದ ನಂತರ ಅವನ ಪ್ರಾಣ ಸ್ನೇಹಿತ, ಸಹಪಾಠಿ ಆಗಿದ್ದ 'ಗೋಪಿ' ಎಂಬ ಹುಡುಗ ನನ್ನ ಮನೆಗೆ ಸಂತಾಪ ಸೂಚಿಸುತ್ತಾ ಬಂದ. ಅವನು ಆಗ ಪೂನಾದಲ್ಲಿ ಕಲಿಯುತ್ತಿದ್ದನಂತೆ. ವೆಂಕಟಾದ್ರಿಯ ಸಾವಿನ ಸುದ್ದಿ ತಿಳಿದು ತಕ್ಷಣ ರೈಲಿನಿಂದ ಹೊರಟು ಬರುವಾಗ ದಾರಿಯಲ್ಲಿ ತಾನು ಆರಾಧಿಸುತ್ತಿದ್ದ ಅದ್ಯಾರೋ 'ಸತ್ಯ ಸಾಯಿ ಬಾಬಾ' ಎಂಬುವರನ್ನು ಕಂಡು ನಮಸ್ಕರಿಸಿ ಬರಲು ಧರ್ಮಾವರಂನಲ್ಲಿ ಇಳಿದು ತನ್ನ ಗೆಳೆಯನ ಸಾವಿನ ಸುದ್ದಿಯನ್ನು ಬಾಬಾ ಅವರಲ್ಲಿ ನಿವೇದಿಸಿದನಂತೆ. ಅವರು ದುಃಖದಲ್ಲಿರುವ ತಂದೆ ತಾಯಿಗಳಿಗೆ ಕೊಡು ಎಂದು ಕೆಲವು ವಿಭೂತಿ ಪೊಟ್ಟಣ ಕೊಟ್ಟರಂತೆ. ಇದನ್ನು ಹೇಳುತ್ತಾ ಗೋಪಿ ವಿಭೂತಿ ಪೊಟ್ಟಣಗಳನ್ನು ನನ್ನ ಕೈಲಿಟ್ಟ. ಈ ದುಃಖವನ್ನು ಸಹಿಸುವಷ್ಟು ಧೈರ್ಯ ವಿವೇಕಗಳನ್ನು ಬಾಬಾ ನನಗೆ ಖಂಡಿತ ಅನುಗ್ರಹಿಸುವರೆಂದು ಸಮಾಧಾನ ಹೇಳಿದ.

ಬಾಬಾ ೨೧ ವರ್ಷದ ಯುವಕ. ಅವರ



ಮಾತೃಭಾಷೆ ತೆಲುಗು. ಕನ್ನಡದಲ್ಲೂ ಸರಳವಾಗಿ ಮಾತಾಡಬಲ್ಲರಂತೆ. ಗೋಪಿಯ ಪ್ರಕಾರ, ಅವರು 'ಸಾಕ್ಷತ್ ದೇವರೇ.'

ನಾನು ಕೊಂಚ ಖಾರವಾಗಿಯೇ ಉತ್ತರಿಸಿದೆ. "ನೋಡು ಗೋಪಿ, ನಿನಗೇ ಗೊತ್ತಿರುವಂತೆ ನಮ್ಮ ಪಾಲಿನ ದೇವರು ನಮ್ಮನ್ನು ಕೈಬಿಟ್ಟಿದ್ದಾನೆ. ಇನ್ನು ನಿನ್ನ ದೇವರು ತಾನೇ ಏನು ಮಾಡಿಯಾನು?" ಗೋಪಿ ಕೊಟ್ಟ ವಿಭೂತಿಯನ್ನು ಹಣೆಯ ಮೇಲೆ, ನಾಲಗೆ ಮೇಲೆ ಇರಿಸುವ ಮನಃಸ್ಥಿತಿಯಲ್ಲಿ ನಾನಿರಲಿಲ್ಲ. ವಿಭೂತಿ ಪೊಟ್ಟಣಗಳನ್ನು 'ಶಿರಡಿ ಸಾಯಿ' ಭಕ್ತರೊಬ್ಬರ ಮನೆಗೆ ರವಾನಿಸಿದೆ.

ನನ್ನ ದೀಕ್ಷಾ ಗುರು ಮಹಾಪುರುಷಜಿ ಮಾತ್ರವಲ್ಲ, ವಿವೇಕಾನಂದರು ಸ್ಥಾಪಿಸಿದ ರಾಮಕೃಷ್ಣ ಮಠದ ಪ್ರತಿಯೊಬ್ಬ ಸಾಧುವೂ 'ಪವಾಡ'ಗಳನ್ನು ಮಾಡುವ ವ್ಯಕ್ತಿಗಳ ಬಗ್ಗೆ ಎಚ್ಚರಿಕೆ ಕೊಟ್ಟಿದ್ದರು. ಪವಾಡಗಳನ್ನು ಮಾಡುವುದು ಮಾಡುವವರಿಗೂ ನಂಬುವವರಿಗೂ ಆಧ್ಯಾತ್ಮಿಕ ಹಾನಿಯನ್ನುಂಟು ಮಾಡುತ್ತದೆಯೆಂದು ಅವರ ಅಭಿಪ್ರಾಯ. ಅಷ್ಟೇ ಏಕೆ, ನನ್ನ ಹಾಸ್ಯದ ಅಧಿಕ ಪ್ರಸಂಗದ ಕೊಂಕು ಬುದ್ಧಿಗೆ 'ಸಾಯಿಬಾಬಾ' ಎಂಬ ಹೆಸರೇ ಸರಿಕಾಣಿಸಲಿಲ್ಲ. "ಛೇ, ಎಲ್ಲ ಬಿಟ್ಟು ಈ ಯುವಕ ಬಾಬಾ 'ಸಾಯಿ' ಎಂದು ಹೆಸರಿಟ್ಟುಕೊಳ್ಳುವುದೇ?! ನಾವಾದರೂ 'ಸಾಯಿ' ಎಂದು ಗಟ್ಟಿಯಾಗಿ ಹೇಳಬಹುದೆ? ಕನ್ನಡದಲ್ಲಿ ಎಲ್ಲಾದರೂ ಹಾಳಾಗಿಹೋಗು, ಸಾಯಿ" ಎಂದು ಹೇಳಿದರೆ ಶಪಿಸಿದ ಅರ್ಥ ಬರುತ್ತದೆ. ಹೆಸರೇ ಅಪಶಕುನ ಎಂದೆಲ್ಲ ಯೋಚಿಸಿದೆ.

ಆದರೆ ನನ್ನ ಮಗಳು ಪದ್ಮಾಳ ವಿವಾಹದ ನೆಂಟಸ್ತಿಕೆ ಸಾಯಿಬಾಬಾ ಅವರ ಮೂಲಕ ಕೂಡಿ ಬಂದು, ಯೋಗಾ-ಯೋಗ ಎನ್ನುವಂತೆ, ಬಾಬಾ ಅವರ ಸಮಕ್ಷಮ, ಪುಟ್ಟಪರ್ತಿಯಲ್ಲೇ ಮದುವೆ ನೆರವೇರುವಂತಾಯಿತು. ೧೯೪೪ರಲ್ಲಿ ಮೊತ್ತ ಮೊದಲಬಾರಿ ನಡುಗುತ್ತಲೇ ನಾನು, ನನ್ನ ಹೆಂಡತಿ ಪುಟ್ಟಪರ್ತಿಯಲ್ಲಿ ಕಾಲಿರಿಸಿದೆವು. ಅಂದಿನಿಂದ ನನ್ನ ಜೀವನ 'ಸಾಯಿಮಯ'ವಾಯಿತು.

ಗಡಿಪಾರಾಗಿ ಜೀವಾವಧಿ ಶಿಕ್ಷೆಗೊಳಗಾದ ಖೈದಿಗಳನ್ನು ಬ್ರಿಟಿಷ್ ಕಾಲದಲ್ಲಿ ಅಂಡಮಾನ್ ದ್ವೀಪಕ್ಕೆ ಕಳುಹಿಸುತ್ತಿದ್ದರು. ನನ್ನ ಪಾಲಿಗೆ ಬೆಂಗಳೂರೇ ಅಂತಹ ಅಂಡಮಾನ್ ಆಯಿತು. ಸಾಧ್ಯವಾದಾಗಲೆಲ್ಲ ಅಲ್ಲಿಂದ ತಪ್ಪಿಸಿಕೊಂಡು ಪುಟ್ಟಪರ್ತಿಗೆ ಓಡುತ್ತಿದ್ದೆ. ಹಾಗೊಮ್ಮೆ ಓಡಿ ಹೋದಾಗ ಅಲ್ಲಿ ನಮ್ಮ ಕಾಲೇಜಿನ ಪ್ರಿನ್ಸಿಪಾಲರೂ ಜೀವಶಾಸ್ತ್ರದ ಪ್ರೊಫೆಸರ್‌ರೂ ಆಗಿದ್ದ ಡಾಕ್ಟರ್ ಬಿ. ತಿರುಮಲಾಚಾರ್ ಅವರು ಸಿಕ್ಕು ನನ್ನನ್ನು ಸ್ವಾಗತಿಸಿದರು. ಕಾಲೇಜಿನಲ್ಲಿ ಅವರು ನನ್ನ ಧಣಿ. ಆದರೆ ಸ್ವಭಾವತಃ ಸರಸಿ, ತುಂಬಾ ಸ್ನೇಹಪರರು, ಶ್ರೀರಾಮಕೃಷ್ಣರ ಪರಮ ಭಕ್ತರು. ಸದಾಖುಷಿಯಾಗಿರುವವರು. ಈ ಭಕ್ತರ ತಂಡ ನನ್ನ ಆಗಮನಕ್ಕಾಗಿಯೇ ಕಾದಿದ್ದ ಹಾಗಿತ್ತು.

ಆ ದಿನಗಳಲ್ಲಿ ಬಾಬಾ ಬೆಂಗಳೂರಿನ ಭಕ್ತರ ಮನೆಗಳಿಗೆ ಆಗಾಗ ಬರುತ್ತಿದ್ದರು. ನಾನು ಮತ್ತು

ಹೆಂಡತಿ ಬಾಬಾ ಅವರನ್ನು ಕಂಡು ಆಶೀರ್ವಾದ ಪಡೆಯುವ ಯಾವ ಒಂದು ಅವಕಾಶವನ್ನೂ ಕಳೆದುಕೊಳ್ಳಲಿಲ್ಲ. ನಮ್ಮೊಂದಿಗೆ ನನ್ನ ತಾಯಿ ಕೂಡ ತುಂಬ ಉತ್ಸುಕತೆಯಿಂದ ಬರುತ್ತಿದ್ದರು.

ಬೆಂಗಳೂರು ನಗರದ ಹೊರವಲಯದಲ್ಲಿದ್ದ ಬಡಾವಣೆಯೊಂದರಲ್ಲಿ ಚಿಕ್ಕ ವಾಸದ ಮನೆಯನ್ನು ಕಟ್ಟಿಸಿಕೊಂಡಿದ್ದೆ. ೧೯೬೪ರ ಜುಲೈ ತಿಂಗಳ ಒಂದು ದಿನ ಮಳೆ ಸುರಿಯಿತೋ ಸುರಿಯಿತು. ಮುಗಿಲೇ ಹರಿದು ಬಿದ್ದಂತೆ ಧೋ ಎಂದು ಮುಸಲಧಾರೆಯಾಗಿ ಒಂದೇ ಸಮನೆ ಸುರಿಯಿತು. ಇಂಗ್ಲಿಷ್‌ನಲ್ಲಿ ಭಾರೀ ಮಳೆಗೆ "ಬೆಕ್ಕು-ನಾಯಿಗಳನ್ನೆ ಸುರಿಸಿತು" ಎಂಬ ಮಾತಿದೆ. ಆ ದಿನ ಸುರಿದ ಮಳೆಗೆ ಆ ಮಾತು ಸಾಲದು. "ಚಿರತೆ ತೋಳಗಳನ್ನೇ ಸುರಿಸಿತು" ಎನ್ನಬಹುದು. ಅಂತಹ ಮಳೆಯಲ್ಲಿ ಸಿಕ್ಕಿಕೊಂಡ ನಾನು ಕಾರ್ಪೊರೇಷನ್ ಕಾರ್ಯಾಲಯದ ಹತ್ತಿರ ಬಂದಾಗ ಬರಸಿಡಿಲು ಮೊಳಗಿತು. ನನ್ನ ಕಿವಿಪೊರೆ ಹರಿದೇ ಹೋಯಿತು ಎನ್ನುವ ಹಾಗಾಯಿತು. ಛಾವಣಿಯಡಿಯಲ್ಲಿ ನಿಲ್ಲುವುದಕ್ಕೆ ಹೋದರೆ ಅಲ್ಲಿ ಕತ್ತೆಗಳು, ನಾಯಿಗಳು, ಹಸುಗಳು, ಜನಗಳು, ಭೇದಭಾವವಿಲ್ಲದೆ ನೆನೆದು ನಿಂತಿದ್ದರು. ನಾನೂ ಆ 'ಗಡಣ'ವನ್ನು ಸೇರಿಕೊಂಡೆ. ಆದರೆ ಆ ಕ್ಷಣ ಈ ಊರೂ ಸಾಕು, ಇಷ್ಟು ದೂರ ಇರುವ ಕಾಲೇಜೂ ಸಾಕು ಎಂದೆನಿಸಿಬಿಟ್ಟಿತು. ಮನೆ ಹತ್ತಿರದ ಯಾವುದಾದರೊಂದು ಕಾಲೇಜಿಗೆ ವರ್ಗಾಯಿಸುವಂತೆ ತಕ್ಷಣ ರಿಜಿಸ್ಟ್ರಾರ್‌ರನ್ನು ಪ್ರಾರ್ಥಿಸಿಕೊಳ್ಳಬೇಕೆಂದು ನಿರ್ಧಾರ ಮಾಡಿದೆ. ಕಾಲೇಜಿಗೆ ಹೋಗುತ್ತಲೂ ಪ್ರಿನ್ಸಿಪಾಲ್ ಡಾ. ತಿರುಮಲಾಚಾರ್ಯರು ಬಾಗಿಲಲ್ಲೇ ನಿಂತಿದ್ದರು ನನ್ನನ್ನು ಸ್ವಾಗತಿಸಲು. "ಹಾರ್ದಿಕ ಅಭಿನಂದನೆಗಳು, ಬಾಬಾರ ಕೃಪೆ! ದಾವಣಗೆರೆ ಇಂಟರ್‌ಮಿಡಿಯೆಟ್ ಕಾಲೇಜಿಗೆ ನಿಮ್ಮನ್ನು ಪ್ರಿನ್ಸಿಪಾಲ್ ಮಾಡಿ ಹಾಕಿದ್ದಾರೆ" ಎಂದರು. "ನಾಳೆ ಗುರುವಾರ ಬಾಬಾರಿಗೆ ಪ್ರಿಯವಾದ ದಿನ. ಮೊದಲು ದಾವಣಗೆರೆ ಕಾಲೇಜಿಗೆ ಒಂದು ಟೆಲಿಗ್ರಾಮ್ ಕೊಡಿ, ಬರುತ್ತಿರುವುದಾಗಿ. ರಾತ್ರಿ ೯ಕ್ಕೆ ರೈಲಿದೆ. ಬೆಳಿಗ್ಗೆ ಏಳು ಗಂಟೆಗೆಲ್ಲ ದಾವಣಗೆರೆಯಲ್ಲಿರಬಹುದು." ಎಂಬ ಮಾತು ಸೇರಿಸಿದರು.

ನನಗೆ ಎಲ್ಲವೂ ಅರ್ಥವಾಯಿತು. ಬಾಬಾರನ್ನು ಮನಸ್ಸಿನಲ್ಲಿಯೇ ಸ್ಮರಿಸಿ ವಂದಿಸಿದೆ. ಮೊಟ್ಟ ಮೊದಲು ನನಗೆ ನೀಡಿದ ಇಂಟರ್‌ವ್ಯೂನಲ್ಲೇ ಬಾಬಾ ಅವರು ಯೂನಿವರ್ಸಿಟಿಯಲ್ಲಿ ಬಹುಶೀಘ್ರ, ನನ್ನ ಸ್ಥಾನ, ಮಾನ, ಸಂಬಳ ಹೆಚ್ಚಾಗುವುದೆಂದು ಆಶ್ವಾಸನೆ ನೀಡಿದ್ದರು. ಅವರ ಮಾತು ನಿಜವಾಯಿತು. ತಕ್ಷಣ ತೆರಳಿ ದಾವಣಗೆರೆ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಪ್ರೊ. ಓ.ಕೆ. ನಂಬಿಯಾರ್‌ರ ಮುಂದೆ ಪ್ರತ್ಯಕ್ಷನಾದೆ. ಅವರಾದರೂ ಅದಕ್ಕಾಗಿಯೇ ಕಾಯುತ್ತಿದ್ದರು. ತಮ್ಮ ತಲೆಯ ಮೇಲಿದ್ದ ಮುಳ್ಳಿನ ಕಿರೀಟವನ್ನು ಸಂತೋಷವಾಗಿ ನನ್ನ ತಲೆಯ ಮೇಲಿಟ್ಟರು. ಭಾರವಿಳುಹಿದ ಹರ್ಷದಿಂದ ಇನ್ನು ಬೆಂಗಳೂರಿಗೆ ಪಯಣ ಮಾಡಬಹುದು. ಅಷ್ಟೇ ಹರ್ಷಚಿ

ಭಗವಾನ್ ಸತ್ಯಸಾಯಿಬಾಬಾ ಅವರ ಬಳಿ ಇದ್ದು, ಅವರ ಪರಿಪೂರ್ಣ ಕೃಪೆಗೆ ಪಾತ್ರರಾಗುವುದೆಂದರೆ ಒಂದು ಮಹದ್ಭಾಗ್ಯ. ಸಾಮಾನ್ಯ ಚೇತನಗಳು ಸಾಯಿ ಭಾಸ್ಕರನ ತೇಜಸ್ಸಿಗೆ ಕರಗಿ ನೀರಾಗುತ್ತವೆ. ಇಲ್ಲವೆ ಸಿಡಿದು ದೂರಸರಿಯುತ್ತವೆ. ಆ ತೇಜಸ್ಸನ್ನು ತನ್ನ ವ್ಯಕ್ತಿತ್ವದಲ್ಲಿ ಸೆರೆಹಿಡಿದು, ಅದೇ ಪ್ರತಿಫಲಿಸುವಂತಾಗಬೇಕಾದರೆ ವಜ್ರಸದೃಶವಾದ ಸಂಕಲ್ಪ ಹಾಗೂ ಸಂಪೂರ್ಣ ಶರಣಾಗತಿಯ ಅವಶ್ಯಕತೆ ಇರುತ್ತದೆ. ರಸಋಷಿಯಾದ 'ಕಸ್ತೂರಿ'ಯವರು ಸ್ವಾಮಿಯ ಅವತಾರ ಲೀಲೆಗಳನ್ನು ವರ್ಣಿಸಿ, ಅವರ ದಿವ್ಯ ಉಪದೇಶಾಮೃತವನ್ನು ವಿಶಾಲ ವಿಶ್ವದ ಜನಕೋಟಿಗೆ ಉಣ್ಣಿಸಿ, ಅಧುನಿಕ ವ್ಯಾಸ, ವಾಲ್ಮೀಕಿಯರ ಸಾಲಿಗೆ ಸೇರಿ ಜಗದ್ವಂದ್ಯರಾಗಿದ್ದಾರೆ.

ತ್ತನಾಗಿ ನಾನು ದಾವಣಗೆರೆ ಕಾಲೇಜಿನ ಜವಾಬ್ದಾರಿ ವಹಿಸಿಕೊಂಡೆ.

ಕಳೆದ ಐದು ವರ್ಷಗಳಲ್ಲಿ ಕುಲಪತಿಗಳು ಈ ಕಾಲೇಜನ್ನು ಶಿಸ್ತು, ಶಾಂತಿಗಳ ಹಾದಿಗೆ ತರಲು ಒಬ್ಬರಾದ ಮೇಲೊಬ್ಬರಂತೆ ನಾಲ್ಕು ಜನ ಪ್ರಿನ್ಸಿಪಾಲರನ್ನು ಕಳುಹಿಸಿದರಂತೆ. ನಾನೀಗ ಐದನೇಯವನು. ನನ್ನಿಂದಲೂ ಸುಧಾರಿಸದಿದ್ದರೆ ಕುಲಪತಿಗಳು ಕಾಲೇಜನ್ನೇ ಕಾಯಮ್ಮಾಗಿ ಮುಚ್ಚಲು ಹಿಂಜರಿಯುವುದಿಲ್ಲವೆಂದೂ ತಿಳಿಯಿತು. ಅಂತೂ ನನಗೆ ತಿಳಿಯದಂತೆಯೇ ನನ್ನೊಡನೆ 'ಡಿಮೊಕ್ಲಿಸ್‌ನ ಖಡ್ಗ'ವನ್ನು ತಂದಿದ್ದೇನೆ. ಈ ಸರಸ್ವತಿ ಮಂದಿರದ ಮೇಲೆ ಅದು ತೂಗುತ್ತಿದೆ.

ಪಾಠ, ಪ್ರವಚನ, ಅಧ್ಯಯನ ಎಂದರೆ ಅಲರ್ಜಿ ಎಂಬ ಬೇರುಬಿಟ್ಟ ರೋಗದಿಂದ ನರಳುತ್ತಿದ್ದ ಕೆಲವು ವಿದ್ಯಾರ್ಥಿಗಳ ಈ ಭೀಕರ ಖಾಯಿಲೆಯನ್ನು 'ಪ್ರೇಮ ಎಂಬ ಸಾಯಿ ಮಂತ್ರ' ಶೀಘ್ರ ಗುಣ ಪಡಿಸಿತು. ಅದೇ ಮಂತ್ರ ಬಲದಿಂದ ದಾವಣಗೆರೆಯ ಹರಿಜನರ ಹಟ್ಟಿಯಲ್ಲಿ ಸೇವಾಸಸಿಯನ್ನು ನೆಟ್ಟೆ. ಹರಿಜನರ ಕೇರಿಯಲ್ಲೊಂದು ರಾಮ ಮಂದಿರ. ಅದನ್ನೇ ನಮ್ಮ ಕಾಲೇಜು ಸೇವಾಕೇಂದ್ರದ ಕಾರ್ಯಕ್ರಮಗಳಿಗೆ ಆರಿಸಿಕೊಂಡೆ. ಮಂದಿರದ ಪಕ್ಕದ ಖಾಲಿ ಜಾಗವನ್ನು ಸಮತಟ್ಟು, ಸ್ವಚ್ಛ ಮಾಡಿಸಿ ಪೋಲ್ಸ್ ಕಟ್ಟಿ, ನೆಟ್ ಕಟ್ಟಿ ವಾಲಿಬಾಲ್ ಕೋರ್ಟ್ ಮಾಡಿದೆವು. ಕಾಲೇಜು ಯುವಕರು ಹರಿಜನ ಯುವಕರೊಂದಿಗೆ ಸೇರಿ ಉತ್ಸಾಹದಿಂದ ಆಡುತ್ತಿದ್ದರು. ರಾಮಮಂದಿರದಲ್ಲಿ ನಿತ್ಯ ಭಜನೆ ಹಾಡತೊಡಗಿದೆವು. ಭಜನೆ ಹೇಳಿಕೊಡುತ್ತಿದ್ದೆವು. ಚಿಕ್ಕಪುಟ್ಟ ಉಪನ್ಯಾಸ, ಹರಿಕಥೆ, ಏರ್ಪಡಿಸುತ್ತಿದ್ದೆವು. ಗ್ರಾಮಾಂತರ ಪ್ರದೇಶದ ಯುವಕರಿಗೆ, ವಯಸ್ಕರಿಗೆ ಕುತೂಹಲ ಕೆರಳಿಸುವಂತಹ ವಿಜ್ಞಾನದ ವಿಸ್ಮಯಕರ ಸಂಗತಿಗಳನ್ನು ಕೆಲವೊಂದು ಪ್ರಯೋಗಗಳ ಮೂಲಕ ತಿಳಿಸುತ್ತಿದ್ದೆವು. ೧೯೫೪ರ ಏಪ್ರಿಲ್ ಒಂದರಿಂದ ವಿಶ್ವವಿದ್ಯಾಲಯದ ಸೇವೆಯಿಂದ ನಿವೃತ್ತನಾದೆ. ದಾವಣಗೆರೆಯನ್ನು ಬಿಟ್ಟ ಮೇಲೆ ಬಾಬಾರ ಬಳಿಗೆ ಹೋಗಿ, "ಸ್ವಾಮಿ ನಿಮ್ಮ ಅನುಗ್ರಹದಿಂದ 'ಬಹುತೊಂದರೆಗಳ ತಾಣ' ಎಂದು ಕುಖ್ಯಾತವಾಗಿದ್ದ ಕಾಲೇಜಿನಲ್ಲಿಯೂ ಐದು ವರ್ಷಗಳ ಕಾಲ ಸಂತೋಷವಾಗಿದ್ದು ಪ್ರಿನ್ಸಿಪಾಲರ ಹೊಣೆಗಾರಿಕೆಯನ್ನು ಸುಖವಾಗಿ ನಿರ್ವಹಿಸಿದೆ. ಆ ಊರನ್ನು ಬಿಡುವಾಗ ನನ್ನನ್ನು ಬೀಳ್ಕೊಳ್ಳಲು ರೈಲು ನಿಲ್ದಾಣದಲ್ಲಿ ವಿದ್ಯಾರ್ಥಿಗಳ ಮತ್ತು ಹರಿಜನಕೇರಿಯ ಸೋದರರ ದೊಡ್ಡ ಸಮೂಹವೇ ನೆರೆದಿತ್ತು. ಅವರು ತೋರಿದ ಪ್ರೀತಿ, ಹಾಕಿದ ಹಾರಗಳಲ್ಲಿ ಉಸಿರು ಕಟ್ಟಿದಂತಾಯ್ತು" ಎಂದು ವರದಿ ಮಾಡಿದುದರಲ್ಲಿ ಉತ್ಪ್ರೇಕ್ಷೆ ಏನೂ ಇರಲಿಲ್ಲ. ಸ್ವಾಮಿ "ಸಂತೋಷ" ಎಂದವರೆ ಹಸ್ತ ಚಾಲನೆ ಮಾಡಿ 'ತುಳಸೀ ಜಪಮಾಲೆ'ಯನ್ನು ಸೃಷ್ಟಿಸಿ ನೀಡಿದರು.

ಒಮ್ಮೆ ಬಾಬಾರಿಂದ ನನಗೊಂದು ಕಾಗದ ಬಂದಿತು. ಇಂಗ್ಲಿಷ್ ಲಿಪಿಯಲ್ಲಿ ಬರೆದ ಕನ್ನಡ ಕಾಗದ. ನನಗೆ ತೆಲುಗು ಓದಲು ಬಾರದು, ಬರೆಯಲು ಬಾರದು, ಮಾತಾಡಿದ್ದನ್ನು ಕೇಳಿದರೂ ಸರಿಯಾಗಿ ಅರ್ಥವಾಗದು. ಆದ್ದರಿಂದಲೇ ಬಾಬಾ ಈ ಉಪಾಯ ಮಾಡಿದ್ದರು. ನನಗೆ ಕನ್ನಡ ಚೆನ್ನಾಗಿ ತಿಳಿಯುತ್ತೆ. ಸರಿ ಇಂಗ್ಲಿಷ್ ಲಿಪಿ ಬಳಸಿ ತನ್ನ ಆದೇಶವನ್ನು ನನಗೆ ಅರ್ಥವಾಗುವಂತೆ ಈ ತಂತ್ರ ಹೂಡಿದ್ದರು. ಕಾಗದ ನನಗೆ ತುಂಬಾ ಸಂತೋಷವನ್ನುಂಟು ಮಾಡಿತು. ಆದರೆ ಅವರು ತೋರಿಸುವಷ್ಟು ಪ್ರೀತಿಗೆ ಸಮನಾದ ಭಕ್ತಿ ನನ್ನಲ್ಲಿಲ್ಲವಲ್ಲ ಎಂದು ಅರಿವಾಗಿ ಮನಸ್ಸಿಗೆ ಖೇದವಾಯಿತು.

## ಅಧ್ಯಾಯ ೭

## ಇನ್ನೂ ಬೇಕೆನಿಸುವ ಸಾಮೀಪ್ಯ

ಈ ವೇಳೆಗೆ ಪುಟ್ಟಪರ್ತಿಯಲ್ಲಿ ನಮ್ಮ ತಲೆ ಮೇಲೊಂದು ಹೆಂಚಿನ ಸೂರು ದೊರಕಿತ್ತು.

ಪ್ರಾರ್ಥನಾಮಂದಿರ-ಬಾಬಾರ ನಿವಾಸ-ಪ್ರಶಾಂತಿ ನಿಲಯಮ್‌ನ ಮುಂದುಗಡೆ ಬಲಕ್ಕೆ ಕೇವಲ ೨೦ ಗಜ ದೂರದಲ್ಲಿತ್ತು ಆ ಮನೆ.

ಒಂದು ವರ್ಷದ ಪೂರ್ತಿ ಪೆನ್ಷನ್ ಹಣ (೧೨x೧೮೦ ರೂಪಾಯಿ ೧೪ ಆಣೆ) ಒಂದು ಇಡಿಗಂಟಾಗಿ ಬಂದಿದೆಯೆಂದು ಬಾಬಾರಿಗೆ ತಿಳಿಸಲು ಅವರ ಬಳಿ ತೆರಳಿದೆ. ಅವರು ಕೇಳಿ ಸಂತೋಷಪಟ್ಟು, ಒಂದು ಸಲಹೆ ನೀಡಿದರು. "ನೋಡು, ಮೀನ-ಮೇಷ ಅಂತ ಎಣಿಸಬೇಡ. ನಿನ್ನ ತಾಯಿಯನ್ನು ಕಾಶಿ, ತ್ರಿವೇಣಿ ಸಂಗಮ, ಗಯಾ ಕ್ಷೇತ್ರಗಳಿಗೆ ಕರೆದುಕೊಂಡು ಹೋಗಿ, ತಾಯಿಯ ಆಶೆಯನ್ನು ಪೂರ್ತಿಗೊಳಿಸು," ಎಂದರು. ನನಗೆ ಸಲಹೆ ಹಿಡಿಸಿತು. ಪ್ರೋಗ್ರಾಮ್ ನಿರ್ಧರಿಸಿದೆ. ಮದ್ರಾಸ್ ಮೂಲಕ ದಿಲ್ಲಿಗೆ ಹೊರಟೆವು.

ದೆಹಲಿಯಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಭಕ್ತ ಪರಿವಾರದೊಂದಿಗೆ ವಾಸಿಸುವ ಭಾಗ್ಯ ಲಭಿಸಿತು.

ನನ್ನ ತಾಯಿ ಮತ್ತು ಹೆಂಡತಿಗೆ ನವದೆಹಲಿ 'ಅದ್ಭುತ ಲೋಕ'ದಂತೆ ಕಾಣಿಸಿತು. ಲೋಕಸಭೆ, ರಾಜ್ಯಸಭೆಗಳ ಕಾರ್ಯಕಲಾಪಗಳನ್ನು ಹತ್ತಿರದಿಂದ ಅವಲೋಕಿಸುವ ಅವಕಾಶ ನಮಗೆ ಲಭ್ಯವಾಯಿತು. ಲೋಕಸಭಾ ಸದಸ್ಯರೂ ರಾಜ್ಯಸಭೆಯ ಉಪಾಧ್ಯಕ್ಷರೂ ಆಗಿದ್ದ ಎಸ್. ವಿ. ಕೃಷ್ಣಮೂರ್ತಿಯವರು ಶಿವಮೊಗ್ಗದ ಒಬ್ಬ ವಕೀಲರು. ನನ್ನ ಅನೇಕ ಆಶುನಾಟಕಗಳಲ್ಲೂ ನಾನು ಏರ್ಪಡಿಸುತ್ತಿದ್ದ 'ಹಾಸ್ಯ ಚಟಾಕಿ' ಕಾರ್ಯಕ್ರಮಗಳಲ್ಲೂ ಪಾತ್ರವಹಿಸುತ್ತಿದ್ದವರು. ಅಂಥವರು ಅಧ್ಯಕ್ಷತೆ ವಹಿಸಿರುವ ರಾಜ್ಯಸಭೆಯ ಅಧಿವೇಶನವನ್ನು ವೀಕ್ಷಿಸಲು ಅಪೇಕ್ಷಿಸಿದೆವು. ಲೋಕಸಭಾ ಕಾರ್ಯಕಲಾಪಗಳನ್ನು ನೋಡುತ್ತಾ ಕುಳಿತಿದ್ದೆವು. ಭಾರೀ ಕರಡು ಶಾಸನದ ಬಿಸಿ-ಬಿಸಿ ಚರ್ಚೆಯಲ್ಲೂ ಅವರು ತಣ್ಣಗೆ ತೂಕಡಿಕೆಗಳಲ್ಲಿ ಕುಳಿತಿದ್ದರು. ಅಷ್ಟರಲ್ಲಿ ಭರ್ಜರಿ ವರ್ಣರಂಜಿತ ಪೋಷಾಕು, ಮಿರಮಿರ ಮಿರುಗುವ ಬಿಲ್ಲೆಯ 'ಡವಾಲಿದೂತ'ನೊಬ್ಬ ರಾಜ್ಯಸಭಾಧ್ಯಕ್ಷರ ಖಾಸಾ ಆಹ್ವಾನದ ಚೀಟಿಯನ್ನು ತಂದುಕೊಟ್ಟು, ಗತ್ತಿನಲ್ಲಿ ಸಲಾಮು ಮಾಡಿ ನಿಂತ. ಓದಿದ ಕೂಡಲೆ ಅವನನ್ನು ಹಿಂಬಾಲಿಸಿ, ರಾಜ್ಯಸಭಾಧಿವೇಶನ ನಡೆಯುತ್ತಿದ್ದ ಸಭಾಭವನದ ಪ್ರೇಕ್ಷಕರ ಗ್ಯಾಲರಿಗೆ ಹೋದೆವು. ಡಾ. ಎಸ್.ರಾಧಾಕೃಷ್ಣನ್‌ರ ಗೈರು ಹಾಜರಿಯಲ್ಲಿ ಎಸ್.ವಿ.ಕೃಷ್ಣಮೂರ್ತಿಯವರೇ ಅಧ್ಯಕ್ಷಸ್ಥಾನ ವಹಿಸಿ ಕಾರ್ಯಕಲಾಪಗಳನ್ನು ನಡೆಸುತ್ತಿದ್ದರು. ನಾವು ಹೋದವರೆ ವಿ.ಐ.ಪಿ. ಗ್ಯಾಲರಿಯ ಮುಂದಿನ ಸಾಲಿನ ಸೊಗಸಾದ ಮಖಮಲ್ ಮೆತ್ತೆಯ ಕುರ್ಚಿಗಳ ಮೇಲೆ ಕುಳಿತೆವು. ಸಭಾಭವನದ ನೋಟ ನಮಗೂ, ನಮ್ಮ ದರ್ಶನ ವೇದಿಕೆಯ ಮೇಲಿರುವವರಿಗೂ ಬಹು ಚೆನ್ನಾಗಿ ಕಾಣುವಂತಹ ಆಯಕಟ್ಟಿನ ಜಾಗ ಅದು. ನಾವು ನಡೆದು ಹೋಗಿ ಅಲ್ಲಿ ಆಸೀನರಾಗುತ್ತಿದ್ದುದನ್ನು ನೋಡಿದ ಸಭಾಪತಿ ಕೃಷ್ಣಮೂರ್ತಿಯವರು ಎದ್ದು ನಿಂತು ಎರಡೂ ಕೈ ಜೋಡಿಸಿ ನನ್ನ ತಾಯಿಯವರಿಗೆ ವಂದಿಸಿದರು. ಅದು ಭಾರತಮಾತೆಯ ಮುಗ್ಧ ಸರಳ ಹಾಗೂ ನಿರ್ಮಲ ಹೃದಯದ ಮಗು ಸನಾತನ 'ಮಾತಾಮಹಿಗೆ' ಗೌರವಾರ್ಪಣೆ ಮಾಡಿದ ಹಾಗಿತ್ತು. ಭವ್ಯವಾದ ಪ್ರಾಚೀನ ಸಾಂಸ್ಕೃತಿಕ ಪರಂಪರೆಗೆ ಮನ್ನಣೆ ತೋರಿದಂತಿತ್ತು. ತಮ್ಮ ಗೌರವಾನ್ವಿತ ಸಭಾಧ್ಯಕ್ಷರು, ಅದಾರಿಗೆ ಇಷ್ಟು ಗೌರವದಿಂದ ನಮಸ್ಕಾರ ಸಲ್ಲಿಸುತ್ತಿದ್ದಾರೆಂದು ಕುತೂಹಲದಿಂದ ತಿಳಿಯಲು ಹಲವಾರು ಸಭಾಸದರ ತಲೆಗಳು ಏಕಕಾಲದಲ್ಲಿ ನಾವು ಕುಳಿತಿದ್ದ 'ವಿ.ಐ.ಪಿ. ಗ್ಯಾಲರಿ'ಯ ಕಡೆಗೆ ತಿರುಗಿ, ಎದ್ದು ನಿಂತು ನಮಸ್ಕರಿಸಿದ ಕೃಷ್ಣಮೂರ್ತಿ ಅವರಿಗೆ 'ಅಮ್ಮ' ತನ್ನ ಎರಡೂ ಹಸ್ತಗಳನ್ನೆತ್ತಿ ಆಶೀರ್ವಾದ ಮಾಡಿದುದನ್ನು ನೋಡಿದೆವು.



ನಾವು ದೆಹಲಿಯಲ್ಲಿ ನೋಡಬೇಕಾದ ಸ್ಥಳಗಳನ್ನು ಸುತ್ತು ಹಾಕುತ್ತಿದ್ದಾಗ 'ನನ್ನ ಅಮ್ಮ' ಮತ್ತೆ ಮತ್ತೆ ಒಂದು ಪ್ರಶ್ನೆ ಕೇಳುತ್ತಿದ್ದಳು. "ಇಂತಹ ಸಂಪದ್ಯುಕ್ತ ದೇಶವನ್ನೆಲ್ಲ ಬಿಟ್ಟುಕೊಟ್ಟು ಆ ಬಿಳಿಯ ಜನ ತಮ್ಮ ದೇಶಕ್ಕೆ ಹೇಗೆ ತಾನೆ ಹೋಗಿದ್ದಾರು?" "ಹೊರೆ ತೀರ ಭಾರವಾಗುತ್ತಿದೆ ಎಂದೆನಿಸಿ ಹೊರಟು ಹೋದರು," ಎಂದು ನಾನು ಉತ್ತರಿಸಿದಾಗ, ಬ್ರಿಟಿಷರ ವಿವೇಕಕ್ಕೆ ಅಮ್ಮ ತಲೆದೂಗಿದಳು. "ನೋಡಿದೆಯಾ ಅದೀಗ ಜಾಣತನ. ಬೇರೆ ಯಾರಾದರೂ ಆಗಿದ್ದರೆ, ಅಷ್ಟು ಸುಲಭ ಪಟ್ಟಿಗೆ ಬಿಟ್ಟು ಹೋಗುತ್ತಿದ್ದರಾ? ಒಂದೊಂದಂಗುಲ ನೆಲ ಉಳಿಸಿಕೊಳ್ಳುವುದಕ್ಕೂ ಭಾರೀ ಯುದ್ಧ ಮಾಡುತ್ತಿದ್ದರು. ಇದೇ ಊರು ಹಿಂದೆ ಮಹಾಭಾರತದ ಕಾಲದಲ್ಲಿ ಹಸ್ತಿನಾಪುರವೋ ಇಂದ್ರಪ್ರಸ್ಥವೋ ಆಗಿತ್ತು ಎಂದೆಯಲ್ಲ, ಆಗ ನಡೆದದ್ದನ್ನೇ ತೆಗೆದುಕೋ. ನಮ್ಮವನೇ ಆದ ದುರ್ಯೋಧನ ಈ ನೆಲದ ಒಂದು ಚೂರು ಭಾಗವನ್ನು ಬಿಟ್ಟು ಕೊಡಲು ಶಾಂತನಾಗಿ ಒಪ್ಪಿದನಾ? ಅದೂ ತನ್ನ ಚಿಕ್ಕಪ್ಪನ ಮಕ್ಕಳಾದ ಪಾಂಡವರಿಗೇನೇ, ಸಲ್ಲಬೇಕಾಗಿದ್ದ ನ್ಯಾಯವಾದ ಪಾಲನ್ನೂ ಕೊಡದೆ ಛಲಸಾಧಿಸಿದನಲ್ಲ. ತನ್ನ ಅಣ್ಣ-ತಮ್ಮಂದಿರೇ ಅವರು ಎಂಬ ಪ್ರೀತಿ ಸಹ ಹುಟ್ಟಲಿಲ್ಲವಲ್ಲ ಅವನಿಗೆ. ೧೮ ದಿನಗಳ ಘೋರ ಯುದ್ಧ ಮಾಡಿ ಸರ್ವನಾಶವಾದರೂ ಪಾಂಡು ಪುತ್ರರಿಗೆ ಕೊಡಬೇಕಾದ ಒಂದು ಭಾಗ ರಾಜ್ಯವನ್ನು ಮಾತ್ರ ತಾನಾಗಿ ಕೊಡಲಿಲ್ಲ! ಈ ಬಿಳಿಯರು ಗೋಧಿ ಬಣ್ಣದ ನಮ್ಮವರಿಗಿಂತ ಸಾವಿರ ಪಾಲು ಉತ್ತಮರಲ್ಲವೆ?" ಎಂದು ಅಮ್ಮ ದೆಹಲಿ ಬಿಟ್ಟು ಹರಿದ್ವಾರಕ್ಕೆ ಹೊರಟಾಗ ತನ್ನ ತೀರ್ಪು ಕೊಟ್ಟಳು.

ನಾವು ಯಾತ್ರೆ ಮುಗಿಸಿ ಬೆಂಗಳೂರಿಗೆ ವಾಪಸು ಬರುವಾಗ ಬಾಬಾ 'ಕೊಡೈಕೆನಾಲ್' ಗಿರಿಧಾಮದಲ್ಲಿದ್ದರು. ನಮ್ಮ ಯಾತ್ರೆಯ ಅನುಭವಗಳನ್ನೆಲ್ಲ ಅವರಿಗೆ ಪತ್ರ ಮೂಲಕ ಬರೆದು ವಿವರಿಸಿದೆ.

ಮುಂದೆ ಸಾಯಿಸಾನ್ನಿಧ್ಯ ತಪ್ಪದಂತೆ ನಿರಂತರ ಎಚ್ಚರಿಕೆಯಿಂದ ಶ್ರಮಿಸಿದೆ. ಸ್ವಾಮಿ ತೋರಿದ ದಾರಿಯೇ ನನಗೆ 'ಧರ್ಮ ಪಥ'ವಾಯಿತು. ಅವರ ದಿವ್ಯೋಪನ್ಯಾಸದ ದುಭಾಷಿಯಾಗಿ ದೇಶದ ಉದ್ದಗಲಕ್ಕೆ ಸಂಚರಿಸಿದೆ. ಅವರೊಂದಿಗೆ ಆಫ್ರಿಕ ಯಾತ್ರೆಯೂ ನಡೆಯಿತು. ಋಷಿಸದೃಶ ಜೀವನ ನಡೆಸಿದರೂ ಕೆಲವೊಮ್ಮೆ ಮನಸ್ಸು 'ಮರ್ಕಟನಂತೆ' ವರ್ತಿಸತೊಡಗಿದಾಗ ಖೇದವಾಗುತ್ತದೆ. ಅದಕ್ಕೆ ಒಂದು ಉದಾಹರಣೆ ಕೊಡುತ್ತೇನೆ. ಮೊದಲು ಮೊದಲು ಬಾಬಾರ ಹುಟ್ಟು ಹಬ್ಬದ ದಿನ (ನವೆಂಬರ್ ೨೩) ಅವರ ಅಭ್ಯಂಜನ ಸ್ನಾನ ನಡೆಯುತ್ತಿತ್ತು. ಭಕ್ತರ ಪ್ರಾರ್ಥನೆ ಮನ್ನಿಸಿ ಅದಕ್ಕೆ ಒಪ್ಪಿದ್ದರು. ಅದೊಂದು ತುಂಬಾ ಸಡಗರದ ಸಮಾರಂಭವಾಗಿತ್ತು. ಬಾಬಾರ ಮೈತುಂಬ ಸುಗಂಧ ಪೂಸಿ, ಎಣ್ಣೆ ತಿಕ್ಕಿ ಸ್ನಾನ ಮಾಡಿಸುವ ಭಾಗ್ಯ ಕೇವಲ ೪-೫ ಜನರಿಗೆ ಲಭ್ಯವಾಗಿತ್ತು. ಅದರಲ್ಲಿ ನಾನೊಬ್ಬ. ಹೆಂಗಸರ ಪೈಕೀ ನನ್ನ ಹೆಂಡತಿಯೂ ಭಾಗವಹಿಸುತ್ತಿದ್ದಳು. ಈ ಅಭ್ಯಂ

ಜನದ ಸ್ನಾನದ ಮೊಟ್ಟ ಮೊದಲ ಎಣ್ಣೆಯೊತ್ತುವ ಸೌಭಾಗ್ಯ ಎಂದೂ ಮರೆಯಲಾಗದ ಅನುಭವ.

ನಮ್ಮ ಸರದಿ ಬಂದ ಸೂಚನೆ ದೊರೆತ ಕೂಡಲೇ, ಎದ್ದು ವೇದಿಕೆಯ ಕಡೆ ನಡೆದೆವು. ನಾನು ಕುಳಿತಲ್ಲಿಂದ ಏಳುತ್ತಿದ್ದಂತೆ ನನ್ನ ಕಿವಿಯಲ್ಲಿ 'ವಿಷವನ್ನೂದಿದಂತೆ ಸೈತಾನ್' ಪಿಸುಗುಟ್ಟಿದ, "ಈ ಛಾನ್ಸ್ ಕಳಕೊಳ್ಳಬೇಡ. ಪರೀಕ್ಷಿಸಿ ನೋಡಿಯೇ ಬಿಡು, ಅವರ ವಿಶಿಷ್ಟವಾದ 'ಕೇಶರಾಶಿ' ಅಸಲಿಯೊ ನಕಲಿಯೋ ಎಂಬುದನ್ನು. ಅದು ನೈಜವಾಗಿ ಬೆಳೆದ ಕೂದಲಲ್ಲ, 'ಸ್ಪೆಷಲ್ಲಾಗಿ' ತಯಾರಿಸಿರುವ 'ವಿಗ್' ಆಗಿರಬೇಕು ಎಂದು ಕೆಲವರು ಆಡಿಕೋತಾರಲ್ಲ. ಈಗ ಅದನ್ನು ಚೆನ್ನಾಗಿ ಪರೀಕ್ಷಿಸಿ ನೋಡಿಯೇ ಬಿಡು."

ಅವಾಕ್ಕಾಗಿ, ಯಾರಿದು ಇಂತಹ ಸೂಚನೆ ಈ ಸಮಯದಲ್ಲಿ ಕೊಡುತ್ತಿರುವುದು? ಅಂತ ಆ ಕಡೆ ಈ ಕಡೆ ತಿರುಗಿ ನೋಡಿದೆ. ಪಿಸುಗುಟ್ಟಿದ್ದು ನಿಜ. ಆದರೆ ಸರ್ಪವೇಷಿ ಸೈತಾನನಲ್ಲ. ಮನುಷ್ಯ ರೂಪದಲ್ಲಿ ಪಕ್ಕದಲ್ಲೇ ಕುಳಿತಿದ್ದ ಪರಿಚಿತ ಮನುಷ್ಯ. ಬೆಂಗಳೂರಿನಲ್ಲಿ ನನ್ನ ನಾಲ್ಕು ಕಾಸು ಇಟ್ಟಿದ್ದ ಬ್ಯಾಂಕಿನ ಮ್ಯಾನೇಜರ್.

ನನ್ನ ಯೌವನ ಕಾಲದಲ್ಲಿ ನಾಟಕಗಳ ಗೀಳಿನಿಂದ ನೂರಾರು ಗ್ರೀನ್ ರೂಮುಗಳಲ್ಲಿ ಓಡಾಡಿದ್ದೆ. ನಾನಾತರದ ವಿಗ್, ಟೋಫನ್‌ಗಳನ್ನು ಹಾಕಿ, ಕಳಚಿ ಪಳಗಿದ ವ್ಯಕ್ತಿ ನಾನು. ಸ್ವತಃ ನಾನೇ ಅಂಥವುಗಳನ್ನು ಧರಿಸಿ ಶೂರ್ಪನಖಿ, ಬ್ರೂಟಸ್, ಔರಂಗಜೇಬು, ವಿದ್ಯಾರಣ್ಯ ಕಡೆಗೆ 'ಬ್ರಹ್ಮ' ಸಹ ಆಗಿ ರಂಗದ ಮೇಲೆ ಕುಣಿದಾಡಿದವ. ಆದ್ದರಿಂದ 'ವಿಗ್' ಎಂಬುದನ್ನು ಸುಲಭವಾಗಿ ಪತ್ತೆಮಾಡಲಾರೆನೆ? ಕಿವಿಯಲ್ಲಿ ಪಿಸುಗುಟ್ಟಿದ ಸೂಚನೆಯೇ ಗೆದ್ದಿತು. 'ವಿಗ್' ಹೌದೇ ಅಲ್ಲವೆ? ಎಂಬುದನ್ನು ಬಲವಾಗಿ ಎಳೆದು ನೋಡೇ ಬಿಡೋಣ ಎಂದಿತು ಮರ್ಕಟ ಮನಸ್ಸು!

ಗುಲಾಬಿಯನ್ನು ಎಣ್ಣೆ ಬಟ್ಟಲಲ್ಲಿ ಅದ್ದಿದೆವು. ನಂತರ ನನ್ನ ಪತ್ನಿ ಬಟ್ಟಲನ್ನೆತ್ತಿಕೊಂಡು ಬಾಬಾರ ನೆತ್ತಿಗೆ ಎಣ್ಣೆಯನ್ನು ಹಾಕುತ್ತಿದ್ದಂತೆ ತಲೆ ಕೂದಲನ್ನೊತ್ತಿ ಎಡದಿಂದ ಬಲಕ್ಕೆ ಕೂದಲನ್ನು ಸರಿಸುವಂತೆ ನಟಿಸಿ ಬಲವಾಗಿ ಉಜ್ಜುವ ಸಾಹಸವನ್ನು ಮಾಡಿದೆ. ಎಣ್ಣೆಯೊತ್ತಲು ಅನುಕೂಲ

೧೮೯೭ರ ಡಿಸೆಂಬರ್ ೨೫ರ ಯೇಸುಕ್ರಿಸ್ತನ ಜನ್ಮದಿನದಂದು ಕೇರಳದಲ್ಲಿ ಜನ್ಮತಾಳಿ, ೧೯೮೭ರ ಶ್ರೀಕೃಷ್ಣ ಜನ್ಮಾಷ್ಟಮಿಯಂದು ಪ್ರಶಾಂತಿ ನಿಲಯದ ಶ್ರೀಸತ್ಯಸಾಯಿ ಸನ್ನಿಧಿಯಲ್ಲಿ ಸ್ವಾಮಿ ಪಾದ ಸೇರುವವರೆಗಿನ ಸುದೀರ್ಘ ಜೀವಿತಾವಧಿಯಲ್ಲಿ ದಿ. 'ನಾ. ಕಸ್ತೂರಿ' ಒಂದು ಅದಮ್ಯ ಚೈತನ್ಯದ ಬುಗ್ಗೆಯಾಗಿ ಬಾಳಿ ಬೆಳಗಿದರು. ಸುಮಾರು ಅರ್ಧ ಶತಮಾನ ಕಾಲ ಸಾಹಿತಿ, ಅಧ್ಯಾಪಕ, ಪ್ರಾಧ್ಯಾಪಕ, ಪ್ರಿನ್ಸಿಪಾಲ್ ಆಗಿ ದುಡಿದು, ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹಾಸ್ಯ ಸಾಹಿತ್ಯ ಮೂಲಕ ತಾನೂ ನಕ್ಕು ಇತರರನ್ನೂ ನಗಿಸಿ, ಕಣ್ಣೀರಕಡಲಿನ ಮೇಲೆ ಹಾಸ್ಯದ ಹರಿಗೋಲಿನಲ್ಲಿ ಕುಳಿತು ಪಯಣಿಸಿ ವೃತ್ತಿಯಿಂದ ನಿವೃತ್ತರಾದ ಮೇಲೆ ಅವರ ಪ್ರವೃತ್ತಿ ಸಂಪೂರ್ಣ ಸಾಯಿಮಯವಾಯಿತು. ಪ್ರಶಾಂತಿನಿಲಯ ಅವರ ಕರ್ಮಭೂಮಿಯಾಯಿತು. ತನ್ನನ್ನು ತಾನೇ ಬಾಬಾ ಸನ್ನಿಧಿಯಲ್ಲಿ ಸಮರ್ಪಿಸಿಕೊಂಡರು. ಶ್ರೀಸಾಯಿಕೃಷ್ಣನ ಕೈಯ ಕೊಳಲಾದರು. ಆತ ಆ ಕೊಳಲನ್ನು ತನ್ನಿಚ್ಛೆಯಂತೆ ನುಡಿಸಿದ. ಅದರಲ್ಲಿ ವಿಭಿನ್ನ ರಾಗಗಳನ್ನು ಹೊರಹೊಮ್ಮಿಸಿದ. ಆ ರಾಗ-ರಾಗಿಣಿಗಳ ಮಾಧುರ್ಯ ಸಮಗ್ರ ವಿಶ್ವಕ್ಕೆ ಪ್ರಭಾವಬೀರಿತು. ಮಲಯಾಳಂ ಮಾತೃಭಾಷೆಯಾದ ವ್ಯಕ್ತಿಗೆ ಕನ್ನಡ ಕರತಲಾಮಲಕವಾಗಿತ್ತು. ಸುಂದರ ಶೈಲಿ ಅಂಗ್ಲನೆಲ್ಲಿಯಾಗಿತ್ತು. 'ಸತ್ಯಂ, ಶಿವಂ, ಸುಂದರಂ' ಶ್ರೀ ಬಾಬಾ ಅವರ ಜೀವನ ಚರಿತ್ರೆ ಗ್ರಂಥ ಇದಕ್ಕೆ ಸಮುಜ್ವಲ ಸಾಕ್ಷಿಯಾಗಿದೆ. ವಿಶ್ವದ ಹೆಚ್ಚಿನ ಭಾಷೆಗಳಿಗೆಲ್ಲ ಈ ಮಹಾನ್ ಗ್ರಂಥ ಅನುವಾದಗೊಂಡು 'ಕಸ್ತೂರಿ' ವಿಶ್ವವಿಖ್ಯಾತ ವ್ಯಕ್ತಿಯೆನಿಸಿದ್ದಾರೆ.

ವಾಗಲೆಂದು ಬಾಬಾ ತಲೆಯನ್ನು ತಗ್ಗಿಸಿ ಮುಂದಕ್ಕೆ ಬಾಗಿಸಿದ್ದರು. ನಾನು ಅಷ್ಟೊಂದು ಜೋರಾಗಿ ಉಜ್ಜಿದ 'ಅವಿನಯ'ವನ್ನು ಗುರುತಿಸಿದ ಬಾಬಾ ಮೆತ್ತಗೆ ಉಸಿರಿದರು, "ಈ ಕಡೆಗೂ ಒಂದು ಸಲ ಜೋರಾಗಿ- ಎಳೆದು ಪರೀಕ್ಷಿಸಿ ನೋಡು ಪರವಾಗಿಲ್ಲ. ನೈಜವಾಗಿ ಬೆಳೆದದ್ದೇ ಕೃತಕವಾಗಿ ಹಾಕಿರುವುದೇ ಎಂಬ ಸತ್ಯ ನಿನಗೇ ಗೊತ್ತಾಗುತ್ತದೆ!" ನಾನು ಬೆದರಿದೆ. ಬೆದರಿಕೆಯಿಂದ ಸಂಪೂರ್ಣ ನೀರಾದೆ! ಈ ಸಂಶಯದ ಹೊಲಸು ಕೆಸರಿನಲ್ಲಿ ಬಿದ್ದು ಸಿಕ್ಕಿಕೊಂಡುದಕ್ಕಾಗಿ ನನ್ನನ್ನು ನಾನೇ ಚೆನ್ನಾಗಿ ಶಪಿಸಿಕೊಂಡೆ. ನನ್ನ ಈ ರೀತಿಯ ಗೊಂದಲಮಯ ಸ್ಥಿತಿಯನ್ನು ಗಮನಿಸಿದ ನನ್ನ ಪತ್ನಿಗೂ ಆಶ್ಚರ್ಯ! 'ಒಮ್ಮೆಲೇ ಏನಾಯಿತು ಇವರಿಗೆ?' ಎಂದು. ನನ್ನ 'ಜಂಬ'ವೆಲ್ಲ ಒಂದೇ ಕ್ಷಣದಲ್ಲಿ ಉಡುಗಿ, ನಾಚಿಕೆಯಿಂದ ತಲೆ ತಗ್ಗಿಸಿ ದುರ್ಯೋಧನೆ ಮಾಡಿದ ಮಾನುಷ ವೇಷಿ 'ಸರ್ಪ'ದ ಪಕ್ಕದಲ್ಲಿದ್ದ ನನ್ನ ಸ್ಥಳಕ್ಕೆ 'ಜೀವಂತ ಶವ'ದಂತೆ ವಾಪಸು ಬಂದು ಮೌನವಾಗಿ ಕಂಬನಿ ಸುರಿಸಿದೆ!

ಸಂಶಯಪೀಡಿತನಾಗಿ ನಾನು ಮಾಡಿದ ಈ 'ಕಿತಾಪತಿ'ಯ ವಿಚಾರವನ್ನು ಬಾಬಾ ಅನೇಕ ಬಾರಿ ನನ್ನ ಸಮಕ್ಷಮವೇ ಸಾವಿರಾರು ಭಕ್ತರೆದುರು ಹೇಳಿ, 'ಮರುಕದ ನಗೆ'ಯಲೆಗಳನ್ನೆಬ್ಬಿಸುತ್ತಿದ್ದರು. ನನಗಾಗ ನಾಚಿಕೆಯಿಂದ ತಲೆತಗ್ಗಿಸುವಂತಾಗುತ್ತಿತ್ತು.

ಬಾಬಾರ ದಿವ್ಯದರ್ಶನವನ್ನು, ಪವಿತ್ರ ಸನ್ನಿಧಿಯನ್ನು ಬಯಸಿ ದೊಡ್ಡ ದೊಡ್ಡ ಸಂಗೀತ ವಿದ್ವಾಂಸರುಗಳು ಪ್ರಶಾಂತಿ ನಿಲಯಕ್ಕೆ ಆಗಾಗ ಬರುತ್ತಿದ್ದರು. ಸಂಗೀತ ಸೇವೆ ಸಲ್ಲಿಸಲು ಅವರಿಗೂ ಅವಕಾಶ ಸಿಕ್ಕುತ್ತಿತ್ತು. ಅವರಲ್ಲಿ ಬೆಂಗಳೂರಿನ ಸುಪ್ರಸಿದ್ಧ ಗಾಯಕ ಹೊನ್ನಪ್ಪ ಭಾಗವತರ ಪ್ರಸಂಗವೊಂದು ನೆನಪಾಗುತ್ತದೆ. ಭಾಗವತರು ಅಂದು ಭಾವಪರವಶರಾಗಿ ಹಾಡುತ್ತಿದ್ದಾಗ ಸಂತೋಷಭರಿತರಾದ ಬಾಬಾ ತಮ್ಮ ಬೆಳ್ಳಿಯ ಪೀಠದಿಂದಿಳಿದು ಬಂದು ಪಿಟೀಲು, ಮೃದಂಗ, ಘಟಂ, ತಂಬೂರಿಗಳನ್ನು ನಡೆಸುತ್ತಿದ್ದ ಪಕ್ಕವಾದ್ಯದವರ ಪಕ್ಕದಲ್ಲಿ ಕುಳಿತರು! ಕಚೇರಿ ಮುಗಿದ ಮೇಲೆ ಎದ್ದು ಹಸ್ತ ಚಾಲನೆ ಮಾಡಿ ಚಿನ್ನದ ಚೈನನ್ನು ಸೃಷ್ಟಿಸಿ, ತಾವೇ ಕೈಯಾರೆ ಅದನ್ನು ಹೊನ್ನಪ್ಪ ಭಾಗವತರ ಕೊರಳಿಗೆ ಹಾಕಿದರು.

"ಸತ್ಯಂ, ಶಿವಂ, ಸುಂದರಂ" ಪುಸ್ತಕದಲ್ಲೂ ಈ ಪ್ರಸಂಗವನ್ನು ನಾನು ಈಗಾಗಲೇ ಬರೆದಿದ್ದೇನೆ. ಆದರೇನು, ಈ ಸಂದರ್ಭದಲ್ಲಿ ಇನ್ನೂ ಒಂದು ಬಾರಿ ಈ ಸ್ವಾರಸ್ಯದ ಕಥೆಯನ್ನು ಹೇಳಿಬಿಡುತ್ತೇನೆ. ಯಾಕೆಂದರೆ ಭಾಗವತರಿಗೆ ಆಮೇಲೆ ಆದ ಪೇಚಾಟ, ಹತಾಸೆ, ಪುನಃ ದೊರಕಿದ ಅನುಗ್ರಹ ಇವೆಲ್ಲವನ್ನೂ ಕಣ್ಣಾರೆ ಕಂಡು ಅನುತಾಪಪಟ್ಟವನು ನಾನು.

ಬಾಬಾರಿಂದ ಪಾರಿತೋಷಕ ಪಡೆದ ಹೊನ್ನಪ್ಪ ಭಾಗವತರು ತಮ್ಮ ತಂಡದವರೊಂದಿಗೆ ಬೆಂಗಳೂರಿಗೆ ಹಿಂತಿರುಗಿ ಹೊರಟರು. ಕಾರಿನಲ್ಲಿ ಹೋಗುತ್ತ ದಾರಿಯಲ್ಲಿ ಭಾಗವತರೂ ಅವರ ಮಿತ್ರರೂ ಬಾಬಾರು ಕೊಟ್ಟ ಚಿನ್ನದ ಸರವನ್ನು ಕೈಯಲ್ಲಿ ಹಿಡಿದು ತೂಗುತ್ತ "ಎಷ್ಟು ತೂಕ ಇರಬಹುದು? ಬಂಗಾರ ಎಷ್ಟು ಕ್ಯಾರೆಟ್ ಇರಬಹುದು?" ಎಂದು ಮಾತಾಡತೊಡಗಿದರು. ಅದರ ಬೆಲೆ ಎಷ್ಟಾಗಬಹುದು ಎಂದು ಒಬ್ಬೊಬ್ಬರೂ ಒಂದೊಂದು ಅಂದಾಜು ಮಾಡುತ್ತ ಬೆಲೆ ಕಟ್ಟತೊಡಗಿದರು. ಪರಸ್ಪರ ವಾದ, ವಿವಾದ ಮಾಡುತ್ತ "ಅಲ್ಲಯ್ಯಾ, ಸಾಯಿಬಾಬಾ ಇದನ್ನು ಹೇಗೆ ತೆಗೆದರೂ ಅಂತ? ಅದೇನು ಕಣ್ಕಟ್ಟು ಮಾಡಿದರೋ?"

"ಅದೊಂದು ತರಹಾ ಇಂದ್ರಜಾಲ ಕಣೋ."

"ಇಂದ್ರಜಾಲವೂ ಅಲ್ಲ, ಮಂತ್ರತಂತ್ರವೂ ಅಲ್ಲ, ಕೈಚಳಕ ಕಣೋ, ಕೈಚಳಕ."

ಹೀಗೆ ಒಬ್ಬೊಬ್ಬರೂ ಆ ಬಗ್ಗೆ ಹಗುರವಾಗಿ



ಮಾತಾಡುತ್ತ ಪವಾಡ, ಮಹಿಮೆ ಎಂಬ ಮಾತುಗಳನ್ನೇ ಲೇವಡಿ ಮಾಡುತ್ತ ನಗತೊಡಗಿದರು. ಅಷ್ಟರಲ್ಲಿ ಅವರ ಕಾರು ಒಂದು ಹಳ್ಳದ ದಂಡೆಗೆ ಬಂತು. ಹಳ್ಳದಲ್ಲಿ ನೀರು ತುಂಬಿ ಹರಿಯುತ್ತಿತ್ತು. ಪ್ರವಾಹವನ್ನು ದಾಟಲು ಸಾಧ್ಯವಿಲ್ಲ ಎಂದು ದಡದ ಮೇಲೆ ಕಾರನ್ನು ನಿಲ್ಲಿಸಿದರು. ಭೋರ್ಗರೆದು ಹರಿಯುತ್ತಿದ್ದ ಪ್ರವಾಹವನ್ನು ನೋಡುತ್ತ ಕಾರಿನಲ್ಲೇ ಎಲ್ಲರೂ ಹುದುಗಿಕೊಂಡು ರಾತ್ರಿಯೆಲ್ಲ ಕಾಲಕಳೆದರು. ಬೆಳಗಾದಾಗ ನೆರೆ ಇಳಿದಿತ್ತು. ಕಾರನ್ನು ಸ್ಟಾರ್ಟ್ ಮಾಡಿದರು. ಬೆಳಗಿನ ಬೆಳಕಿನಲ್ಲಿ ನೋಡುತ್ತಾರೆ! ಭಾಗವತರ ಕೊರಳಲ್ಲಿದ್ದ ಚಿನ್ನದ ಚೈನೇ ಮಂಗಮಾಯ! ಕಾರನ್ನು ನಿಲ್ಲಿಸಿ, ನಿಲ್ಲಿಸಿ, ಕೆಳಗೇನಾದರೂ ಬಿದ್ದಿರಬಹುದೇ ಎಂದು ಕಾರಿನೊಳಗೆ-ಹೊರಗೆ ಎಲ್ಲ ಕಡೆ ಹುಡುಕಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಜೇಬು, ಚೀಲಗಳಲೆಲ್ಲ ಹುಡುಕಿದರು. ಉಹುಂ. ಅದರ ಪತ್ತೆಯೇ ಇಲ್ಲ. ಕಳೆದು ಹೋಗಲು ಹೇಗೆ ತಾನೆ ಸಾಧ್ಯ? ರಾತ್ರಿ ತಾವೆ ಕೈಯಲ್ಲಿ ಅದನ್ನು ಹಿಡಿದು ತೂಗಿ ನೋಡಿದ್ದಾರೆ! ಮಾಯವಾಗಿರುವುದೇ ಖಂಡಿತ ಎನಿಸಿತು. ಭಾಗವತರು ಪೇಚಾಡಿದರು. ಮನಸ್ಸು ತಡೆಯಲಿಲ್ಲ. "ಮಹಾಪರಾಧವಾಯಿತು, ಕ್ಷಮಿಸಿರಿ," ಎಂದು ಬಾಬಾರ ಕಾಲು ಹಿಡಿದು ಕ್ಷಮೆ ಕೇಳಲೆಂದು ಮತ್ತೆ ಪುಟ್ಟಪರ್ತಿಗೆ ಬಂದರು. ಅವರು ಬರುವುದಕ್ಕೆ ಮುಂಚೆಯೆ, ಭಾಗವತರಿಗೊದಗಿದ ಮೋಜಿನ ಸಂಕಟವನ್ನು ಬಾಬಾ ನನ್ನೆದುರು ಹೇಳಿ, "ನೋಡು, ಈಗ ಸ್ವಲ್ಪ ಹೊತ್ತಿನಲ್ಲಿ ಅವರು ಇಲ್ಲಿಗೇ ಬರುತ್ತಾರೆ," ಎಂದಿದ್ದರು. ಬಾಬಾ ಹೇಳಿದಂತೆಯೇ ವಾಪಸು ಓಡಿ ಬಂದ ಹೊನ್ನಪ್ಪ ಭಾಗವತರ ಒದ್ದಾಟವನ್ನು ನೋಡಿ ನನಗಾದ ಉದ್ವೇಗವನ್ನು ತಡೆದುಕೊಳ್ಳಲಾರದಾದೆ. ಭಾಗವತರು ಪ್ರಶಾಂತಿ ನಿಲಯದ ಕಂಬವೊಂದಕ್ಕೊರಗಿ ಬಿಕ್ಕಿಬಿಕ್ಕಿ ಅಳುತ್ತಿದ್ದಾರೆ! ಕಣ್ಣೀರು ಕೋಡಿವರಿಯುತ್ತಿದೆ! ಅಹಂಕಾರವೆಲ್ಲ ಜರ್ರೆಂದು ಇಳಿದು ಹೋಗಿದೆ.

ಬಾಬಾ, "ಯಾಕೆ? ಏನಾಯಿತು?" ಎಂದು ಕೇಳುತ್ತ ಬಂದ ಕೂಡಲೆ ಭಾಗತವರ ದುಃಖದ ಕಟ್ಟೆಯೊಡೆಯಿತು.

ಬಾಬಾ ಅವರ ಕೈಹಿಡಿದು ಬೆನ್ನು ನೇವರಿಸಿ ಸಂತೈಸಿದರು. "ನೀನು ಹಾಗೆ ಮಾಡಿದುದರಲ್ಲಿ ತಪ್ಪೇನೂ ಇಲ್ಲ. ಬೇರೆ ಯಾರಾಗಿದ್ದರೂ ಹಾಗೇ ಮಾಡುತ್ತಿದ್ದರು. ನಿನ್ನ ಜೊತೆಯವರು ಬೇರೆ ನಿನಗೆ ಪ್ರೋತ್ಸಾಹ ನೀಡಿದರು. ಪಾಪ! ನೀನು ತಾನೆ ಏನು ಮಾಡೀಯೆ, ಒದ್ದಾಡಬೇಡ. ನಿನ್ನ ಮೇಲೆ ನನಗೆ ಕೋಪವಿಲ್ಲ, ಇರುವ ಪ್ರೀತಿ ಕುಂದಿಲ್ಲ. ಸಂದೇಹಪಡುವುದೊಳ್ಳೆಯದು. ನಾನದನ್ನು ಮೆಚ್ಚುತ್ತೇನೆ. ಏಕೆಂದರೆ ಸಂದೇಹ ಬಂದು ಪರಿಹಾರವಾದಾಗಲೇನೇ ನಂಬಿಕೆ ಸ್ಥಿರವಾಗುತ್ತದೆ. ಇಕೋ ನೋಡು, ಕಳೆದು ಹೋಯಿತೆಂದು ನೀನು ಪರಿತಪಿಸುತ್ತಿರುವ ಸರ ಇದೇ ಅಲ್ಲವಾ, ತಗೋ," ಎನ್ನುತ್ತ ಬಾಬಾ ಮತ್ತೆ ಕೆಳಮುಖ ಮಾಡಿದ ಅಂಗೈಯನ್ನು ಮೇಲೆತ್ತಿ ವೃತ್ತಾಕಾರವಾಗಿ ಒಂದೆರಡು ಬಾರಿ ಆಡಿಸಿ ಗಪ್ ಎಂದು ಹಿಡಿದರು. ಅದೇ ಸರ! ಭಾಗವತರು ನಿಬ್ಬೆರಗಾಗಿ ಆ ಸೋಜಿಗವನ್ನು ನೋಡುತ್ತ

ಬಾಬಾ 'ತಗೋ' ಎಂದ ತಕ್ಷಣ ಬಾಗಿ ತಮ್ಮೆರಡೂ ಅಂಗೈಗಳನ್ನು ಮುಂಚಾಚಿ ಇಸಿದುಕೊಂಡರು. "ನಾನೇನಾದರೂ ಒಂದು ವಸ್ತುವನ್ನು ಸೃಷ್ಟಿಸಿ ಕೊಟ್ಟರೆ ಅದು ನನ್ನ ಭಾಗವೇ ಆಗಿರುತ್ತದೆ. ಮತ್ತೆ ಅದು ನನಗೆ ಬಂದು ಸೇರದೆ ಗತ್ಯಂತರವಿಲ್ಲ," ಎಂದರು ಬಾಬಾ. ಹೊನ್ನಪ್ಪ ಭಾಗವತರ ಮನಸ್ಸು ಪಶ್ಚಾತ್ತಾಪದಿಂದ ಮತ್ತಷ್ಟು ದೀನವಾಗಿತ್ತು.

ಈ ಘಟನೆ ನಡೆದು ೨೦ ವರ್ಷಗಳ ಬಳಿಕ ನಡೆದ ಇಂತಹದೇ ಇನ್ನೊಂದು ಪ್ರಸಂಗವನ್ನೂ ಇಲ್ಲಿಗೆ ಜೋಡಿಸಿಬಿಡುತ್ತೇನೆ.

'ಟ್ರೆಡ್‌ಮನ್' ಎಂಬ ಒಬ್ಬ ನಾರ್ವೆ ದೇಶದ ಇಂಜಿನಿಯರನು ಪ್ರಶಾಂತಿ ನಿಲಯಕ್ಕೆ ಬಾಬಾರ ದರ್ಶನಕ್ಕೆಂದು ಬಂದಿದ್ದ. ಚಿತ್‌ಗಾಂಗ್ ಬಂದರಿನ ವಿಸ್ತರಣೆಯ ಯೋಜನೆಯನ್ನು ಕೈಗೆತ್ತಿಕೊಳ್ಳಲು ಬಾಂಗ್ಲಾ ದೇಶಕ್ಕೆ ಹೊರಡುವ ಮುನ್ನ ಬಾಬಾರಿಗೆ ಹೇಳಿ ನಮಸ್ಕಾರ ಮಾಡಿದ. ಬಾಬಾ ಆಶೀರ್ವದಿಸಿ ಒಂದು ಉಂಗುರವನ್ನು ಸೃಷ್ಟಿ ಮಾಡಿ ಅವನ ತೋರುಬೆರಳಿಗಿಟ್ಟರು. ಬಾಂಗ್ಲಾ ದೇಶಕ್ಕೆ ಹೋದವನು ಆರು ತಿಂಗಳ ನಂತರ ಇದ್ದಕ್ಕಿದ್ದಂತೆ ಮತ್ತೆ ವೈಟ್‌ಫೀಲ್ಡ್‌ನ ಬೃಂದಾವನದಲ್ಲಿದ್ದ ಬಾಬಾರ ಮಂದಿರದ ಬಾಗಿಲಿಗೆ ಬಂದು ನಿಂತ. ಭಜನೆ ಶುರು ಆಗುವುದರಲ್ಲಿದ್ದುದನ್ನು ನೋಡಿ, ಅಲ್ಲಿ ಭಜನೆ ಸಾಲಿನಲ್ಲಿ ಕುಳಿತಿದ್ದ ನನ್ನ ಮತ್ತು ಡಾಕ್ಟರ್ ಭಗವಂತಂ ನಡುವೆ ತನ್ನನ್ನು ತಾನು ಪ್ರತಿಷ್ಠಾಪಿಸಿಕೊಂಡ.

ಬಾಬಾ ನಮ್ಮ ಸಾಲಿನ ಮುಂದೆ ಬಂದಾಗ 'ಟ್ರೆಡ್‌ಮನ್'ನನ್ನು ನೋಡಿ, "ಎಲ್ಲಿ ಉಂಗುರ?" ಎಂದ ಕೇಳಿದರು.

ಆತ ನಾಚಿದ ಮುಖ ಮಾಡಿಕೊಂಡು, "ಕಳೆದುಹೋಯಿತು," ಎಂದ.

"ಎಲ್ಲಿ?" ಎಂದರು ಬಾಬಾ.

"ಚಿತ್‌ಗಾಂಗ್‌ನಲ್ಲಿ ಹಡಗಿನ ಕೂವೆಕಂಬದ ಹಗ್ಗದಿಂದಿಳಿದು ಬರುವಾಗ ಬೆರಳಿಂದ ಕಳಚಿ, ನದಿಯೊಳಗೆ ಬಿದ್ದಿತು," ಎಂದು ಹೇಳಿದ.

"ಓ! ಯಾವಾಗ?"

"ಫೆಬ್ರುವರಿ ೨೩ರಂದು."

'ಅಂದರೆ ಮೂರು ತಿಂಗಳ ಹಿಂದೆ' ಎಂದುಕೊಂಡೆ ನಾನು ಲೆಕ್ಕ ಹಾಕಿ ನನ್ನ ಮನಸ್ಸಿನೊಳಗೇ.

ಬಾಬಾರ ಹಸ್ತ, ಒಂದೆರಡು ಸುತ್ತು ವೃತ್ತಾಕಾರವಾಗಿ ಆಡಿ ಗಪ್ಪೆಂದು ಏನನ್ನೋ ಹಿಡಿಯಿತು. ಅಲ್ಲಿದ್ದ ನಾವು ಐವತ್ತು ಜನ ಇದೆಲ್ಲವನ್ನೂ ಗಮನದಲ್ಲಿಟ್ಟು ನೋಡುತ್ತಿದ್ದೆವು. ಎರಡು ಬೆರಳುಗಳಿಂದ ಹಿಡಿದು ತೋರಿಸಿದರು.

ಉಂಗುರ!

'ಅದೇ ಉಂಗುರವೇ ಎಂದು ನಾನು ಇನ್ನೇನು ಬಾಬಾರನ್ನೇ ಕೇಳಬೇಕು ಎನ್ನುತ್ತಿದ್ದ ಹಾಗೆ ಡಾ. ಭಗವಂತಂ ಕೇಳಿಯೇಬಿಟ್ಟರು! ಅವರದ್ದು ವೈಜ್ಞಾನಿಕ ಕುತೂಹಲ! ತಡೆಯುವುದಕ್ಕಾಗಲಿಲ್ಲ. ಅವರ ಕಡೆ ತಿರುಗಿ ಬಾಬಾ,

"ಯಾಕೆ ಇನ್ನೂ ಅನುಮಾನವೆ? ಹಾಗಾದರೆ ನಿನ್ನ ನಂಬಿಕೆ ಇನ್ನೂ ದೃಢವಾಗಿಲ್ಲ," ಎಂದರು.

ಅಷ್ಟರಲ್ಲಿ 'ಟ್ರೆಡ್‌ಮನ್' ಎದ್ದು ಬಾಬಾರ ಪಾದಗಳಿಗೆ ಹಣೆ ಮುಟ್ಟಿಸಿ ನಮಸ್ಕಾರ ಮಾಡಿದ. ಬಾಬಾ ಅವನ ಮುಂಚಾಚಿದ ಹಸ್ತದ ಮೇಲೆ ಉಂಗುರವನ್ನಿಟ್ಟು, "ಅದೇ ಉಂಗುರ

ರಾಷ್ಟ್ರಕವಿ ಕುವೆಂಪು ಅವರನ್ನು ಅವರ ಬಾಲ್ಯದ ದಿನಗಳಲ್ಲೇ ಪತ್ತೆ ಹಚ್ಚಿ ಶ್ರೀ ರಾಮಕೃಷ್ಣಾಶ್ರಮಕ್ಕೆ ಪರಿಚಯಿಸಿಕೊಟ್ಟ ಕೀರ್ತಿ 'ಕಸ್ತೂರಿ' ಅವರಿಗೆ ಸಲ್ಲುತ್ತದೆ. ಡಾ. ಎಸ್. ರಾಧಾಕೃಷ್ಣನ್, ಡಾ. ವಿ.ಕೃ. ಗೋಕಾಕ, ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯ, ಡಿ.ವಿ.ಜಿ., ಮಾಸ್ತಿ, ತ.ಸು. ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿ, ಬೇಂದ್ರೆ, ಡಾ. ಶಿವರಾಂ, ಡಾ. ಎಂ.ವಿ. ಗೋವಿಂದಸ್ವಾಮಿ, ಡಾ. ಎಂ.ವಿ. ಗೋಪಾಲಸ್ವಾಮಿ, ಎಸ್. ವಿ. ಕೃಷ್ಣಮೂರ್ತಿ ಇವರೇ ಮೊದಲಾದ ಮಹಾನ್ ವ್ಯಕ್ತಿಗಳು ಅವರ ಒಡನಾಡಿಗಳಾಗಿದ್ದರು.



ಕೆಳಗೆ ನದಿಯ ನೀರೊಳಗೆ ಬಿದ್ದು ಹೋಯಿತು ಎಂದೆಯಲ್ಲ, ಬಿದ್ದಿತು ನಿಜ, ಆದರೆ ಬಿದ್ದುದು ನೀರೊಳಗೇ ಅಲ್ಲ, ನೀರೊಳಗಿದ್ದ ನನ್ನ ಕೈಯೊಳಗೆ. ಆ ನದಿಯಲ್ಲೂ ಇರುವುದು ನಾನೇ. ನದಿಯೊಳಗೆ ಮಾತ್ರವೇನು, ಎಲ್ಲೆಲ್ಲೂ ಇದ್ದೇನೆ. ಎಲ್ಲೆಲ್ಲಿಯೂ ನನ್ನ ಕಣ್ಣೇ, ನನ್ನ ಕಿವಿಗಳೇ, ನನ್ನ ಮುಖವೇ ಇರುವಾಗ ಇನ್ನೇನು? ನಾನೆಲ್ಲವನ್ನೂ ವ್ಯಾಪಿಸಿಕೊಂಡಿದ್ದೇನೆ. ಎಲ್ಲವನ್ನೂ ಆವರಿಸಿಕೊಂಡಿದ್ದೇನೆ," ಎಂದು ದೃಢವಾದ ವಾಣಿಯಲ್ಲಿ ಹೇಳಿದರು.

ಆ ಸಂಜೆಯೂ ಮತ್ತೆ ಅದೇ ಮಾತನ್ನು ಬಾಬಾರ ಬಾಯಿಂದ ಕೇಳಿ ನಮ್ಮ ದೃಷ್ಟಿಪಟಲದ ಮೇಲೆ ಬಿದ್ದಿದ್ದ ಸಂದೇಹದ ಪೊರೆಯನ್ನು ತೆಗೆದು ಹಾಕಲು ಭಗವಂತನೇ ಸಾಯಿ ರೂಪದಲ್ಲಿ ಬಂದಿರುವನೆಂಬ ಸಂಗತಿ ದೃಢಪಟ್ಟಿತು.

ಅದೇ ಸಲದ ದಸರಾ ಉತ್ಸವಕ್ಕೆ ಗಾಯನಪಟು ಶ್ರೀಮತಿ ಸರಸ್ವತಿಬಾಯಿ ಪ್ರಶಾಂತಿ ನಿಲಯಕ್ಕೆ ಬಂದರು. ಆ ವೃದ್ಧ ಕಲಾವಿದೆ ರಾಮಾಯಣ ಪುಣ್ಯಕಥೆಯ ಆಧಾರದ ಮೇಲೆ ರಚಿತವಾದ ಹಾಡುಗಳನ್ನು ಹಾಡಿದಾಗ ಕೇಳಿದ ನೂರಾರು ಭಕ್ತರು ಹರ್ಷರೋಮಾಂಚಿತರಾದರು. ೭೦ ವರ್ಷದ ಆಕೆಯಲ್ಲಿ ಅದ್ಭುತವಾದ ಸ್ಮರಣಶಕ್ತಿ, ಗಂಟೆಗಟ್ಟಲೆ ಹಾಡುವ ತ್ರಾಣ ಎರಡೂ ಆಶ್ಚರ್ಯವುಂಟು ಮಾಡುವಷ್ಟಿದ್ದವು. ಆಕೆ ಹೊರಡುವ ಮುನ್ನ ಬಾಬಾರ ಬಳಿಗೆ ಬಂದು ಪಾದಗಳಿಗೆ ನಮಸ್ಕಾರ ಮಾಡಿದಾಗ ಬಾಬಾ ಆಕೆಗೆ ಸೊಗಸಾದ ಬನಾರಸ್ ಸೀರೆಯೊಂದನ್ನು ಉಡುಗೊರೆಯಾಗಿ ಕೊಟ್ಟು ಆಶೀರ್ವದಿಸಿದರು. ಅನಂತರ ಮಧ್ಯಾಹ್ನ ಬಾಬಾ ನಮ್ಮೊಡನೆ ಮಾತಾಡುತ್ತಿದ್ದಾಗ "ಆ ಸೀರೆ ಹನ್ನೆರಡು ಮೊಳದ್ದೋ ಏನೋ, ಆಕೆ ಉಡುವ ಪದ್ಧತಿಗೆ ಸೀರೆಯ ಉದ್ದ ಸಾಲದಾಗುವುದೋ ಏನೋ," ಎಂದರು. ಅಲ್ಲಿಯೇ ಇದ್ದ ಕೆಲವು ಮಹಿಳೆಯರು ಸರಸ್ವತಿಬಾಯಿ ಉಡುವುದು ೧೮ ಮೊಳದ ಸೀರೆ ಎಂದು ಹೇಳಿದರು. ಬಾಬಾ ಉಳಿದ ಬನಾರಸ್ ಸೀರೆಗಳಲ್ಲಿ ಒಂದೆರಡನ್ನು ತೆಗೆಸಿ ಅಳತೆ ಮಾಡಿಸಿದರು. ಅವೆಲ್ಲ ೧೨ ಮೊಳದ ಸೀರೆಗಳೆಂದು ಖಚಿತವಾಯಿತು. ಸ್ವಾಮಿ ಚಿಂತಿತರಾದಂತೆ ಕಂಡಿತು. ಸೀರೆ ಆಕೆಗೆ ಕೊಟ್ಟಿದ್ದೂ ಪ್ರಯೋಜನವಾಗದೆ ಹೋಯಿತಲ್ಲ ಎಂದೆನಿಸಿರಬೇಕು. ಇದಾದ ಕೆಲವು ದಿನಗಳನಂತರ ಮದ್ರಾಸಿನಿಂದ ನನಗೊಂದು ಕಾಗದ ಬಂದಿತು. ಆ ಖ್ಯಾತ ಗಾನವಿಶಾರದೆಯೇ ಬರೆದಿದ್ದರು. ನಡೆದ ಪವಾಡವನ್ನು ತಿಳಿಸಿ ತಮಗಾದ ವಿಸ್ಮಯವನ್ನು ಬಣ್ಣಿಸಿದ್ದರು. ಬಾಬಾ ಕೊಟ್ಟ ಸೀರೆಯನ್ನು ಮನೆಯಲ್ಲಿ ಬಿಚ್ಚಿ ನೋಡಿದಾಗ, 'ಅದು ೧೨ ಮೊಳದ್ದು. ತಮಗೆ ಸಾಕಾಗುವುದಿಲ್ಲ' ಎಂದು ಗೊತ್ತಾಯಿತು. ಆದರೂ ಸ್ವಾಮಿಯ ಕೃಪೆಯಿಂದ ದೊರೆತುದು, ಮನೆಯೊಳಗೇ ಪೂಜೆಯ ಸಮಯದಲ್ಲಿ ಉಟ್ಟರಾಯಿತು ಎಂದು ಮನಸ್ಸಿನಲ್ಲೇ ಅಂದುಕೊಂಡರು ಅಷ್ಟೆ. ಪೂಜೆಯ ಹೊತ್ತಿಗೆ ಸ್ನಾನ ಮಾಡಿ, ಆ ಸೀರೆಯನ್ನು ಉಡುತ್ತಾ, 'ಇದೇನು ಸೀರೆ ಉದ್ದವಾಗಿ ಬೆಳೆದಿರುವಂತಿದೆಯಲ್ಲ' ಎಂದು ತೋರಿತು. ಸ್ವಾಮಿಯ ಮಹಿಮೆ! ಸ್ವಾಮಿಯ

ಸಂಕಲ್ಪ! ಹನ್ನೆರಡು ಮೊಳ ಇದ್ದುದು ಈಗ ಹದಿನೆಂಟು ಮೊಳ! ಅಲ್ಲಲ್ಲಿ, ಹದಿನೆಂಟು ಮೊಳ ಮೇಲೆ ಇನ್ನೂ ಮೂರ್ನಾಲ್ಕು ಅಂಗುಲ ಹೆಚ್ಚಾಗಿಯೇ ಉದ್ದವಾಗಿಬಿಟ್ಟಿತು.....

ಬಾಬಾ ಅವರ ವ್ಯಕ್ತಿತ್ವ, ವಿಚಾರಗಳು ದಿನ ದಿಂದ ದಿನಕ್ಕೆ ಹೆಚ್ಚು ಹೆಚ್ಚು ಸ್ಪಷ್ಟವಾಗಿ, ಪರಿಶುಭ್ರವಾಗಿ ನನಗೆ ತಿಳಿಯತೊಡಗಿತು. ಇಂದಿಗೂ ಈ ದೇವಶಿಶು ಅವತರಿಸಿ ಐವತ್ತು ವರ್ಷ, ನನಗೆ ಎಂಬತ್ತು ವರ್ಷ ಆಗುತ್ತಿರುವಾಗಲೂ ಅದೇ ವಿಚಾರ-ತಿಳಿವಳಿಕೆ ನನ್ನ ತಲೆಯೊಳಗೆ ಬೆಳಗುತ್ತಲೇ ಇದೆ.

ಭಕ್ತ-ಭಗವಂತರ ಸಂಬಂಧದಲ್ಲಿ ಒಂದು ಬಗೆಯ ಲೀಲೆ ಅಂತರ್ಗತವಾಗಿದೆ. "ಈ ಜಗತ್ತನ್ನು ನನ್ನ ಸಂತೋಷಕ್ಕಾಗಿ ಸೃಷ್ಟಿಸಿದೆ," ಎಂದು ಬಾಬಾ ಬರೆದಿದ್ದಾರೆ. ಇನ್ನೊಂದು ಸಂದರ್ಭದಲ್ಲಿ, "ನಾನೇ ಬೊಂಬೆಯಾಟವನ್ನು ನಿರ್ದೇಶಿಸುತ್ತಿದ್ದೇನೆ. ಇದು ನನಗೆ ತುಂಬಾ ಸಂತೋಷಕೊಡುತ್ತದೆ," ಎಂದು ಸಾರಿದ್ದಾರೆ. ಅಹಂಭಾವದ ಬಲೂನುಗಳನ್ನು, ನೀರ್ಗುಳ್ಳೆಗಳನ್ನು ಚುಚ್ಚಿ ಒಡೆಯುವುದು, ಗಾಳಿಗೋಪುರಗಳನ್ನು ಕೆಡವಿ ಹಾಕುವುದು, ಕಣ್ಣುಮುಚ್ಚಾಲೆಯಾಡುವುದು ಇವೇ ಅವರ ಪ್ರಿಯವಾದ ಆಟಗಳಾಗಿವೆ.

ಒಂದು ಸಂಗತಿ ನೆನಪಾಗುತ್ತದೆ: ೧೯೫೫ರಲ್ಲಿ ಒಮ್ಮೆ ಸ್ವಾಮಿ ಕೂಡಲೇ ನಾನು ಬರುವಂತೆ ಹೇಳಿಕಳುಹಿಸಿದರು. ನಾನು ತಕ್ಷಣ ಓಡಿದೆ. ಹೈದ್ರಾಬಾದಿನ ಸುಪ್ರಸಿದ್ಧ ದಿನಪತ್ರಿಕೆಯೊಂದರ ಸಂಪಾದಕರು 'ಸನಾತನ ಸಾರಥಿ'ಯ ಸಂಪಾದಕರನ್ನು ಪರಿಚಯಿಸುವ ಲೇಖನವೊಂದನ್ನು ತಮ್ಮ 'ಸಾಪ್ತಾಹಿಕ ಪುರವಣಿ'ಯಲ್ಲಿ ಪ್ರಕಟಿಸಬೇಕೆಂದಿದ್ದಾರೆಂದೂ, ಅದಕ್ಕೆ ನನ್ನ ಫೋಟೋ ಕೇಳಿರುವರೆಂದೂ ಬಾಬಾ ನನಗೆ ಗಂಭೀರವಾಗಿ ತಿಳಿಸಿದರು. ತಾನೇ ಆ ಫೋಟೋ ಕಳುಹಿಸಿ ಕೊಡುವುದಾಗಿ ಬಾಬಾ ಬಂದವರಿಗೆ ಮಾತು ಕೊಟ್ಟಿದ್ದಾರೆಂದೂ ತಿಳಿಯಿತು. "ನೋಡು, ಈಗ ನಿನ್ನದೊಂದು ಫೋಟೋ ತೆಗೆಯಬೇಕು. ಹೊಸದಾಗಿ ತರಿಸಿರುವ ಕ್ಯಾಮರಾ ಇದೆ. ನಿನ್ನ ಫೋಟೋವನ್ನು ನಾನೇ ಆ ಕ್ಯಾಮರಾದಲ್ಲಿ ತೆಗೀತೇನೆ. ಬೇಗ ಸಿದ್ಧವಾಗಿ ಬಂದುಬಿಡು," ಎಂದರು. ನನಗೆಷ್ಟು ಸಂತೋಷವಾಯಿತು ಎನ್ನುತ್ತೀರಾ! ಸ್ವರ್ಗಕ್ಕೆ ಮೂರೇ ಗೇಣು... ಅಲ್ಲ, ಅಪ್ಪಟ ಸ್ವರ್ಗದಲ್ಲೇ ಓಲಾಡತೊಡಗಿದೆ.

ಮಹಡಿಯಿಂದ ದಡದಡಾಂತ ಹದಿನೆಂಟು ಮೆಟ್ಟಿಲುಗಳನ್ನು ಅದೆಂತಹ ವೇಗದಿಂದ, ಚುರುಕಿನಿಂದ ಇಳಿದೆನೋ! ಗರಿಗರಿಯಾದ ಪಂಚೆ-ಜುಬ್ಬ ಹಾಕಿಕೊಂಡು ಅತ್ಯಲ್ಪ ಕಾಲದೊಳಗೆ ಮತ್ತೆ ಮಂದಿರದಲ್ಲಿ, ಬಾಬಾ ಅವರ ಮುಂದೆ ನಗುಮುಖದೊಂದಿಗೆ ಪ್ರತ್ಯಕ್ಷಗೊಂಡು ನಿಂತೆ. ಬಾಬಾ ನನ್ನ ಭುಜಗಳನ್ನು ಹಿಡಿದು ಎಲ್ಲಿ, ಎಷ್ಟು ದೂರದಲ್ಲಿ ಫೋಟೋಕ್ಕೆ ಹೇಗೆ ನಿಲ್ಲಬೇಕೋ ಹಾಗೆ ನಿಲ್ಲಿಸಿದರು. ಕ್ಯಾಮರಾ ಕಣ್ಣಿನ ಮೂಲಕ ನನ್ನನ್ನು ನೋಡಿ,

---

**ಕ**ಸ್ತೂರಿಯವರು ನಿಧನರಾಗುವ ೪-೫ ವರ್ಷಗಳ ಹಿಂದೆ ಬೆಂಗಳೂರಿನ ಸೈಂಟ್ ಜಾನ್ಸ್ ಆಸ್ಪತ್ರೆಯಲ್ಲಿ ಅವರು ಕಾಯಿಲೆಯಿಂದ ಮಲಗಿದ್ದರು. ಆಗ ಡಾ. ಬಿ.ಎನ್. ನರಸಿಂಹಮೂರ್ತಿಯವರು ಅವರ ಆರೈಕೆ ವಹಿಸಿಕೊಂಡಿದ್ದರು. ಅದೇ ವೇಳೆಗೆ ಅವರು ಒಮ್ಮೆ ಬಂದು ಕಸ್ತೂರಿ ಅವರನ್ನು ಕುರ್ಚಿಯಿಂದ ಎತ್ತಿ ಹಾಸಿಗೆಯಲ್ಲಿ ಕೂಡ್ರಿಸಿದರು. ಮರುದಿನ ತನ್ನನ್ನು ನೋಡಲು ಆಸ್ಪತ್ರೆಗೆ ಬಂದ ಗೆಳೆಯರಲ್ಲಿ "ಮೂರ್ತಿ ನನ್ನ ತೂಕ ಕಂಡುಹಿಡಿದ. ನನ್ನ ಬೆಲೆ ಇಷ್ಟೇ ಎಂದು ಕಂಡುಹಿಡಿದೇಬಿಟ್ಟ," ಎಂದು ಲೇವಡಿ ಮಾಡಿದರು. ಅವರ ಆಸ್ಪತ್ರೆ ಜೀವನದ ಬಗ್ಗೆ ಯಾರಾದರೂ ವಿಚಾರಿಸುತ್ತಿದ್ದರೆ ಆಗ, "ನಾನು ಆಸ್ಪತ್ರೆ ಸೇರಿ ಸ್ವಾಮಿಯಿಂದ ದೂರವಾಗಿ ದಿನ ಕಳೆದದ್ದು ಹೇಗಂತ ನನ್ನ ಈ ತಲೆದಿಂಬಿಗೇ ಗೊತ್ತು" ಎಂದು ಹೇಳುತ್ತಿದ್ದರು.

---

"ಪರವಾಗಿಲ್ಲ ಫೋಟೋ ಚೆನ್ನಾಗಿ ಬರುವಂತಹ ಮುಖ ನಿನ್ನದು," ಎಂದು ಉಬ್ಬಿಸಿದರು. ನಾನು ಮತ್ತಷ್ಟು ಹರ್ಷಚಿತ್ತದಿಂದ ಎದೆ ಸೆಟೆಸಿ ಠೀವಿಯಿಂದ ನಿಂತೆ. ಮುಖದ ನಗುವನ್ನು ಇನ್ನಷ್ಟು ಉತ್ತಮಗೊಳಿಸಿದೆ. ನನ್ನ ಭಾವಚಿತ್ರ ಆಂಧ್ರಪ್ರದೇಶದಾದ್ಯಂತದ ಸಾವಿರಾರು ಓದುಗರ ಕಣ್ಣನ್ನು ಸೆಳೆಯಲಿದೆ ಎಂದು ಕಿರುಮನಸ್ಸಿನಿಂದ ಲೆಕ್ಕ ಹಾಕಿದೆ. ಪೂರ್ತಿ ದಂತಪಂಕ್ತಿ ಕಾಣುವಷ್ಟು ವಿಸ್ತರಿಸಿದ್ದ ನಗುವನ್ನು ಕೊಂಚ ಕಡಿಮೆಗೊಳಿಸಲು ಬಾಬಾ ಸೂಚಿಸಿದರು. ಕೊಂಚ ಏನು, ನಾನು ಆ ನನ್ನ ನಗುವನ್ನು ಪೂರ್ತಿಯಾಗಿ ಒಂದೇ ಗುಟುಕಿಗೆ ನುಂಗಿ ತುಟಿ ಮುಚ್ಚಿಬಿಟ್ಟೆ.

ಅಷ್ಟು ಹೊತ್ತಿಗೆ ಬಾಬಾ ನನ್ನ ತಲೆ, ಗದ್ದ ಹಿಡಿದು ಯಾವ ಓರೆಗೆ ನಿಲ್ಲಿಸಿದ್ದರೋ ಅದು ಸಡಿಲಗೊಂಡು ಮುಖ ಸ್ವಲ್ಪ ತಿರುಗಿತ್ತು. ಮತ್ತೆ ಅದನ್ನು ಸರಿಪಡಿಸಿಕೊಳ್ಳುವಂತೆ ಬಾಬಾ ಸಂಜ್ಞೆ ಮಾಡಿದರು. ನೆನಪು ಮಾಡಿಕೊಂಡು ಮುಖ, ನೋಯುತ್ತಿದ್ದ ಕತ್ತು ಸರಿಪಡಿಸಿಕೊಂಡೆ. 'ಸ್ಟೆಡಿ' ಎಂದು ಬಾಬಾ ಮೊದಲೆ ಎಚ್ಚರಿಕೆ ಕೊಟ್ಟು ಕ್ಯಾಮರಾ ಅಡ್ಜಸ್ಟ್ ಮಾಡಿಕೊಂಡರು. ಕಣ್ಣುಮಿಟುಕಿಸಿದೆನೋ, ಮುಗುಳುನಗೆ ತರುವುದಕ್ಕಾಯಿತೋ- ಇಲ್ಲವೋ ಎಂದು ಯೋಚಿಸುತ್ತಿರುವಷ್ಟರಲ್ಲಿ 'ಕ್ಲಿಕ್' ಅಂದುದೇ ತಡ, ಕ್ಯಾಮರಾದಿಂದ ಎಂಥದೋ ಒಂದು ಪುಟ್ಟ ಕಪ್ಪನೆಯ ಕೂದಲು- ಪ್ರಾಣಿ ಹೊಳೆಯುವ ಬಾಲ ಆಡಿಸುತ್ತ ಚಂಗನೆ ನೆಗೆದು ನನ್ನ ಕತ್ತಿನ ಮೇಲೆ ಹಾರಿಬಿತ್ತು. ಅದೇನು ಇಲಿಮರಿಯೋ? ಎನಿಸಿತು. ಕಿಟಾರೆಂದು ಕಿರುಚಿ ಹೆದರಿಕೆಯಿಂದ ಒಂದು ಮೂಲೆಗೆ ನೆಗೆದೆ. ಕತ್ತನ್ನು ಕೊಡವಿಕೊಂಡೆ. ಬಾಬಾ 'ಖೊಕ್-ಖೊಕ್' ಎಂದು ಹೊಟ್ಟೆಪೂರ್ತಿ ಬಿದ್ದುಬಿದ್ದು ನಗುತ್ತಿದ್ದರು! ನನಗೂ ನಗುತಡೆಯಲಾಗಲಿಲ್ಲ, ಅವರೊಂದಿಗೆ ನಾನೂ ನಗತೊಡಗಿದೆ. ಬಾಬಾ ಬಳಸಿದ್ದು ಒಂದು ಕೃತಕ ಕ್ಯಾಮರಾ. ಕ್ಯಾಮರಾ ರೂಪದ ಆಟದ ಗನ್ನನ್ನು! 'ಕ್ಲಿಕ್' ಮಾಡುವಾಗ ಅದರೊಳಗಿಟ್ಟಿದ್ದ ಹತ್ತಿಯ 'ಕಪ್ಪು ಇಲಿಮರಿ' ಚಿಮ್ಮಿ ನನ್ನ ಮೈಮೇಲೆ ಬಿದ್ದು ನನ್ನನ್ನು ಹೆದರಿಸಿತು. ಆಮೇಲೆ "ಏನೋ ಅಹಂಭಾವ ತಗ್ಗಿಸೋಣ ಎಂದು ಒಂದು ಕಥೆ ಕಟ್ಟಿ ಹೇಳಿದರೆ ನಂಬಿಬಿಡೋದೇ?" ಎಂದು ಬಾಬಾ ಮೃದುವಾಗಿ ಬೈದರು. ಒಂದು ಪತ್ರಿಕೆಯ 'ಸಂಪಾದಕಗಿರಿ' ಎಂಬುದೇನು ಅಂತಹ ಅಮೂಲ್ಯವಾದ ಸುದ್ದಿಯಲ್ಲ. ಪ್ರಪಂಚದಲ್ಲಿ ಅಂತಹ ಸುದ್ದಿ ಕುರಿತು ಯಾರಿಗೆ ತಾನೆ ಆಸಕ್ತಿ ಇದ್ದೀತು? ಈ ಪತ್ರಿಕೆಗಳ ಮೂಲಕ ಪ್ರಸಿದ್ಧರಾಗುವುದರಿಂದೇನು ಬರುತ್ತದೆ? ನಿಜವಾದ, ಬಹುಕಾಲ ಉಳಿಯುವಂತಹ, ಕೀರ್ತಿಯನ್ನು ಗಳಿಸಬೇಕಾದರೆ ಭಗವಂತನ ಸೇವೆಗೆ, ಭಗವಂತನಿಗೆ ಪ್ರಿಯರಾದ ಅವನಿಂದಲೇ ಸೃಷ್ಟಿಯಾದ ಲೋಕಸೇವೆಗೆ ಸಮರ್ಪಿಸಿಕೊಳ್ಳಬೇಕು"- ಹೀಗೆಂದು ನುಡಿದು ನನ್ನ ಕಣ್ಣು ತೆರೆಸಿದರು. ಅಹಂಕಾರದಿಂದ ಉಬ್ಬಿ ಒಳಗೆ ಹೋದ ನಾನು ಬಾಬಾರ ಈ ಚಿಕಿತ್ಸೆಯಿಂದ ಸಣ್ಣಗಾಗಿ ಹೆಚ್ಚು ವಿವೇಕಿಯಾಗಿ ಹೊರಗೆ ಬಂದೆ. ಬಾಬಾರ ದೇಹವೇನೋ ತಾರುಣ್ಯದ ಕೊನೆಯಂಚಿಗೆ ಬೆಳೆದಿದೆ. ಒಳಗಿನ ಮನಸ್ಸು ಮುಗ್ಧ ಕಂದನದು. ಮೃದುವಾಗಿ ಬುದ್ಧಿ ಹೇಳಿ ಬದುಕನ್ನು ತಿದ್ದಿ ಪರಿವರ್ತಿಸಲು ಬಂದಿರುವ ಕಂದ. ನರರ ನಯವಂಚನೆಯನ್ನೂ, ಮನುಷ್ಯರು ಧರಿಸುವ ವಿವಿಧ ಮುಖವಾಡಗಳನ್ನೂ ಕಿತ್ತು ತೆಗೆದು ಸತ್ಯವನ್ನು ಹೊರಗೆಡಹಿ, ಎಂತಹ ವಂಚನೆ, ಆತ್ಮವಂಚನೆಗೆ ತಮಗೆ ತಾವೇ ಒಳಗಾಗಿರುವುದರ ಅರಿವನ್ನು ಮನುಕುಲಕ್ಕೆ ಮೂಡಿಸಲು ಬಂದಿರುವ ದೇವಶಿಶು!

ಈಗ 'ಮಂಕುಬೂದಿ' ಎಂಬ ಕಥೆಯೊಂದು ನೆನಪಾಗುತ್ತದೆ. ಒಂದು ದೊಡ್ಡ ಸಾಮ್ರಾಜ್ಯ. ಅದರ ಚಕ್ರವರ್ತಿಗೆ ವಿನೂತನ ಮಾದರಿಯ ಹೊಸ ಹೊಸ ಬೆಲೆಬಾಳುವ



ಉಡುಪುಗಳನ್ನು ಸದಾ ಧರಿಸುವ ಚಪಲ. ಒಂದು ಸಲ ತಾವು ವಿದೇಶೀ ನೇಕಾರರು, ದರ್ಜಿಗಳು, ಹಿಂದೆಂದೂ ಕಾಣದ, ಯಾರೂ ನೋಡದ ರಮ್ಯ ಉಡುಪನ್ನು ಹೊಲಿದು ಕೊಡುವುದರಲ್ಲಿ ನಿಪುಣರೆಂದು ಅರಸನ ಮುಂದೆ ಅರಿಕೆ ಮಾಡಿಕೊಂಡರು. ಅಪ್ಪಣೆ ಪಡೆದು ಕೆಲವು ದಿವಸಗಳಲ್ಲಿ ಅತ್ಯಂತ ಸುಂದರವಾದ ಪಾರದರ್ಶಕ ಎನ್ನುವಷ್ಟು ನವುರಾದ ರೇಶ್ಮೆ ಬಟ್ಟೆ ನೇಯ್ದು ಉಡುಪು ತಯಾರಿಸಿರುವುದಾಗಿ ಹೇಳಿ ದೊರೆಗೆ ತಾವೇ ತೊಡಿಸಿ ಅಲಂಕರಿಸಿದರು. ಮಹಾಕುಶಲಿಗಳು! ದೊರೆ ಖುಷಿಗೊಂಡು ಆ ಉಡುಪನ್ನು ರಾಜಧಾನಿಯ ತನ್ನ ಪ್ರಜೆಗಳ ಮುಂದೆಲ್ಲ ಹೆಮ್ಮೆಯಿಂದ ಪ್ರದರ್ಶಿಸಲು ತೊಟ್ಟುಕೊಂಡು ಮೆರವಣಿಗೆ ಹೊರಟ.

ಅದೊಂದು ವೈಭವದ ಮೆರವಣಿಗೆಯಾಗಿತ್ತು. ರಸ್ತೆಯ ಎರಡೂ ಕಡೆ ಪ್ರಜೆಗಳು ಕಿಕ್ಕಿರಿದು ನಿಂತು ನೋಡುತ್ತಿದ್ದರು. ತಮ್ಮ ಚಕ್ರವರ್ತಿಯ ಪ್ರದರ್ಶನವನ್ನು ದಿಟ್ಟಿಸಿ ನೋಡುತ್ತ ಕೆಲವರು ಮೂಕರಾಗಿ ನಿಂತರು. ರಾಜನ ಮೈಮೇಲೆ ಅವರು ಕೇಳಿದ್ದ ಅತ್ಯಂತ ನವುರಾದ, ಸುಂದರವಾದ ಉಡುಪು ಎನ್ನುವಂತಹದು ಏನೂ ಕಾಣಲಿಲ್ಲ. 'ಪೂರ್ಣ ಬೆತ್ತಲೆ'ಯೇ ಇದ್ದಾನೆ ಎನಿಸಿತು. ಆದರೂ 'ಅದೇ ಆ ನವೀನ ಉಡುಪಿನ ವಿಶೇಷ' ಎಂದು ಜನ ಅಚ್ಚರಿಪಡುತ್ತಿದ್ದರು. ನೋಡಿದ ಲಕ್ಷಾಂತರ ಪ್ರಜೆಗಳು ದಾರಿಯುದ್ದಕ್ಕೂ "ಆಹಾ! ಆಹಾ!!" ಎಂದು ಮೆಚ್ಚುಗೆಯ ಉದ್ಗಾರ ಮಾಡುತ್ತಿದ್ದರು. ರಾಜ ನಿಜಕ್ಕೂ ಈ ಲೋಕದಲ್ಲಿ ಜನ್ಮತಾಳಿದ ದಿನ ಇದ್ದ ಉಡುಪಿನಲ್ಲೇ ಇದ್ದಾನೆ ಎಂಬ ಕಟುಸತ್ಯವನ್ನು ಹೇಳುವ ಧೈರ್ಯ ಯಾರಿಗೂ ಆಗಲಿಲ್ಲ. ಆಗ ಗುಂಪಿನಲ್ಲಿ ತನ್ನ ತಾಯಿಯೊಂದಿಗೆ ನಿಂತಿದ್ದ ಪುಟ್ಟ ಮಗುವೊಂದು, "ಅಯ್ಯಯ್ಯೋ... ಥೂ.... ನಾಚಿಕೆ ಆಗೋಲ್ವಾ... ಯಾಕಮ್ಮಾ ಮಹಾರಾಜರು ಬಟ್ಟೇನೇ ಹಾಕ್ಕೊಂಡಿಲ್ಲಾ?" ಎಂದು ಜೋರಾಗಿ ಕೇಳಿಯೇಬಿಟ್ಟಿತು. ಆಗ ಎಲ್ಲರಿಗೂ ಸತ್ಯ ಸಂಗತಿಯ ಅರಿವಾಯಿತು. ಒಬ್ಬರ ಕಿವಿಯಲ್ಲೊಬ್ಬರು ಪಿಸುಗುಟ್ಟಿ ತಿಳಿಸುತ್ತ ಜನಸಂದಣಿಯಲ್ಲೆಲ್ಲ ನಿಜಸಂಗತಿ ಆಗ ಜಾಹೀರಾಯಿತು. ಮುಸುಮುಸು ನಗುತ್ತಿದ್ದ ಜನ, ಕೊನೆಗೆ ಧೈರ್ಯ ಮಾಡಿ, 'ಹೋ.....' ಎಂದು ಜೋರಾಗಿ ನಗತೊಡಗಿತು. ಬಾಬಾ ಅಂತಹ ಮಗು! ಪಂಡಿತರ ಆಡಂಬರ, ಪ್ರತಿಷ್ಠೆಗಳ ಪೊಳ್ಳನ್ನು ಹೊರಗೆಡುಹಲು ಬಂದಿರುವ ಮಗು! ಸತ್ಯವೇನೆಂದು ನಾವು ತಿಳಿಯುವವರೆಗೂ ನಮ್ಮನ್ನು ಗೇಲಿ ಮಾಡಲು ಬಂದಿರುವ ಮಗು!

ಬಾಬಾ ಪ್ರತ್ಯಕ್ಷ ದೇವರೆಂದು ದೃಢವಾಗಿ ನಂಬಿದವನು ನಾನು. ಸಾಕ್ಷಾತ್ ಪರಮಾತ್ಮನೇ ನಿರಂತರ ನನ್ನ ಸಂಗಾತಿಯಾಗಿರುವುದು ಈ ಜನ್ಮದ ನನ್ನ ಮಹಾನ್ ಸೌಭಾಗ್ಯ ಎಂದು ಭಾವಿಸಿದ್ದೇನೆ.

ಬಾಬಾರ ಸನ್ನಿಧಿಯಲ್ಲಿ ನಡೆದ, ನಾನು ಕಣ್ಣಾರೆ ಕಂಡು ಬೆರಗಾದ ಕೆಲವೊಂದು 'ಪವಾಡ'ಗಳನ್ನು ಹೇಳಿದಾಗಲೆಲ್ಲ ನನ್ನ ಬೆಂಗಳೂರಿನ ಕೆಲವೊಂದು ಸ್ನೇಹಿತರು ನನ್ನ 'ಮನಃ

ಸ್ವಾಸ್ಥ್ಯ'ವನ್ನೇ ಶಂಕಿಸುತ್ತಾರೆ. ನನ್ನ ಮುಖದೆದುರು ಹಾಗೆಂದು ಹೇಳಲು ಹಿಂಜರಿಯುತ್ತಾರೆ. ಏಕೆಂದರೆ ಅವರ 'ಬುದ್ಧಿ ಸ್ವಾಸ್ಥ್ಯ'ವನ್ನು ನಾನು ಶಂಕಿಸಬಹುದೆಂಬ ಭಯ!

ಕಪಟ ಸಾಧುಗಳನ್ನು, ಆಷಾಢಭೂತಿಗಳನ್ನು, ವಂಚಕರನ್ನು, ಮೋಸಗಾರರನ್ನು, ಢೋಂಗಿ ವೈದ್ಯರನ್ನು, ಮಂತ್ರ-ತಂತ್ರವಾದಿಗಳನ್ನು ಲೇವಡಿ ಮಾಡಿ ಅವರ ನಿಜ ಸ್ವರೂಪವನ್ನು ಬಯಲು ಮಾಡಿ ಅವರ ಪ್ರಖ್ಯಾತಿಯನ್ನು ನುಚ್ಚುನೂರು ಮಾಡುತ್ತಿದ್ದ ಕಸ್ತೂರಿ; ಯಾವುದನ್ನೂ ಸುಲಭವಾಗಿ ನಂಬದ ಕಸ್ತೂರಿ; ಒಳ್ಳೆಯ ಹಾಸ್ಯಪ್ರಜ್ಞೆಯ, ವಿಡಂಬನಾ ಸಾಮರ್ಥ್ಯವಿದ್ದ ಕಸ್ತೂರಿ 'ಅದೂ ಯಾರೋ ಬಾಬಾ ಅಂತೆ, ಅವರ ಬಲೆಗೆ ಹೇಗೆ ತಾನೆ ಬಿದ್ದಿದ್ದಾರು? ಅದೂ ತಮ್ಮ ವಯಸ್ಸಿನ ಅರ್ಧ ಕೂಡ ಆಗದ ಆ ಹುಡುಗನಲ್ಲಿ ಏನು ಕಂಡು ಆತನ ವಶವರ್ತಿ ಆಗಿದ್ದಾರು?-ಹೀಗೆ ಅಂದುಕೊಂಡು ಅವರೆಲ್ಲ ಆಶ್ಚರ್ಯಪಡುತ್ತಿದ್ದರು. ಒಬ್ಬ ವ್ಯಕ್ತಿ ಯಾರ ಸಹವಾಸದಲ್ಲಿರುತ್ತಾನೆಂದು ತಿಳಿದರೆ ಅವನು ಎಂಥವನೆಂದು ತೀರ್ಮಾನಿಸಿ ಹೇಳಬಹುದು ಎಂಬ ನಾಣ್ಣುಡಿ ಇದೆ. ಇವರಾದರೋ ತಮ್ಮ ಸಹವಾಸ ಬಿಟ್ಟ ಮೇಲೆ ನಾನು ಎಂಥವನೆಂದು ತೀರ್ಮಾನಿಸಿಬಿಟ್ಟರು! ತಾವು ನನಗಿಂತ ಬಹು ಮೇಲ್ಪಟ್ಟವರೆಂದು ಬೀಗಿ, ತಮ್ಮ ವೈಚಾರಿಕತೆ ಮೊದಲಿನಿಂದಲೂ ಅವಲಂಬಿಸಿದ, ಆದರೆ ಈಗಿನ ಕಾಲಕ್ಕೆ ಹಳೆಯದಾಗಿ ಹೋದ ಅದೇ ಪುಸ್ತಕಗಳಿಗೆ ಅಂಧಾಭಿಮಾನದಿಂದ ಅಂಟಿಕೊಂಡುಬಿಟ್ಟಿದ್ದರು.

ಬಾಬಾ ಅವರ ಸಮ್ಮುಖದಲ್ಲಿ ನಾನು ಪಡೆದ ಅಸಾಧಾರಣ ಅನುಭವಗಳ ಕುರಿತು ಕೇವಲ ಆಶ್ಚರ್ಯ ಸೂಚಿಸಬಲ್ಲೆನೇ ವಿನಾ ವಿವರಿಸಿ ಅರ್ಥ ಸೂಚಿಸಲಾರೆ. ●

## ಇದೂ ಒಂದು ಪ್ರಶಸ್ತಿ!

ಶ್ರೇಷ್ಠ ನಟ, ಶ್ರೇಷ್ಠ ನಟಿ ಪ್ರಶಸ್ತಿಗಳ ಕುರಿತು ಕೇಳಿಯೇ ಇರುತ್ತೀರಿ. ಶಾಲೆಯ (ಶ್ರೇಷ್ಠ ವಿದ್ಯಾರ್ಥಿ) ಮಟ್ಟದಿಂದ ಹಿಡಿದು ಸಂಸತ್ತಿನ (ಶ್ರೇಷ್ಠ ಸದಸ್ಯ)ವರೆಗೂ ಇಂಥ ಹಲವಾರು ಪ್ರಶಸ್ತಿಗಳಂತೂ ಪ್ರಕಟವಾಗುತ್ತಲೇ ಇರುತ್ತವೆ.

ಆದರೆ ಮಧ್ಯಪ್ರದೇಶದ ದುರ್ಗಾ ಜಿಲ್ಲೆಯ ಅಕ್ಕಲವಾರಾ ಎಂಬ ಹಳ್ಳಿಯಲ್ಲಿ, ದೇಶ ಅಷ್ಟೇ ಏಕೆ ಇಡೀ ಜಗತ್ತೇ ಅಚ್ಚರಿ ಹಾಗೂ ಅಭಿಮಾನಪಡುವಂಥ ಪ್ರಶಸ್ತಿಯೊಂದು ಪ್ರತಿವರ್ಷವೂ ನೀಡಲ್ಪಡುತ್ತಿದೆ. ಯಾವುದು ಗೊತ್ತೆ? 'ವರ್ಷದ ಶ್ರೇಷ್ಠ ಅತ್ತೆ ಮತ್ತು ಸೊಸೆ' ಪ್ರಶಸ್ತಿ. ಇಡೀ ವರ್ಷ ಇದನ್ನು ಕುತೂಹಲದಿಂದ ಎದುರು ನೋಡುವ ಜನಕ್ಕೆ ಪ್ರಶಸ್ತಿ ಪ್ರದಾನದ ದಿನವೆಂದರೆ ಅದೊಂದು ದೊಡ್ಡ ಹಬ್ಬ. ಹಳ್ಳಿಗೆ ಹಳ್ಳಿಯೇ ಒಂದು ಮನೆಯ ಜನರಂತೆ ಅಲ್ಲಿ ನೆರೆಯುತ್ತದೆ. 'ಶ್ರೇಷ್ಠ ಅತ್ತೆ ಮತ್ತು ಸೊಸೆ' ಪ್ರಶಸ್ತಿಗೆ ಪಾತ್ರರಾದವರ ಹೆಸರು ಪ್ರಕಟವಾಗುವರೆಗೂ ಆ ಜನವೆಲ್ಲ ತಮ್ಮ ತಮ್ಮಲ್ಲೇ ಇಂಥಿಂಥವರು ಆ ಗೌರವಕ್ಕೆ ಪಾತ್ರರಾಗಬಹುದೆಂದು ಮಾತಾಡಿಕೊಳ್ಳುತ್ತಲೇ ಇರುತ್ತಾರೆ.

ಅಕ್ಕಲವಾರಾ ಸಂಪೂರ್ಣ ಸಾಕ್ಷರ ಗ್ರಾಮ. ವೃದ್ಧರು, ನಿರಾಶ್ರಿತರು ಹಾಗೂ ಅಂಗವಿಕಲರ ಸಹಾಯಾರ್ಥ ನಿಧಿಯೊಂದನ್ನು ಗ್ರಾಮವಾಸಿಗಳು ಸ್ಥಾಪಿಸಿದ್ದಾರೆ. ಯಾವುದೇ ಕುಟುಂಬದಲ್ಲೂ ವಾದ-ವಿವಾದಗಳು ತಲೆದೋರಿದರೆ ಅದು ಕೋರ್ಟಿನ ಕಟ್ಟೆಯವರೆಗೆ ಹೋಗುವುದೇ ಇಲ್ಲ. ಗ್ರಾಮ ಪಂಚರೇ ಅಂಥ ನ್ಯಾಯವನ್ನು ಬಗೆಹರಿಸಿಬಿಡುತ್ತಾರೆ.

ಅಂದ ಹಾಗೆ, 'ಶ್ರೇಷ್ಠ ಅತ್ತೆ ಮತ್ತು ಸೊಸೆ' ಪ್ರಶಸ್ತಿಯ ನಿರ್ಣಾಯಕರಾಗಿಯೂ ಈ ಪಂಚರೇ ಕಾರ್ಯ ನಿರ್ವಹಿಸುತ್ತಾರೆ.

ಆರೋಗ್ಯದಂಗಳ



# ಕುರುಡುತನಕ್ಕೆ ಕಾರಣವಾಗುವ ಕಣ್ಣಿನ ಕಾಯಿಲೆಗಳು

ಡಾ. ಎಚ್.ಎಸ್. ಮೋಹನ
ಎಂ.ಬಿ.ಬಿ.ಎಸ್., ಡಿ.ಓ.ಎಂ.ಎಸ್., ಎಂ.ಎಸ್. (ಆಸ್ಟ್ರೆ),
ವಿಜಯ ಕಣ್ಣಿನ ಚಿಕಿತ್ಸಾಲಯ,
ಸಾಗರ.

# ಕುರುಡುತನಕ್ಕೆ ಕಾರಣವಾಗುವ ಕಣ್ಣಿನ ಕಾಯಿಲೆಗಳು

ವ್ಯಕ್ತಿಗೆ ಅತಿ ಮುಖ್ಯವಾದ ದೃಷ್ಟಿಯನ್ನು ಕೊಡುವ ಅಂಗವಾದ ಕಣ್ಣು, ದೇಹದ ಇತರ ಅಂಗಗಳಂತೆ ಹತ್ತಾರು ಕಾಯಿಲೆಗಳಿಗೆ ತುತ್ತಾಗುವುದು ಸಹಜ. ಹಾಗೆಂದ ಮಾತ್ರಕ್ಕೆ ಕಣ್ಣಿಗೆ ಬರುವ ಎಲ್ಲ ತರಹದ ಕಾಯಿಲೆಗಳು ತೀವ್ರ ಸ್ವರೂಪಕ್ಕೆ ತಿರುಗಿ ಕಣ್ಣನ್ನು ನಾಶಮಾಡುತ್ತವೆ ಎಂದೇನೂ ಭಾವಿಸಬೇಕಿಲ್ಲ. ಆದರೆ ಕೆಲವೊಮ್ಮೆ ಸಾಮಾನ್ಯವೆಂದು ನಾವು ಭಾವಿಸುವ ಕಾಯಿಲೆಯೆ ದೃಷ್ಟಿಗೆ ತೀವ್ರ ಮಾರಕವಾಗುವ ಸಾಧ್ಯತೆಗಳೂ ಇವೆ.

ಕಣ್ಣಿಗೆ ಅಂಧತ್ವ ತರುವ ಪ್ರಮುಖ ಕಾಯಿಲೆಗಳೆಂದರೆ- ಕಾರ್ನಿಯದ ಮೇಲಿನ ಸೋಂಕು, ಕಣ್ಣಿನ ಪೊರೆ, ಗ್ಲೊಕೊಮಾ, ಸಿಹಿಮೂತ್ರರೋಗ, ತಾರಕೆಯ ಸೋಂಕು ಹಾಗೂ ಕಣ್ಣಿನ ಅಪಘಾತಗಳು.

## ಕಾರ್ನಿಯದ ಮೇಲಿನ ಹುಣ್ಣು

ಮುಂಭಾಗದಲ್ಲಿರುವುದರಿಂದ ಕಣ್ಣಿನ ಪಾರದರ್ಶಕ ಪಟಲವಾದ ಕಾರ್ನಿಯವು ಅನೇಕ ಸಂದರ್ಭಗಳಲ್ಲಿ ವಿವಿಧ ಗಾಯ, ಅಪಘಾತಗಳಿಗೆ ಒಳಗಾಗುವ ಸಾಧ್ಯತೆಗಳಿವೆ. ಅಲ್ಲದೆ ಕೆಲವು ಸಂದರ್ಭಗಳಲ್ಲಿ ಯಾವುದೇ ಗಾಯ, ಹೊಡೆತಗಳು ಆಗದ ಪ್ರಸಂಗಗಳಲ್ಲಿಯೂ ಕಾರ್ನಿಯದ ಮೇಲೆ ಹುಣ್ಣು ಆಗಬಹುದು. ಕೆಲವೊಮ್ಮೆ ಆಕಸ್ಮಿಕವಾಗಿ ಧೂಳು, ಕಸ ಅಥವಾ ಲೋಹದ ಪದಾರ್ಥಗಳು ಮುಂತಾದ ಹೊರಗಿನ ವಸ್ತುಗಳು ಕಾರ್ನಿಯದ ಮೇಲೆ ಬಂದು ಬೀಳಬಹುದು. ಹಳ್ಳಿಯಲ್ಲಿ ರೈತರು ಗದ್ದೆ ಕೆಲಸ ಮಾಡುವಾಗ ಬತ್ತ, ರಾಗಿ, ಗೋದಿ ಮೊದಲಾದ ಧಾನ್ಯಗಳ ಸಿಪ್ಪೆ ಅಥವಾ ತೆನೆಗಳು ಆಗಾಗ ರೈತನ ಕಣ್ಣಿಗೆ ಬಿದ್ದು ಗಾಯವನ್ನು ಉಂಟು ಮಾಡುವ ಸಾಧ್ಯತೆಗಳೂ ಬಹಳ. ಹಾಗೆಯೇ ಗಣಿಗಳಲ್ಲಿ ಅಥವಾ ವಿವಿಧ ಉದ್ದಿಮೆಗಳಲ್ಲಿ, ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಕೆಲಸಗಾರರಲ್ಲಿ ಸಣ್ಣ ಲೋಹದ ತುಂಡುಗಳು ಅಥವಾ ಇತರ ಕಸಗಳು ಕಾರ್ನಿಯದಲ್ಲಿ ಗಾಯ ಮಾಡುತ್ತವೆ. ಇಂತಹ ತುಂಡುಗಳನ್ನು ಆದಷ್ಟು ಬೇಗ ತೆಗೆದರೆ ಗಾಯದ ಪ್ರಮಾಣವನ್ನು ಕಡಿಮೆಮಾಡಬಹುದು.

ಕಾರ್ನಿಯದ ಮೇಲಿನ ಹುಣ್ಣನ್ನು ಮುಖ್ಯವಾಗಿ ಅದನ್ನು ಉಂಟು ಮಾಡುವ ಸೂಕ್ಷ್ಮಜೀವಿಗಳ ಆಧಾರದ ಮೇಲೆ ನಾವು ಹೀಗೆ ವಿಂಗಡಿಸಬಹುದು.

೧. ಬ್ಯಾಕ್ಟೀರಿಯದ ಸೋಂಕಿನಿಂದ ಬರುವ ಕಾರ್ನಿಯದ ಹುಣ್ಣು.

೨. ವೈರಸ್‌ಗಳಿಂದ ಬರುವ ಹುಣ್ಣು.

೩. ಶಿಲೀಂಧ್ರಗಳಿಂದ ಬರುವ ಹುಣ್ಣು.

**೧. ಬ್ಯಾಕ್ಟೀರಿಯದ ಸೋಂಕಿನಿಂದ ಬರುವ ಕಾರ್ನಿಯದ ಹುಣ್ಣು:** ಕಾರ್ನಿಯದ ಹುಣ್ಣು ಹೆಚ್ಚಿನ ಸಂದರ್ಭಗಳಲ್ಲಿ ಬ್ಯಾಕ್ಟೀರಿಯಾದ ಸೋಂಕಿನಿಂದಲೇ ಉಂಟಾಗುತ್ತದೆ. ಕಣ್ಣಿನಲ್ಲಿ ವಿವಿಧ ಕಸಕಡ್ಡಿಗಳು ಬಿದ್ದಾಗ ಅವುಗಳನ್ನು ಕೂಡಲೆ ತೆಗೆದು ಸೂಕ್ತ ಚಿಕಿತ್ಸೆ ಕೈಗೊಳ್ಳದಿದ್ದರೆ ವಿವಿಧ ಬ್ಯಾಕ್ಟೀರಿಯಗಳು ಸೋಂಕನ್ನು ಉಂಟುಮಾಡಬಲ್ಲುವು. ಈ ಪೈಕಿ ನೂಮೋಕಾಸ್ ಮತ್ತು ಸ್ಯೂಡೋ ಮೋನಾಸ್ ಎಂಬ ಬ್ಯಾಕ್ಟೀರಿಯಗಳು ಹೆಚ್ಚಿನ ಸಂದರ್ಭಗಳಲ್ಲಿ ಸೋಂಕನ್ನು ಉಂಟುಮಾಡುತ್ತವೆ.

**ಚಿಕಿತ್ಸೆ:** ಚಿಕಿತ್ಸೆ ಎಷ್ಟು ಬೇಗ ಆರಂಭವಾಗುತ್ತದೆಯೋ ಅಷ್ಟು ಒಳ್ಳೆಯದು. ಶಾಸ್ತ್ರೀಯವಾದ ಚಿಕಿತ್ಸೆ ಎಂದರೆ ಕಾರ್ನಿಯದ ಹುಣ್ಣಿನ ಸ್ವಲ್ಪ ಭಾಗವನ್ನು ತೆಗೆದು ಅದನ್ನು ಸೂಕ್ಷ್ಮದರ್ಶಕ ಪರೀಕ್ಷೆಗೆ

ಒಳಪಡಿಸಿ ಯಾವ ಬಗೆಯ ಸೂಕ್ಷ್ಮ ಜೀವಿ ಹುಣ್ಣಿಗೆ ಕಾರಣ ಎಂದು ಗೊತ್ತುಪಡಿಸಿಕೊಳ್ಳಬೇಕು. ಒಮ್ಮೆ ಯಾವ ಸೂಕ್ಷ್ಮಾಣುವಿನಿಂದ ಸೋಂಕು ಉಂಟಾಯಿತೆನ್ನುವುದು ಗೊತ್ತಾಯಿತೆಂದರೆ ನಂತರ ಅದು ಯಾವ ಔಷಧಕ್ಕೆ ಮಣಿಯುತ್ತದೆ ಎಂಬುದನ್ನು ಗೊತ್ತುಪಡಿಸಿಕೊಳ್ಳುವುದು ಸುಲಭ. ಸಾಮಾನ್ಯವಾಗಿ ಆ್ಯಂಟಿಬಯಾಟಿಕ್ ಔಷಧವನ್ನು ಹನಿಯ ರೂಪದಲ್ಲಿ ಮತ್ತು ಮುಲಾಮಿನ ರೂಪದಲ್ಲಿ ಕೊಡಬೇಕಾಗುತ್ತದೆ. ಆದರೆ ಈ ತರಹದ ಪರೀಕ್ಷೆಯ ಸೌಲಭ್ಯ ಹೆಚ್ಚಿನ ಸಂದರ್ಭಗಳಲ್ಲಿ ಲಭ್ಯವಾಗದಿರುವುದರಿಂದ ಸೂಕ್ತ ಔಷಧಿಯನ್ನು ಕೂಡಲೇ ಹಾಕಬೇಕಾಗುತ್ತದೆ. ಹುಣ್ಣು ತೀರ ಸಣ್ಣದಿದ್ದರೆ ಕೇವಲ ಔಷಧದ ಹನಿಗಳು ಹಾಗೂ ಮುಲಾಮು ಸಾಕು. ಗಾಯ ತೀವ್ರವಾಗಿದ್ದರೆ ಆ್ಯಂಟಿಬಯಾಟಿಕ್ ಔಷಧಿಯನ್ನು ಇಂಜೆಕ್ಷನ್ ರೂಪದಲ್ಲಿ ಕಣ್ಣಿಗೆ ಚುಚ್ಚಬೇಕಾದ ಅನಿವಾರ್ಯತೆ ಒದಗುತ್ತದೆ. ಈ ಔಷಧದ ಜೊತೆ ಕೆಲವೊಮ್ಮೆ ಆಟ್ರೊಪೀನ್ ಔಷಧವನ್ನು ಕೊಡ ಬೇಕಾಗುತ್ತದೆ. ಈ ರೀತಿಯ ರೋಗಿಗಳನ್ನು ಆಗಾಗ ಪರೀಕ್ಷಿಸಿ ಔಷಧದ ಪ್ರಮಾಣ ಮತ್ತು ರೀತಿಯನ್ನು ಹೆಚ್ಚು ಕಡಿಮೆ ಮಾಡಬೇಕಾಗುತ್ತದೆ.

೨. **ವೈರಸ್‌ಗಳಿಂದ ಬರುವ ಹುಣ್ಣು:** ಹಲವು ವೈರಸ್‌ಗಳು ಕಾರ್ನಿಯದ ಮೇಲಿನ ಗಾಯಕ್ಕೆ ಅಥವಾ ಹುಣ್ಣಿಗೆ ಕಾರಣವಾಗಬಹುದಾದರೂ ಹರ್ಪಿಸ್ ಸಿಂಪ್ಲೆಕ್ಸ್ ವೈರಸ್ ಹೆಚ್ಚಿನ ಸಂದರ್ಭಗಳಲ್ಲಿ ಕಾರಣವಾಗಿರುತ್ತದೆ. ಸೋಂಕು ಉಂಟಾದ ವ್ಯಕ್ತಿಗೆ ದೃಷ್ಟಿ ಮಸಕಾಗಲು ಆರಂಭವಾಗುತ್ತದೆ. ಒಂದು ಕಣ್ಣಿನಲ್ಲಿ ತೀಕ್ಷ್ಣ ಬೆಳಕನ್ನು ನೋಡಲು ಆಗುವುದಿಲ್ಲ, ಕಣ್ಣಿನಲ್ಲಿ ನೀರು ಬರುತ್ತದೆ. ಕೆಲವೊಮ್ಮೆ ಎರಡೂ ಕಣ್ಣಿನಲ್ಲಿ ಈ ರೀತಿಯ ಲಕ್ಷಣಗಳು ಕಾಣಿಸಬಹುದು. ಸೋಂಕಿನ ಪ್ರಮಾಣ ತೀರ ಜಾಸ್ತಿ ಇದ್ದಾಗ ಇಡಿಯ ಕಾರ್ನಿಯ ಬಿಳಿಯ ಬಣ್ಣಕ್ಕೆ ತಿರುಗಿ ದೃಷ್ಟಿ ಬಹಳಷ್ಟು ಕಡಿಮೆಯಾಗಬಹುದು.

**ಚಿಕಿತ್ಸೆ:** ಆರಂಭದಲ್ಲಿ ಸೂಕ್ತ ಔಷಧಿಗಳಿಂದ ಉತ್ತಮ ಗುಣ ಕಾಣಬಹುದು. ಹೀಗಾದಾಗ ಐಡಾಕ್ಸ್ ಯುರಿಡೀನ್ ಎಂಬ ಔಷಧ ಮತ್ತು ಏಸೈಕ್ಲೋವಿಕ್ ಎಂಬ ಔಷಧಿಗಳನ್ನು ಸೂಕ್ತ ಪ್ರಮಾಣದಲ್ಲಿ ಕಣ್ಣಿಗೆ ಹಾಕಬೇಕು.

೩. **ಶಿಲೀಂಧ್ರಗಳಿಂದ ಉಂಟಾಗುವ ಹುಣ್ಣು:** ಈ ರೀತಿಯ ಹುಣ್ಣು ರೈತರಲ್ಲಿ, ಮಣ್ಣಿನಲ್ಲಿ ಕೆಲಸ ಮಾಡುವವರಲ್ಲಿ ಉಂಟಾಗುವ ಸಂಭವ ಹೆಚ್ಚು. ಆರಂಭಿಕ ಹಂತದಲ್ಲೆ ಈ ಹುಣ್ಣಿಗೆ ಚಿಕಿತ್ಸೆ ಮಾಡುವುದು ಒಳ್ಳೆಯದು. ಇಲ್ಲದಿದ್ದರೆ ಇಡಿಯ ಕಾರ್ನಿಯದ ತುಂಬ ಹುಣ್ಣು ವ್ಯಾಪಿಸಿ ಚಿಕಿತ್ಸೆ ಮಾಡುವುದೇ ಕಷ್ಟವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಕ್ಲಿಷ್ಟವಾದ ಕಣ್ಣಿನ ಕಸಿ ಶಸ್ತ್ರಕ್ರಿಯೆ ಮಾಡುವ ಅನಿವಾರ್ಯತೆ ಒದಗುತ್ತದೆ.

ಒಟ್ಟಿನಲ್ಲಿ ಕಾರ್ನಿಯದ ಮೇಲಿನ ಹುಣ್ಣು ಪ್ರಾರಂಭಿಕ ಹಂತದಲ್ಲಿ ಚಿಕಿತ್ಸೆಗೊಳಪಟ್ಟರೆ ಸಣ್ಣ ಗಾಯ ಉಳಿಯಬಹುದು. ಆದರೆ ಮುಂದುವರಿದ ಹಂತದಲ್ಲಿಯಾದರೆ ಕಾರ್ನಿಯದ ಬಹಳಷ್ಟು ಭಾಗ ಬೆಳಕನ್ನು ಒಳಸಾಗಿಸುವ ಗುಣವನ್ನು ಕಳೆದುಕೊಳ್ಳುವುದರಿಂದ ಆಂಶಿಕ ಅಥವಾ ಪೂರ್ಣ ಪ್ರಮಾಣದ ಅಂಧತ್ವ ಉಂಟಾಗುತ್ತದೆ.

## ಕಣ್ಣಿನ ಪೊರೆ

ಕಣ್ಣಿನ ಪೊರೆ ಸಾಮಾನ್ಯವಾಗಿ ೬೦ ವರ್ಷಗಳ ನಂತರ ಬರುವ ಒಂದು ಕಾಯಿಲೆ. ಇದರಲ್ಲಿ ಸಾಮಾನ್ಯವಾಗಿ ಪಾರದರ್ಶಕವಾಗಿರುವ ನೈಸರ್ಗಿಕ ಮಸೂರ ನಿಧಾನವಾಗಿ ಅಪಾರದರ್ಶಕವಾಗುತ್ತ ಬರುತ್ತದೆ. ಅಂದರೆ ಮಸೂರದ ಒಳಗೆ ಸಾಗುವ ಬೆಳಕಿನ, ಪ್ರಮಾಣ ಕಡಿಮೆಯಾಗಿ ಅಕ್ಷಿಪಟಲದ ಮೇಲೆ ಮೂಡುವ ಪ್ರತಿಬಿಂಬ ಅಸ್ಪಷ್ಟವಾಗತೊಡಗುತ್ತದೆ. ನಿಧಾನವಾಗಿ ಬೆಳೆಯುತ್ತ ಹೋಗುವ ಈ ಪೊರೆ ಪೂರ್ಣ ಪ್ರಮಾಣದಲ್ಲಿ ಬೆಳೆದಾಗ ಏನೂ ಕಾಣದಂತಹ ಸ್ಥಿತಿ ಉಂಟಾಗುತ್ತದೆ.



• ಗ್ಲೋಕೋಮಾದಿಂದ ಕಣ್ಣಿನ ದೃಷ್ಟಿಯ ನರ ಹಾಳಾಗಿರುವುದು

ಪೊರೆ ಬರಲು ಪ್ರಾರಂಭವಾದಾಗ ರೋಗಿ ಕಣ್ಣಿನ ಮುಂದೆ ಕಪ್ಪು ಚುಕ್ಕೆಗಳು ಕಾಣುತ್ತವೆ ಎನ್ನುಬಹುದು. ಕೆಲವೊಮ್ಮೆ ಒಂದು ವಸ್ತು ಎರಡೋ 'ಮೂರೋ ಅಥವಾ ಇನ್ನೂ ಹೆಚ್ಚಿನ ಸಂಖ್ಯೆಯಲ್ಲೋ ಕಾಣಬಹುದು. ಅದಕ್ಕೆ ಕಾರಣ ಎಂದರೆ ಪೊರೆ ಬರಲು ಆರಂಭವಾದ ನಂತರ ಮಸೂರದ ಬೇರೆ ಬೇರೆ ಭಾಗಗಳು ಅನಿಯಮಿತವಾಗಿ ಕಿರಣಗಳನ್ನು ವಕ್ರೀಭವಿಸುವುದರಿಂದ ಒಂದಕ್ಕಿಂತ ಹಲವು ಪ್ರತಿಬಿಂಬಗಳು ಉಂಟಾಗುವುದು ಸಾಧ್ಯ. ಕೆಲವೊಮ್ಮೆ ವ್ಯಕ್ತಿಯು ಬೆಳಕನ್ನು ನೋಡುವಾಗ ಬೆಳಕಿನ ಸುತ್ತ ಬಣ್ಣ ಬಣ್ಣದ ವರ್ತುಲಗಳು ಕಾಮನ ಬಿಲ್ಲಿನಂತೆ ಕಾಣಬಹುದು. ಮತ್ತು ಕೆಲವೊಮ್ಮೆ ಉಳಿದೆಲ್ಲ ಬಣ್ಣಗಳಿಗಿಂತ ಯಾವುದೋ ಒಂದು ಬಣ್ಣ (ಉದಾ: ಕೆಂಪು) ಎದ್ದು ಕಾಣಬಹುದು.

ನಿಧಾನವಾಗಿ ಪೊರೆ ಬೆಳೆಯುತ್ತ ಬಂದಂತೆ ದೂರ ದೃಷ್ಟಿ ಕಡಿಮೆಯಾಗುತ್ತಾ ಬರುತ್ತದೆ. ಆದರೆ ಸಮೀಪದ ದೃಷ್ಟಿ ಸ್ಪಷ್ಟವಾಗಿಯೇ ಇರುತ್ತದೆ. ಅಲ್ಲಿಯವರೆಗೆ ಓದಲಾಗಲಿ ಬರೆಯಲಾಗಲಿ ಅಥವಾ ಕಣ್ಣಿಗೆ ಹತ್ತಿರವಾದ ಇನ್ನಾವುದೇ ಕೆಲಸ ಮಾಡಲಾಗಲಿ ಕನ್ನಡಕ ಬಳಸುತ್ತಿದ್ದ ವ್ಯಕ್ತಿಗೆ ಕ್ರಮೇಣ ಕನ್ನಡಕವಿಲ್ಲದೆ ಆ ವಸ್ತುಗಳು ಸ್ಪಷ್ಟವಾಗಿ ಕಾಣತೊಡಗುತ್ತವೆ. ಇಂಥವರಲ್ಲಿ ಬಹಳಷ್ಟು ಜನ ಇನ್ನು ತಮಗೆ ಚಾಳೀಸ್ ಅಥವಾ ಕನ್ನಡಕ ಹಾಕಬೇಕಾದ ಪ್ರಮೇಯವಿಲ್ಲ; ತಾನಾಗಿಯೇ ದೃಷ್ಟಿ ಸುಧಾರಿಸಿತು ಎಂಬ ಸಂತೋಷದಲ್ಲಿರುತ್ತಾರೆ. ಆದರೆ ವಸ್ತುತಃ ಕಣ್ಣಿನ ಪೊರೆ ಆರಂಭದ ಹಂತದಲ್ಲಿರುವುದರಿಂದ ಹೀಗಾಗಿದೆಯೆನ್ನುವುದು ಬಹುಜನರ ಗಮನಕ್ಕೆ ಬರುವುದೇ ಇಲ್ಲ.

ಕಣ್ಣಿನ ಮಸೂರದ ಬದಿಯ ಭಾಗದಿಂದ ಪೊರೆ ಬೆಳೆಯುತ್ತಾ ಬಂದರೆ ದೃಷ್ಟಿಯ ಸ್ಪಷ್ಟತೆ ಬಹಳ ನಿಧಾನವಾಗಿ ಕಡಿಮೆಯಾಗುತ್ತಾ ಬರುತ್ತದೆ. ಆದರೆ ಇದೇ ಪೊರೆ ಮಸೂರದ ಮಧ್ಯ

ಭಾಗದಲ್ಲಿಯೇ ಇದ್ದರೆ ದೃಷ್ಟಿ ಬಹಳ ಬೇಗ ಕಡಿಮೆಯಾಗುತ್ತದೆ.

## ಜಾಗತಿಕ ಸಮಸ್ಯೆ

ಪ್ರಪಂಚದಲ್ಲೆಲ್ಲಾ ಅಂಧತ್ವಕ್ಕೆ ಪ್ರಥಮ ಕಾರಣ ಎಂದರೆ ಕಣ್ಣಿನ ಪೊರೆ. ಆದರೆ ಈ ಅಂಧತ್ವವನ್ನು ಸೂಕ್ತ ಚಿಕಿತ್ಸೆಯಿಂದ ನಿವಾರಿಸಬಹುದು ಎನ್ನುವುದೇ ಒಂದು ಸಮಾಧಾನದ ಅಂಶ. ಪ್ರತಿ ವರ್ಷ ಜಗತ್ತಿನಲ್ಲಿ ೪೦ ಲಕ್ಷಕ್ಕೂ ಹೆಚ್ಚು ಜನರು ಈ ಕಾರಣದಿಂದ ಅಂಧತ್ವಕ್ಕೆ ಈಡಾಗುತ್ತಿದ್ದಾರೆ. ಭಾರತದಲ್ಲಿಯೂ ಈ ಸಮಸ್ಯೆ ಅಗಾಧವಾಗಿದೆ. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ೯೦ ಲಕ್ಷಕ್ಕೂ ಹೆಚ್ಚು ಜನ ಈ ಕಾರಣದಿಂದ ಅಂಧತ್ವ ಹೊಂದಿ ಶಸ್ತ್ರ ಚಿಕಿತ್ಸೆಗಾಗಿ ಕಾಯುತ್ತಿದ್ದಾರೆ. ಪ್ರತಿವರ್ಷ ೨೨ ಲಕ್ಷಕ್ಕೂ ಹೆಚ್ಚು ಶಸ್ತ್ರಕ್ರಿಯೆ ನಡೆಯಬೇಕಾದ ನಮ್ಮ ದೇಶದಲ್ಲಿ ೧೨ ಲಕ್ಷ ಶಸ್ತ್ರ ಕ್ರಿಯೆಗಳು ಮಾತ್ರ ಜರುಗುತ್ತವೆ. ಆಸ್ಪತ್ರೆ ಶುಶ್ರೂಷಾಗೃಹಗಳಲ್ಲಿ ಮಾತ್ರವಲ್ಲದೆ ಹಳ್ಳಿ ಪಟ್ಟಣ ಪ್ರದೇಶಗಳಲ್ಲಿ ನಡೆಯುತ್ತಿರುವ ನೇತ್ರ ಶಸ್ತ್ರಚಿಕಿತ್ಸಾ ಶಿಬಿರಗಳಲ್ಲೂ ಅಗಾಧ ಸಂಖ್ಯೆಯಲ್ಲಿ ಶಸ್ತ್ರಕ್ರಿಯೆ ನಡೆಯುತ್ತಿದೆ. ಆದರೂ ಈ ಪ್ರಯತ್ನ ಸಾಲದು. ಇದಕ್ಕೆ ಇರುವ ಕಾರಣಗಳು ಹಲವಾರು. ಸಾಮಾನ್ಯವಾಗಿ ಮುಂದುವರಿದ ದೇಶಗಳಲ್ಲಿ ೬೫-೭೦ ವರ್ಷಗಳ ನಂತರ ಬರುವ ಈ ಕಣ್ಣಿನ ಪೊರೆ ನಮ್ಮ ದೇಶದಲ್ಲಿ ಸರಾಸರಿ ೫೫ ವರ್ಷಕ್ಕೇ ಬರುತ್ತದೆ. ದುಡಿಯುವ ವಯಸ್ಸಿನಲ್ಲಿಯೇ ಈ ಕಾಯಿಲೆ ಬರುವುದರಿಂದ ಅಂತಹ ವ್ಯಕ್ತಿಗಳಿಗೆ ವೈಯಕ್ತಿಕವಾಗಿ ಬಹಳ ಹಾನಿಯಾಗುತ್ತದೆ. ನಮ್ಮ ದೇಶದ ಶೇಕಡಾ ೮೦ರಷ್ಟಿರುವ ಹಳ್ಳಿಯ ಜನತೆಗೆ ಸರಿಯಾದ ವೈದ್ಯಕೀಯ ಸೌಲಭ್ಯಗಳು ಸಿಗುವುದಿಲ್ಲ. ಅಲ್ಲದೆ ಬಹುಪಾಲು ಹಳ್ಳಿಯ ಜನ ಕಣ್ಣಿನ ಪೊರೆಯ ಚಿಕಿತ್ಸೆಗಾಗಿ ಹೆಚ್ಚಿನ ದೂರ ಕ್ರಮಿಸಿ ಪಟ್ಟಣದ ಅಥವಾ ನಗರದ ಆಸ್ಪತ್ರೆಗಳಿಗೆ ಬರುವ ಸ್ಥಿತಿಯಲ್ಲಿರುವುದಿಲ್ಲ. ಅಂಥವರು ಶುಶ್ರೂಷಾ ಗೃಹಗಳಲ್ಲಿದ್ದುಕೊಂಡು ಆ ಚಿಕಿತ್ಸೆಗೆ ತಗಲುವ ವೆಚ್ಚ ಭರಿಸುವ ಸ್ಥಿತಿಯಲ್ಲಿಯೂ ಇರುವುದಿಲ್ಲ. ಹಾಗಾಗಿ ಹಳ್ಳಿಗಳಲ್ಲಿ ಮತ್ತು



• ಕಾರ್ನಿಯದ ಮೇಲಿನ ಹುಣ್ಣು

ಸಣ್ಣ ಪಟ್ಟಣಗಳಲ್ಲಿ ರೋಟರಿ, ಲಯನ್ಸ್, ಜೇಸೀಸ್‌ನಂತಹ ವಿವಿಧ ಸೇವಾ ಸಂಸ್ಥೆಗಳು ನಡೆಸುವ ನೇತ್ರ ಶಸ್ತ್ರಕ್ರಿಯೆಯ ಶಿಬಿರಗಳ ಮಹತ್ವ ಹೆಚ್ಚಿದೆ. ಈಗ ನಡೆಯುತ್ತಿರುವುದಕ್ಕಿಂತ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಈ ರೀತಿಯ ಶಿಬಿರಗಳು ನಡೆಯಬೇಕು. ಕೆಲವೊಮ್ಮೆ ನಕಲಿ ವೈದ್ಯರುಗಳೂ ಹಲವಾರು ಕಾರಣಗಳಿಗಾಗಿ ಈ ರೀತಿಯ ಶಸ್ತ್ರಕ್ರಿಯೆಯ ಶಿಬಿರಗಳನ್ನು ನಡೆಸಿ ಜನರನ್ನು ವಂಚಿಸಿ ಕಣ್ಣುಗಳನ್ನು ಹಾಳು ಮಾಡಿದ ಉದಾಹರಣೆಗಳೂ ಇವೆ. ಹಾಗಾಗಿ ಜನತೆ ಈ ಬಗ್ಗೆ ಎಚ್ಚರ ವಹಿಸಬೇಕು.

## ಮಕ್ಕಳಲ್ಲಿ ಕಣ್ಣಿನ ಪೊರೆ

ಹುಟ್ಟುವಾಗಲೇ ಮಗುವಿನ ಕಣ್ಣಿಗೆ ಪೊರೆ ಬಂದಿರಬಹುದು. ಅಥವಾ ಹುಟ್ಟಿ ಕೆಲವು ವರ್ಷ ಏನೂ ತೊಂದರೆಯಿಲ್ಲದೇ ಇದ್ದು ನಂತರ ಪೊರೆ ಬಂದಿರಬಹುದು. ಮಕ್ಕಳಿಗೆ ಕಣ್ಣಿನ ಪೊರೆಯು ಹೆಚ್ಚಿನ ಸಂದರ್ಭಗಳಲ್ಲಿ ಯಾವುದೇ ಕಾಯಿಲೆ, ರೋಗ ಅಥವಾ ಬೇರೆ ಕಾರಣದಿಂದ ಬರುತ್ತದೆ. ಅನುವಂಶಿಕ ಕಾರಣದಿಂದಾಗಿ ಪೊರೆ ಬಂದಿರಬಹುದು ಅಥವಾ ಜನ್ಮತಃ ಊನ ಅಥವಾ ಕಾಯಿಲೆಯೊಡನೆ ಮಗುವೂ ಜನಿಸಿದಾಗ ಅದರೊಡನೆ ಕಣ್ಣಿನ ಪೊರೆಯೂ ಬಂದಿರಬಹುದು. ಅಲ್ಲದೆ ತಾಯಿಯಲ್ಲಿ ಇರುವ ಕೆಲವು ಆಹಾರ ಅಂಶಗಳು ಮತ್ತು ಜೀವ ಸತ್ವಗಳ ಕೊರತೆ ಅಥವಾ ತಾಯಿಯ ಗರ್ಭದಲ್ಲಿ ಆದ ಸೋಂಕು ಹೀಗೆ ಯಾವುದೇ ಕಾರಣದಿಂದ ಮಗುವಿನ ಕಣ್ಣಿಗೆ ಪೊರೆ ಬರಬಹುದು. ಶಸ್ತ್ರಕ್ರಿಯೆಯಿಂದ ಪೊರೆಯನ್ನು ತೆಗೆದುಹಾಕುವುದೊಂದೇ ಇದಕ್ಕಿರುವ ದಾರಿ. ಹೀಗೆ ಸೂಕ್ತ ಸಮಯದಲ್ಲಿ ಚಿಕಿತ್ಸೆ ಕೈಗೊಳ್ಳದಿದ್ದರೆ ಮಗುವು ಅಂಧವಾಗುವುದರಿಂದ (ಎರಡೂ ಕಣ್ಣಿನಲ್ಲಿ ಕಾಯಿಲೆ ಇದ್ದರೆ) ವಿವಿಧ ಸಮಸ್ಯೆಗಳು, ತೊಂದರೆಗಳು ಎದುರಾಗುವುದು ಸಹಜ. ಒಂದೇ ಕಣ್ಣಿನಲ್ಲಿ ಪೊರೆ ಇದ್ದಾಗ ಚಿಕಿತ್ಸೆ ಮಾಡದಿದ್ದರೆ ಮೆಳ್ಳಗಣ್ಣು ಆಗಬಹುದು. ಅಲ್ಲದೆ ಕೆಲವೊಮ್ಮೆ ಕಣ್ಣಿನ ವಿವಿಧ ಕಾಯಿಲೆಗಳಿಂದ ಅಥವಾ ದೈಹಿಕ ಕಾಯಿಲೆಗಳ ಕಾರಣದಿಂದಲೂ ಕಣ್ಣಿಗೆ ಪೊರೆ ಬರಬಹುದು. ಉದಾ: ಕಣ್ಣಿನ ಕಾಯಿಲೆ ತಾರಕೆ ಸುತ್ತಿ ನುರಿತ (ಐರಿಡೋ ಸೈಕ್ಲೈಟಿಸ್) ಕಣ್ಣಿನ ಪೊರೆಗೆ ಕಾರಣವಾಗಬಹುದು. ಅಂತೆಯೇ ಸಿಹಿ ಮೂತ್ರ ರೋಗ ಮತ್ತು ಟಿಟನಿ ಕಾಯಿಲೆಗಳಲ್ಲಿ ಕಣ್ಣಿಗೆ ಪೊರೆ ಬರಬಹುದು. ಅಲ್ಲದೆ ಕಣ್ಣಿಗೆ ಹೊಡೆತ ಬಿದ್ದಾಗ ಪೊರೆಯುಂಟಾಗಬಹುದು. ಅಥವಾ ಬಹಳ ಕಾಲ



### ಡಾ. ಎಸ್.ಎಚ್. ಮೋಹನ

ಡಾ. ಎಸ್.ಎಚ್. ಮೋಹನ ಅವರು 'ಕಸ್ತೂರಿ'ಯ ಓದುಗರಿಗೆ ಅಪರಿಚಿತ ರೇನಲ್ಲ. ವೈದ್ಯಕೀಯಕ್ಕೆ ಸಂಬಂಧಿಸಿದ ಹಾಗೆ ಅವರು ಬರೆದ ಸುಮಾರು ೧೫೦ ಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಎರಡು ಪುಸ್ತಕಗಳು ಈಗಾಗಲೇ ಬೆಳಕು ಕಂಡಿವೆ. ಮೂರನೆಯ ಪುಸ್ತಕ ಇಷ್ಟರಲ್ಲೇ ಪ್ರಕಟವಾಗಲಿದೆ. ಈಗ ಅವರು ಸಾಗರದಲ್ಲಿ ಖಾಸಗಿ ವೈದ್ಯ ವೃತ್ತಿಯಲ್ಲಿದ್ದಾರೆ.

ಉಪಯೋಗಿಸುವ ಸ್ಟಿರಾಯ್ಡ್‌ನಂತಹ ಔಷಧಿಯೂ ಪೊರೆ ಬರಲು ಕಾರಣವಾಗಬಹುದು.

ಕಾರಣ ಏನೇ ಇರಲಿ, ಕಣ್ಣಿನ ಪೊರೆಯನ್ನು ನಿವಾರಿಸಬೇಕೆಂದರೆ ಶಸ್ತ್ರ ಕ್ರಿಯೆಯೊಂದೇ ಮಾರ್ಗ. ತೀರಾ ಆರಂಭದ ಹಂತದಲ್ಲಿ ಸೂಕ್ತ ಕನ್ನಡಕ ಹಾಕುವುದರಿಂದ ದೃಷ್ಟಿಯ ತೊಂದರೆಯನ್ನು ನಿವಾರಿಸಿಕೊಳ್ಳಬಹುದು. ಮಸೂರದ ಮಧ್ಯ ಭಾಗದಲ್ಲಿ ಮಾತ್ರ ಪೊರೆ ಬೆಳೆಯುತ್ತಿರುವವರಲ್ಲಿ ಕಣ್ಣಿನ ಪಾಪೆ ದೊಡ್ಡದು ಮಾಡುವ ಔಷಧಿಗಳಿಂದ ತಾತ್ಕಾಲಿಕವಾಗಿ ದೃಷ್ಟಿಯನ್ನು ಹೆಚ್ಚಿಸಬಹುದು. ಇವೆಲ್ಲ ಆರಂಭದ ಹಂತದಲ್ಲಿ ಮಾಡಬಹುದಾದ ಚಿಕಿತ್ಸೆಗಳಾದರೆ ಪೊರೆ ಪೂರ್ಣ ಬೆಳೆದ ನಂತರ ಶಸ್ತ್ರಕ್ರಿಯೆ ಅನಿವಾರ್ಯ. ಇಲ್ಲಿಯವರೆಗೆ ಶಸ್ತ್ರಕ್ರಿಯೆಯಲ್ಲಿ ಪೊರೆ ಬಂದ ನೈಸರ್ಗಿಕ ಮಸೂರವನ್ನು ಮಾತ್ರ ತೆಗೆಯಲಾಗುತ್ತಿತ್ತು. ಹೀಗೆ ಮಸೂರವನ್ನು ತೆಗೆಯುವುದರಿಂದ ಉಂಟಾದ ದೃಷ್ಟಿಮಾಂದ್ಯವನ್ನು ನಿವಾರಿಸಲು ಪೀನ ಮಸೂರವನ್ನು ದಪ್ಪ ಕನ್ನಡಕದ ರೂಪದಲ್ಲಿ ಕೊಡಲಾಗುತ್ತಿತ್ತು. ಆದರೆ ಈಗೀಗ ಶಸ್ತ್ರ ಕ್ರಿಯೆಯ ಸುಧಾರಿತ ಕ್ರಮವಾಗಿ ನೈಸರ್ಗಿಕ ಮಸೂರವನ್ನು ತೆಗೆದ ನಂತರ ಅದೇ ಸ್ಥಳದಲ್ಲಿ ಕೃತಕ ಪ್ಲಾಸ್ಟಿಕ್ ಮಸೂರವನ್ನು ಅಳವಡಿಸುವ ಪದ್ಧತಿ ಜನಪ್ರಿಯವಾಗುತ್ತಿದೆ. ದಪ್ಪ ಕನ್ನಡಕದ ಅನೇಕ ತೊಂದರೆಗಳು ಇದರಿಂದ ನಿವಾರಿಸಲ್ಪಡುವುದರಿಂದ ಹೆಚ್ಚು ಹೆಚ್ಚು ಜನರು ಇದನ್ನು ಬಯಸುತ್ತಿದ್ದಾರೆ.

## ಕಣ್ಣಿನ ಒತ್ತಡದ ಹೆಚ್ಚಳ-ಗ್ಲೊಕೊಮಾ

ಗ್ಲೊಕೊಮಾ ಕಣ್ಣಿನ ಒಂದು ಗಂಭೀರವಾದ ಕಾಯಿಲೆ. ಸ್ಥೂಲವಾಗಿ ಹೇಳುವುದಾದರೆ ಈ ವ್ಯಾಧಿಯಲ್ಲಿ ಕಣ್ಣಿನ ಆಂತರಿಕ ಒತ್ತಡ ಹೆಚ್ಚಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಈ ಕಾಯಿಲೆ ಇರುವುದು ಗೊತ್ತಾಗುವ ವೇಳೆಗಾಗಲೆ ಕಣ್ಣಿನ ನರವಾದ ಆಪ್ಟಿಕ್ ನರಕ್ಕೆ ಬಹಳಷ್ಟು ಧಕ್ಕೆ ತಟ್ಟಿರುತ್ತದೆ. ಹೀಗೆ ಹಾಳಾದ ಆಪ್ಟಿಕ್ ನರವನ್ನು ಪುನಶ್ಚೇತನಗೊಳಿಸಲು ಸಾಧ್ಯವಿಲ್ಲ. ಆದ್ದರಿಂದ ಈ ಕಾಯಿಲೆಯಿಂದ ನಾಶವಾದ ದೃಷ್ಟಿ ಮತ್ತೆ ಬರುವ ಸಾಧ್ಯತೆ ಇಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ನೋವು ವೇದನೆ ಇಲ್ಲದಿರುವುದರಿಂದ ರೋಗಿ ಕಣ್ಣಿನ ಪೊರೆ ಎಂದು ತಿಳಿದು ವೈದ್ಯರಲ್ಲಿ ಬರುವುದನ್ನು ಮುಂದೆ ಹಾಕುತ್ತಾನೆ.

ನಮ್ಮ ದೇಶದಲ್ಲಿ ಗ್ಲೊಕೊಮಾದ ಸಮಸ್ಯೆ ಹೆಚ್ಚಿರಲು ಮುಖ್ಯ ಕಾರಣ ಬಡತನ, ಅಜ್ಞಾನ ಮತ್ತು ಆರೋಗ್ಯ ಪಾಲನೆಯ ಅಸಮರ್ಪಕ ವ್ಯವಸ್ಥೆ. ಒಂದು ಅಂದಾಜಿನ ಪ್ರಕಾರ ಕಣ್ಣಿನ ಆಸ್ಪತ್ರೆಗೆ ಬರುವ ಪ್ರತಿ ಹತ್ತು ಜನರಲ್ಲಿ ಒಬ್ಬನಿಗೆ ಗ್ಲೊಕೊಮಾ ಇದೆ. ಮತ್ತು ನೂರರಲ್ಲಿ ಒಬ್ಬ. ಈ ಕಾಯಿಲೆಯಿಂದ ಸಂಪೂರ್ಣವಾಗಿ ದೃಷ್ಟಿಯನ್ನು ಕಳೆದುಕೊಳ್ಳುತ್ತಾನೆ. ನಮ್ಮ ದೇಶದ ವಿವಿಧ ಭಾಗಗಳಲ್ಲಿ ಕೈಗೊಂಡ ಸಮೀಕ್ಷೆಯ ಪ್ರಕಾರ ಗ್ಲೊಕೊಮಾವು ಶೇಕಡಾ ೧೪ ರಿಂದ ೨೫ ಸಂದರ್ಭಗಳಲ್ಲಿ ಕಾರಣವಾಗಿರುತ್ತದೆ. ಆದರೆ ಮುಂದುವರಿದ ದೇಶಗಳಾದ ಅಮೆರಿಕ, ಇಂಗ್ಲೆಂಡ್‌ಗಳಲ್ಲಿ ಈ ಪ್ರಮಾಣ ಶೇಕಡ ೧೨ ರಿಂದ ೧೮ ಮಾತ್ರ.

ದೇಹದಲ್ಲಿ ರಕ್ತದ ಒತ್ತಡ ಇರುವಹಾಗೆಯೆ ಕಣ್ಣಿಗೂ ಒಂದೂ ನಿರ್ದಿಷ್ಟ ಒತ್ತಡವಿರುತ್ತದೆ. ಸಾಮಾನ್ಯವಾಗಿ ಕಣ್ಣಿನ ಒತ್ತಡ ೧೦ ರಿಂದ ೨೦ ಮಿ.ಮೀ. (ಪಾದರಸ) ಇರುತ್ತದೆ. ಈ ಅಂಕಿಗಿಂತ ಒತ್ತಡ ಹೆಚ್ಚಾದಾಗ ಗ್ಲೊಕೊಮಾ ಇರಬಹುದೆ ಎಂದು ನೇತ್ರ ವೈದ್ಯರು ಅನುಮಾನಿಸಬಹುದು. ಕಣ್ಣಿನ ಒತ್ತಡವನ್ನು ಒತ್ತಡ ಮಾಪಕ ಯಂತ್ರದಿಂದ ಅಳೆಯಲಾಗುತ್ತದೆ.

ಗ್ಲೊಕೊಮಾದಲ್ಲಿ ಮುಖ್ಯವಾಗಿ ೧. ತೆರೆದ ಕೋನದ ಗ್ಲೊಕೊಮಾ ೨. ಸಂಕುಚಿತ ಕೋನದ ಗ್ಲೊಕೊಮಾ ೩. ಹುಟ್ಟಿನಿಂದ ಬಂದ ಗ್ಲೊಕೊಮಾ ಎಂದು ಮೂರು ವಿಧ.

## ತೆರೆದ ಕೋನದ ಗ್ಲೊಕೊಮಾ

ಸಾಮಾನ್ಯವಾಗಿ ಹೆಂಗಸರು, ಗಂಡಸರು ಎಂಬ ಭೇದವಿಲ್ಲದೆ ಇಬ್ಬರಲ್ಲಿಯೂ ಅಷ್ಟೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುವ ಗ್ಲೊಕೊಮಾ ೬೦ ರಿಂದ ೭೦ ವರ್ಷಗಳ ಅವಧಿಯಲ್ಲಿ

ಬರುವ ಸಂಭವ ಹೆಚ್ಚು. ನಮ್ಮ ದೇಶದಲ್ಲಿ ಬೇರೆ ಎಲ್ಲಾ ವಿಧಗಳ ಗ್ಲೊಕೊಮಾಗಳಿಗಿಂತ ಈ ವಿಧದ ಗ್ಲೊಕೊಮಾ ಹೆಚ್ಚಿನವರಲ್ಲಿ ಕಾಣಿಸಿಕೊಳ್ಳುತ್ತದೆ. ಹೆಚ್ಚಿನ ಯಾವ ಲಕ್ಷಣಗಳೂ ಇಲ್ಲದೆ ಇದು ಕಾಣಿಸಿಕೊಳ್ಳುವುದರಿಂದ ರೋಗವಿದೆಯೆಂದು ಗೊತ್ತಾಗುವ ಸಮಯಕ್ಕೆ ಅದು ಆಪ್ಟಿಕ್ ನರಕ್ಕೆ ಬಹಳಷ್ಟು ಹಾನಿಯನ್ನುಂಟುಮಾಡಿರುತ್ತದೆ. ರೋಗಿಯು ಮುಖ್ಯವಾಗಿ ಅನುಭವಿಸುವ ಲಕ್ಷಣಗಳೆಂದರೆ ಕಣ್ಣು ಮಂಜಾಗುವುದು. ಕಣ್ಣಿಗೆ ಹತ್ತಿರದ ಕೆಲಸ ಮಾಡಲು ಕಷ್ಟವಾಗಬಹುದು, ಪದೇ ಪದೇ ಕನ್ನಡಕವನ್ನು ಬದಲಾಯಿಸುವ ಪ್ರಸಂಗ ಬರುವುದು ಮತ್ತು ದೃಷ್ಟಿಯ ಕ್ಷೇತ್ರದಲ್ಲಿ ಆಗುವ ವ್ಯತ್ಯಾಸಗಳು. ಒಟ್ಟಿನ ಮೇಲೆ ಹೇಳುವುದಾದರೆ ಈ ರೀತಿಯ ಗ್ಲೊಕೊಮಾ ಇರುವುದು ಗಮನಕ್ಕೆ ಬರುವ ಮೊದಲೆ ಹೆಚ್ಚಿನ ಸಂದರ್ಭಗಳಲ್ಲಿ ಒಂದು ಕಣ್ಣಿನ ನರ ಭಾಗಶಃ ಅಥವಾ ಸಂಪೂರ್ಣ ನಾಶವಾಗಿರುವುದಲ್ಲದೆ ಮತ್ತೊಂದು ಕಣ್ಣಿನಲ್ಲಿಯೂ ಸ್ವಲ್ಪ ಪ್ರಮಾಣದ ನಾಶ ಉಂಟಾಗಿರುತ್ತದೆ. ತಡವಾಗಿ ಗೊತ್ತಾಗಲು ಇನ್ನೊಂದು ಕಾರಣವೇನೆಂದರೆ ರೋಗಿಯ ದೃಷ್ಟಿಯ ಮಧ್ಯಭಾಗದ ಕ್ಷೇತ್ರವು, ನರ ಸಂಪೂರ್ಣ ನಾಶವಾಗುವವರೆಗೂ ಉಳಿದಿರುವುದರಿಂದ ಈ ಬಗೆಯ ಗ್ಲೊಕೊಮಾ ಇದ್ದುದ್ದು ಬೇಗನೆ ಗೊತ್ತಾಗುವುದಿಲ್ಲ. ಆದ್ದರಿಂದ ಈ ರೀತಿಯ ಗ್ಲೊಕೊಮಾ ಆದಷ್ಟು ಬೇಗ ಪತ್ತೆ ಹಚ್ಚಲ್ಪಡಬೇಕು... ರೋಗ ಪತ್ತೆ ಹಚ್ಚಲು ಸಹಾಯಕವಾಗುವ ಮುಖ್ಯ ಅಂಶಗಳು ಇವು. ೧. ಕಣ್ಣಿನ ಒಳಗಿನ ಒತ್ತಡ. ೨. ಆಪ್ಟಿಕ್ ಚಕ್ರದ ಬದಲಾವಣೆಗಳು. ೩. ದೃಷ್ಟಿಯ ಕ್ಷೇತ್ರದ ವ್ಯತ್ಯಾಸಗಳು- ವಿವಿಧ ರೀತಿಯ ಕಾಣದಿರುವ ಜಾಗಗಳು ದೃಷ್ಟಿಯ ಕ್ಷೇತ್ರದಲ್ಲಿ ಕಾಣಿಸಿಕೊಳ್ಳಬಹುದು. (ಅಂದರೆ ಕಣ್ಣಿನ ನರದ ಯಾವುದೋ ಒಂದು ನಿರ್ದಿಷ್ಟವಾದ ಭಾಗ ದೃಷ್ಟಿ ನಾಶಹೊಂದಿದೆ ಎಂದರ್ಥ) ಆಪ್ಟಿಕ್ ನರದಿಂದ ಉಂಟಾದ ಎಲ್ಲರಲ್ಲಿಯೂ ಇರುವ ಕಾಣದಿರುವ ಜಾಗವು ವಿಸ್ತಾರವಾಗುವುದು. ದೃಷ್ಟಿಯ ಕ್ಷೇತ್ರದ ಪ್ರಮಾಣ ಕ್ರಮೇಣ ಕಿರಿದಾಗುತ್ತ ಬರುವುದು.

ಇಲ್ಲಿ ಒತ್ತಡ ಯಾವ ಕಾರಣದಿಂದ ಹೆಚ್ಚಾಗುತ್ತದೆ ಎಂಬುದು ನಿರ್ದಿಷ್ಟವಾಗಿ ಗೊತ್ತಾಗಿಲ್ಲ. ಬಹುಶಃ ಏಕ್ವಿಯಸ್ ದ್ರವವು ಹೊರಹೋಗಿ ರಕ್ತಕ್ಕೆ ಹೀರಲ್ಪಡುವ ಮೊದಲು ಅದು ಹೊರ ಹೋಗುವ ಭಾಗದಲ್ಲಿ ಕಂಡು ಬರುವ ವಿರೋಧದಿಂದ ಒತ್ತಡ ಹೆಚ್ಚಾಗುತ್ತದೆ ಎಂದು ನಂಬಲಾಗಿದೆ.

ಔಷಧಗಳಾದ ಪೈಲೋಕಾರ್, ಎಪಿರಿನ್, ಟಿಮೋಲಾಲ್‌ಗಳನ್ನು ಉಪಯೋಗಿಸಬಹುದಾದರೂ ಇವುಗಳನ್ನು ಜೀವನ ಪರ್ಯಂತ ಉಪಯೋಗಿಸಬೇಕಾದ್ದರಿಂದ ವೆಚ್ಚದ ದೃಷ್ಟಿಯಿಂದ ಮತ್ತು ಅನುಕೂಲದ ದೃಷ್ಟಿಯಿಂದ ಶಸ್ತ್ರಕ್ರಿಯೆಯನ್ನು ಮಾಡಿ ಒತ್ತಡವನ್ನು ಕಡಿಮೆ ಮಾಡುವುದೇ ಸೂಕ್ತ.

## ಸಂಕುಚಿತ ಕೋನದ ಗ್ಲೊಕೊಮಾ

ಈ ರೀತಿಯ ಗ್ಲೊಕೊಮಾ ಹೆಚ್ಚಾಗಿ ಹೆಂಗಸರಲ್ಲಿ, ಮಾನಸಿಕ ಒತ್ತಡ ಜಾಸ್ತಿ ಇರುವವರಲ್ಲಿ ಹಾಗೂ ಹೆಚ್ಚು ಚಿಂತೆ ಮಾಡುವವರಲ್ಲಿ ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ೫೦ ರಿಂದ ೬೦ ವರ್ಷಗಳ ಮಧ್ಯದ ಅವಧಿಯಲ್ಲಿ ಕಾಣಿಸಿಕೊಳ್ಳುವ ಇದರಲ್ಲಿ ಮೊದಲು ಕಣ್ಣು ಸ್ವಲ್ಪ ಮಂಜಾಗುತ್ತದೆ. ಬೆಳಕಿನ ಸುತ್ತ ಬಣ್ಣ ಬಣ್ಣದ ಚಕ್ರಗಳು ಕಾಣಿಸುತ್ತವೆ. ಕೆಲವೊಮ್ಮೆ ತಲೆನೋವು ಬರುತ್ತದೆ ಎಂದು ಶುರುವಾಗಿ ನಂತರ ಒಂದು ದಿನ ಇದ್ದಕ್ಕಿದ್ದ ಹಾಗೇ ಕಣ್ಣಿನಲ್ಲಿ ವಿಪರೀತ ನೋವು ಕಾಣಿಸಿಕೊಳ್ಳುತ್ತದೆ. ಇದ್ದಕ್ಕಿದ್ದ ಹಾಗೆ ಕ್ಷಣಕಾಲ ಕಣ್ಣು ಕಾಣದ ಅನುಭವ. ರೋಗಿಯು ವೈದ್ಯರಲ್ಲಿ ಬರುವ ವೇಳೆಗೆ ಕಣ್ಣು ಕೆಂಪಾಗಿರುತ್ತದೆ. ಆಗ ಸರಿಯಾದ ಚಿಕಿತ್ಸೆ ಕೈಗೊಳ್ಳದಿದ್ದರೆ ಕಣ್ಣಿಗೆ ಸಂಪೂರ್ಣ ಅಂಧತ್ವ ಬರುವ ಸಾಧ್ಯತೆಯಿದೆ.

ಈ ರೀತಿಯ ಗ್ಲೊಕೊಮಾದಲ್ಲಿ ಏಕ್ವಿಯಸ್ ದ್ರವವು ಹಿಂಭಾಗದ ಗೂಡಿನ ಭಾಗದಿಂದ



• ಕಾರ್ನಿಯ ಛಿದ್ರಗೊಂಡಿರುವುದು

ಮುಂಭಾಗದ ಗೂಡಿನ ಭಾಗಕ್ಕೆ ಹೋಗುವ ಜಾಗದಲ್ಲಿ ಅಡಚಣೆ ಉಂಟಾಗುವುದೆ ಕಣ್ಣಿನಲ್ಲಿ ಒತ್ತಡ ಹೆಚ್ಚಾಗಲು ಕಾರಣ.

ಇದು ಉಂಟಾದಾಗ ಕೊನೆಯಲ್ಲಿ ಶಸ್ತ್ರಕ್ರಿಯೆಯೆ ಸರಿ. ಆದರೆ ಒತ್ತಡ ಹೆಚ್ಚಾಗಿದ್ದಾಗ ಅದನ್ನು ಕಡಿಮೆ ಮಾಡಲು ಪೈಲೊಕಾರ್ ಅಸಟಜೋಲಮೈಡ್ ಮಾತ್ರೆಗಳು, ಮ್ಯಾನಿಟಾಲ್ ಇಂಜೆಕ್ಷನ್ ಇತ್ಯಾದಿ ಕೊಡಲಾಗುತ್ತದೆ. ಶಸ್ತ್ರ ಕ್ರಿಯೆಯಿಂದ ಹಿಂಭಾಗದ ಮತ್ತು ಮುಂಭಾಗದ ಗೂಡುಗಳ ಮಧ್ಯೆ ಏಕ್ವಿಯಸ್ ದ್ರವವು ಚಲಿಸಲು ಹೊಸ ದಾರಿಯನ್ನು ಡಾಕ್ಟರರು ನಿರ್ಮಿಸುತ್ತಾರೆ.

## ಗೂಳಿ ಕಣ್ಣು

ಮಗು ಗರ್ಭಸ್ಥವಾಗಿದ್ದಾಗಲೆ ಕಣ್ಣಿನ ಮುಂಭಾಗದ ಗೂಡಿನ ಕೋನದ ಭಾಗದಲ್ಲಿ ಕೆಲವು ಅಂಗಾಂಶಗಳ ಕೊರತೆಯಿಂದ ಏಕ್ವಿಯಸ್ ದ್ರವದ ಚಾಲನೆಯಲ್ಲಿ ತೊಂದರೆ ಉಂಟಾಗಿ ಕಣ್ಣಿನಲ್ಲಿ ಒತ್ತಡ ಹೆಚ್ಚಾಗುತ್ತದೆ. ಹೆಚ್ಚಾದ ಒತ್ತಡ ಕಣ್ಣಿನ ಎಲ್ಲಾ ಭಾಗಗಳ ಮೇಲೆ ತನ್ನ ಪ್ರಭಾವ ಬೀರುವುದರಿಂದ ಮತ್ತು ಕಣ್ಣಿನ ಹೊರಗಿನ ಕವಚಗಳು ಬಹಳ ತೆಳುವಾಗಿರುವುದರಿಂದ ಆಗ ಇಡೀ ಕಣ್ಣೆ ದೊಡ್ಡದಾಗಿ ಮಗು ಗೂಳಿಗಣ್ಣಿನದಾಗಿ ಹುಟ್ಟುವುದು.

ಚಿಕಿತ್ಸೆ ಮಾಡುವುದು ಕಠಿಣ ಆದರೂ ಶಸ್ತ್ರ ಕ್ರಿಯೆಯ ಮೂಲಕ ಪ್ರಯತ್ನಿಸಬಹುದು. ಆದರೆ ಚಿಕಿತ್ಸೆ ಫಲಪ್ರದವಾಗಬೇಕಾದರೆ ದೃಷ್ಟಿಗೆ ಮಾರಕವಾದ ಗ್ಲೊಕೊಮಾವು ಅತೀ ಬೇಗ ಪತ್ತೆ ಹಚ್ಚಲ್ಪಡಬೇಕು. ಮತ್ತು ಚಿಕಿತ್ಸೆಯನ್ನು ತೀವ್ರವಾಗಿ ಕೈಗೊಳ್ಳಬೇಕು.

ಮೇಲಿನ ವಿಧಗಳಲ್ಲದೆ ಕಣ್ಣಿನ ವಿವಿಧ ಅಂಗಗಳು ಕ್ಷತಿಗ್ರಸ್ತವಾಗಿರುವ ಕಾರಣದಿಂದ ಅಥವಾ ದೈಹಿಕವಾಗಿ ಇರುವ ಕೆಲವು ಕಾಯಿಲೆಗಳ ಕಾರಣದಿಂದ ಗ್ಲೊಕೊಮಾ ಕಾಣಿಸಿಕೊಳ್ಳ ಬಹುದು. ಇದಕ್ಕೆಲ್ಲ ಪರಿಹಾರವೆಂದರೆ ಗ್ಲೊಕೊಮಾಕ್ಕೆ ಕಾರಣವಾಗುವ ಮೂಲ ಕಾಯಿಲೆಗಳನ್ನು ಕಂಡು ಹಿಡಿದು ಅದಕ್ಕೆ ಚಿಕಿತ್ಸೆ ಕೊಡುವುದು.

## ಸಿಹಿ ಮೂತ್ರ ರೋಗ ಮತ್ತು ಕಣ್ಣು

ಕಾಯಿಲೆಗಳಲ್ಲಿ 'ರಾಜ ಕಾಯಿಲೆ' ಎಂದು ಒಂದು ಕಾಲದಲ್ಲಿ ಬಣ್ಣಿಸಲ್ಪಡುತ್ತಿದ್ದ

ಮಧುಮೇಹ (ಸಿಹಿಮೂತ್ರ) ರೋಗ ಮುಖ್ಯವಾಗಿ ಪರಿಣಾಮ ಬೀರುವ ಅಂಗಗಳೆಂದರೆ ಮೂತ್ರಪಿಂಡ, ಕಣ್ಣು (ಕಣ್ಣಿನ ವಿವಿಧ ಕಾಯಿಲೆಗಳು) ದೇಹದ ವಿವಿಧ ಸಣ್ಣ ರಕ್ತನಾಳಗಳು, ಕಾಲು ಅಥವಾ ಕೈ (ಡಯಾಬಿಟಿಕ್ ಗ್ಯಾಂಗ್ರಿನ್)

ಕಣ್ಣಿನ ಮೇಲೆ ಮಧುಮೇಹದ ಮುಖ್ಯ ಪರಿಣಾಮಗಳೆಂದರೆ:

೧. ಮಧುಮೇಹ ಅಕ್ಷಿಪಟಲ ಅಥವಾ ಕಣ್ಣಾಲ ಬೇನೆ.

೨. ಮಧುಮೇಹದ ಮೋತಿ ಬಿಂದು ಅಥವಾ ಕಣ್ಪೊರೆ.

೩. ಸಮೀಪ ದೃಷ್ಟಿ ಅಥವಾ ದೃಷ್ಟಿ ದೋಷಗಳು.

೪. ಕಾಚೀ ರಸದಲ್ಲಿ ರಕ್ತ ಹೆಪ್ಪುಗಟ್ಟುವಿಕೆ.

೫. ಕಣ್ಣಿನ ಹೊರಗಿನ ಮಾಂಸಗಳ ಬಲಹೀನತೆ ಅಥವಾ ಲಕ್ವ.

೬. ಆಪ್ಟಿಕ್ ನರದುರಿತ.

೭. ಮಧುಮೇಹ ತಾರಕೆ ಸುತ್ತಿನುರಿತ.

**೧. ಮಧುಮೇಹ ಅಕ್ಷಿಪಟಲ ಬೇನೆ:** (Diabetic Retine opathy) ಸಾಮಾನ್ಯವಾಗಿ ವಯಸ್ಸಾದ ರೋಗಿಗಳಲ್ಲಿ ಕಾಣಿಸಿಕೊಳ್ಳುವ ಈ ರೋಗ ಚಿಕ್ಕ ವಯಸ್ಸಿನಲ್ಲಿ ಮಧುಮೇಹದಿಂದ ಬಳಲುವವರಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಮಧುಮೇಹ ಹತ್ತು ವರ್ಷಕ್ಕಿಂತ ಹಳೆಯದಾದಾಗ ಈ ತೊಂದರೆ ಕಾಣಿಸಿಕೊಳ್ಳುವ ಸಾಧ್ಯತೆ ಹೆಚ್ಚು. ಭಾರತದಲ್ಲಿ ಮೋತಿ ಬಿಂದು, ಗ್ಲೊಕೊಮಾ ರೋಗಗಳನ್ನು ಹೊರತುಪಡಿಸಿದರೆ ಅಂಧತ್ವಕ್ಕೆ ಹೆಚ್ಚಿನ ಕಾರಣ ಮಧುಮೇಹ ಕಣ್ಣಾಲ ಬೇನೆ. ವಿಶೇಷವಾಗಿ ಇದು ಎರಡೂ ಕಣ್ಣನ್ನು ಏಕ ಕಾಲದಲ್ಲಿ ಆವರಿಸುವುದರಿಂದ ಎಷ್ಟು ಬೇಗ ಈ ರೋಗಕ್ಕೆ ಚಿಕಿತ್ಸೆ ಮಾಡಲು ಸಾಧ್ಯವೋ ಅಷ್ಟು ಒಳ್ಳೆಯದು. ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ ಮಧುಮೇಹ ಕಾಯಿಲೆಯ ತೀವ್ರತೆಗೂ ಮತ್ತು ಅದರಿಂದ ಉಂಟಾಗುವ 'ರೆಟಿನೋಪಥಿ'ಗೂ ಸಂಬಂಧವಿಲ್ಲದೆ ಇರುವುದು. ಅಲ್ಲದೆ ವಿವಿಧ ಚಿಕಿತ್ಸಾ ಕ್ರಮಗಳಿಂದ ರೋಗವು ಸಂಪೂರ್ಣ ಹತೋಟಿಯಲ್ಲಿದ್ದರೂ 'ರೆಟಿನೋಪತಿ' ಕಾಣಿಸಿಕೊಳ್ಳಬಹುದು.

ಈ ರೋಗವು ಮುಖ್ಯವಾಗಿ ಅಕ್ಷಿಪಟಲದ ಸಣ್ಣ ರಕ್ತನಾಳಗಳಿಗೆ ತೊಂದರೆಯನ್ನುಂಟು ಮಾಡುತ್ತದೆ. ರಕ್ತಸ್ರಾವದಿಂದಾಗಿ ಅಕ್ಷಿಪಟಲದ ವಿವಿಧ ಭಾಗಗಳಲ್ಲಿ, ವಿಶೇಷವಾಗಿ ಮಚ್ಚೆಯ ಭಾಗದಲ್ಲಿ, ರಕ್ತ ಶೇಖರಗೊಳ್ಳುವುದರಿಂದ ದೃಷ್ಟಿ ಬಹಳ ಕ್ಷೀಣಿಸುತ್ತದೆ. ಈ ಸಂದರ್ಭದಲ್ಲಿ ಚಿಕಿತ್ಸೆ ಮಾಡದೆ ಬಿಟ್ಟರೆ ಅಕ್ಷಿಪಟಲದ ತಂತುಗೂಡಿಕೆಯಿಂದ ಅಕ್ಷಿಪಟಲದ ಕಳಚುವಿಕೆಯಂತಹ ಗಂಭೀರ ಪರಿಸ್ಥಿತಿಗೆ ಹೋಗಬಹುದು. ಇಲ್ಲದಿದ್ದರೆ ಕಾಚಿ ರಸದಲ್ಲಿ ರಕ್ತ ಹೆಪ್ಪುಗಟ್ಟಿ ಗ್ಲೊಕೊಮಾ ಕಾಯಿಲೆ ಮುಂದುವರೆದು ಭಾರೀ ನೋವು ಬರುವುದು. ಈ ನೋವು ಎಷ್ಟು ತೀವ್ರವಾಗಿರುತ್ತದೆಂದರೆ ನೋವನ್ನು ನಿವಾರಿಸಲು ಕೊನೆಗೆ ಶಸ್ತ್ರ ಕ್ರಿಯೆಯ ಮೂಲಕ ಇಡೀ ಕಣ್ಣನ್ನೇ ತೆಗೆಯುವ ಪ್ರಸಂಗವೂ ಅನಿವಾರ್ಯವಾಗಿ ಬರುತ್ತದೆ.

ಮಧುಮೇಹವನ್ನು ಹತೋಟಿಯಲ್ಲಿಡುವುದು, ಆಹಾರದಲ್ಲಿ ಕೊಬ್ಬಿನ ಪ್ರಮಾಣವನ್ನು ಮಿತಗೊಳಿಸುವುದು ಮತ್ತು ಸಸ್ಯಗಳಿಂದ ತಯಾರಾದ ಎಣ್ಣೆಯನ್ನು ಉಪಯೋಗಿಸುವುದು ಇದಕ್ಕೆ ಸರಿಯಾದ ಚಿಕಿತ್ಸೆ. ಯಶಸ್ವಿ ಚಿಕಿತ್ಸೆ ಎಂದರೆ ಲೇಸರ್ ಕಿರಣದಿಂದ ಅಕ್ಷಿಪಟಲದಲ್ಲಿ ಹೊಸ ರಕ್ತನಾಳವನ್ನು ಮುಚ್ಚಿಕೊಳ್ಳುವಂತೆ ಮಾಡುವುದು ಮತ್ತು ತನ್ಮೂಲಕ ರಕ್ತಸ್ರಾವವನ್ನು ಕಡಿಮೆ ಮಾಡುವುದು.

## ಲೇಸರ್ ಚಿಕಿತ್ಸೆ

ಅಕ್ಷಿಪಟಲದ ಹೊರ ಪ್ರದೇಶದಲ್ಲಿರುವ ಆಮ್ಲಜನಕ ಕಡಿಮೆ ಇರುವ (ಅನಾಕ್ಸಿಯಾ) ಭಾಗವನ್ನು ಸುಟ್ಟು, ಮಧ್ಯಭಾಗದ ಅಕ್ಷಿಪಟಲಕ್ಕೆ ಸರಿಯಾಗಿ ರಕ್ತದ ಪೂರೈಕೆಯಾಗುವಂತೆ

ನೋಡಿಕೊಳ್ಳುವುದು. ಅಲ್ಲದೆ ಇದು ಅಪಾಯಕಾರಿಯಾದ ಅಂದರೆ ಕಾಯಿಲೆಯಿಂದ ಉಂಟಾಗುವ ಹೊಸ ರಕ್ತನಾಳವನ್ನು ಮುಚ್ಚಿಕೊಳ್ಳುವಂತೆ ಮಾಡುತ್ತದೆ. ಈ ಹೊಸ ರಕ್ತನಾಳಗಳನ್ನು ಹಾಗೆಯೇ ಬಿಟ್ಟರೆ, ಕಣ್ಣಿನೊಳಗೆ ಅಧಿಕ ರಕ್ತಸ್ರಾವವಾಗಿ ಕೊನೆಯಲ್ಲಿ ಅತಿಬೇನೆಯ ಕುರುಡುಕಣ್ಣು ಉಂಟಾಗುವದು.

ಕಣ್ಪೊರೆಯಲ್ಲಿ ಎರಡು ವಿಧ: ೧. ನಿಧಾನವಾಗಿ ಬೆಳೆಯುವ ಸಾಧಾರಣವಾಗಿ ೬೦-೬೫ ವರ್ಷಗಳ ನಂತರ ಬರುವ ಮೋತಿಬಿಂದು ಕಾಯಿಲೆಯು ೪೦-೪೫ರ ಪ್ರಾಯದಲ್ಲಿಯೇ ಬರುತ್ತದೆ. ೨. ಎರಡು-ಮೂರು ವಾರಗಳಲ್ಲಿಯೇ ಅತಿ ಶೀಘ್ರವಾಗಿ ಕಾಣಿಸಿಕೊಳ್ಳುವ ೧೫ರಿಂದ ೨೫ ವರ್ಷದೊಳಗಿನವರಲ್ಲಿ ತೋರುವ ಮೋತಿಬಿಂದು (ಡಯಾಬಿಟಿಕ್ ಕೆಟರಾಕ್ಟ್)

ಸಮೀಪದೃಷ್ಟಿಅಥವಾ ದೂರದೃಷ್ಟಿ ದೋಷಗಳು ರಕ್ತದಲ್ಲಿ ಸಕ್ಕರೆಯ ಪ್ರಮಾಣ ವ್ಯತ್ಯಾಸ ಆದಂತೆ ಕಣ್ಣಿನ ಮಸೂರದಲ್ಲಿ ಉಂಟಾಗುವ ಬದಲಾವಣೆಯಿಂದ ಸಂಭವಿಸುತ್ತವೆ.

## ಲಕ್ವ

ಲಕ್ವ ಸಾಮಾನ್ಯವಾಗಿ ನಡುವಯಸ್ಸಿನಲ್ಲಿ ಕಾಣಿಸಿಕೊಳ್ಳುವ ಈ ತೊಂದರೆ ಬಹಳ ವಿರಳ. ಮೂರು-ನಾಲ್ಕು ಮತ್ತು ಆರನೆಯ ಕಪಾಲದ ನರಗಳ (ಕ್ರೇನಿಯನ್ ನರ್ವ್ಸ್) ಮೇಲೆ ಹೆಚ್ಚು ಪರಿಣಾಮ ಬೀರುವ ಈ ಕಾಯಿಲೆಯು ಆಯಾ ನರಗಳಿಗೆ ಸಂಬಂಧಪಟ್ಟ ಕಣ್ಣಿನ ಹೊರಗಿನ ಮಾಂಸಗಳ ಬಲಹೀನತೆಗೆ ಕಾರಣವಾಗುತ್ತವೆ. ಆದ್ದರಿಂದ ರೋಗಿಗೆ ಕೋಸುಗಣ್ಣು ಉಂಟಾಗಿ ಒಂದು ವಸ್ತು ಎರಡಾಗಿ ಕಾಣುವ ತೊಂದರೆ ಶುರುವಾಗುತ್ತದೆ. ಇದರ ವೈಶಿಷ್ಟ್ಯಗಳೆಂದರೆ- ಈ ಕಾಯಿಲೆಯಲ್ಲಿ ಸಾಮಾನ್ಯವಾಗಿ ಇರಬೇಕಾದ ಕೇಂದ್ರ ನರಮಂಡಲದ ಯಾವುದೇ ಚಿಹ್ನೆಯೂ ಇರುವುದಿಲ್ಲ. ಪಾಪೆ (ಪ್ಯೂಪಿಲ್)ಗೆ ಏನೂ ಆಗದಿರುವುದು ಮತ್ತು ಕೆಲವು ತಿಂಗಳಲ್ಲಿ ಯಾವುದೇ ನಿರ್ದಿಷ್ಟವಾದ ಚಿಕಿತ್ಸೆಯೂ ಇಲ್ಲದೆ ತನ್ನಷ್ಟಕ್ಕೆ ತಾನೇ ಗುಣವಾಗಿ ಕಾಯಿಲೆಯು ಪೂರ್ವದ ಸ್ಥಿತಿಗೆ ಬರುವುದು.

ಆಪ್ಟಿಕ್ ನರದುರಿತ: ಬೇರೆ ಯಾವ ತೊಂದರೆಯೂ ಇಲ್ಲದೆ ರೋಗಿಗೆ ಒಮ್ಮೆಲೇ 'ಒಂದು ಕಣ್ಣು ಕಾಣುವುದಿಲ್ಲ' ಎಂದು ಶುರುವಾದಾಗ 'ರಿಟ್ರೋಬಲ್ಬಾರ್ ನ್ಯೂರೈಟಿಸ್'ನಿಂದ ಹೊದ ಲ್ಗೊಂಡು ರೋಗಿಗೆ ಕುರುಡುತನ ತಂದುಕೊಡಬಹುದಾದ ಆಪ್ಟಿಕ್ ಅಟ್ರೋಫಿಯಂತಹ ಗಂಭೀರವಾದ ಪರಿಣಾಮದಲ್ಲಿ ಕೊನೆಗೊಳ್ಳುವುದರಿಂದ ಮೊದಲ ಹಂತದಲ್ಲಿಯೇ ರೋಗವನ್ನು ಕಂಡುಹಿಡಿದು ಚಿಕಿತ್ಸೆ ಕೊಡುವುದು ಅತ್ಯವಶ್ಯ. ಏಕೆಂದರೆ 'ರಿಟ್ರೋಬಲ್ಬಾರ್ ನ್ಯೂರೈಟಿಸ್' ಹಂತದಲ್ಲಿಯೇ ರೋಗ ಪತ್ತೆ ಹಚ್ಚಲ್ಪಟ್ಟು ಚಿಕಿತ್ಸೆಗೆ ತೊಡಗಿದ್ದರೆ ಈ ರೋಗವನ್ನು ಸಂಪೂರ್ಣವಾಗಿ ಗುಣಪಡಿಸಬಹುದು. ಸಿಹಿಮೂತ್ರ ರೋಗದಿಂದಲೂ ವಿವಿಧ ಬಗೆಯ ಕಣ್ಣಿನ ರೋಗಗಳು ಬರುತ್ತವೆ. ಎಷ್ಟೋ ಸಂದರ್ಭಗಳಲ್ಲಿ ತೀವ್ರತರವಾದ ಕಣ್ಣಿನ ಬೇನೆಯಿಂದ ನರಳುತ್ತಿರುವ ರೋಗಿಗಳಿಗೆ ಮೂತ್ರ ಮತ್ತು ರಕ್ತಪರೀಕ್ಷೆ ಮಾಡಿಸಲು ನೇತ್ರವೈದ್ಯರು ಸಲಹೆ ಮಾಡಿದಾಗ ಜನಸಾಮಾನ್ಯರು ಅಚ್ಚರಿ ವ್ಯಕ್ತಪಡಿಸುವುದೂ ಉಂಟು. ಆದರೆ ಮೊದಲ ಹಂತದಲ್ಲಿಯೇ ಗುರುತಿಸಲ್ಪಟ್ಟು ಚಿಕಿತ್ಸೆಗೆ ತೊಡಗಿದರೆ ಗುಣವಾಗುವ ಎಷ್ಟೋ ರೋಗಗಳು, ರೋಗಿಯ ಅಜ್ಞಾನ ಅಂಧಶ್ರದ್ಧೆಯಿಂದ ಚಿಕಿತ್ಸೆ ಪಡೆಯದೆ, ಅಂಧತ್ವಕ್ಕೆ ದಾರಿ ಮಾಡಿಕೊಡುತ್ತವೆ. ಇಂತಹ ಸಂದರ್ಭಗಳಲ್ಲಿ ಸೂಕ್ತ ಕಾಲದಲ್ಲಿ ನೇತ್ರ ವೈದ್ಯರ ಸಲಹೆ ಪಡೆಯುವಂತೆ ರೋಗಿಯ ಮನವೊಲಿಸುವಲ್ಲಿ ಕುಟುಂಬ ವೈದ್ಯರ ಪಾತ್ರ ಹಿರಿದು.

## ತಾರಕೆ ಸುತ್ತಿನುರಿತ

ಇಪ್ಪತ್ತನಾಲ್ಕು ವರ್ಷ ವಯಸ್ಸಿನ ಕೃಷ್ಣ ಕೂಲಿ ಕೆಲಸ ಮಾಡುವವ. ಆತನಿಗೆ ೧೫ ದಿನಗಳಿಂದ ಬಲಗಣ್ಣು ಕೆಂಪಾಯಿತು. ಎಲ್ಲರಿಗೂ ಬರುವಂತೆ 'ಕೆಂಗಣ್ಣಿ'ನ ಕಾಯಿಲೆ ಎಂದು ಆತ

ಉಪೇಕ್ಷಿಸಿದ. ಮುಂದೆ ಒಂದು ವಾರದಿಂದ ಬಲಗಣ್ಣು ಮಂಜಾಗಲುತೊಡಗಿತು. ದೂರದ ವಸ್ತುಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ ಎನಿಸಿತು. ಎಡಗಣ್ಣನ್ನು ಮುಚ್ಚಿಕೊಂಡು ನೋಡಿದಾಗ ಕಣ್ಣಿನಿಂದ ನೀರು ಒಸರಲಾರಂಭಿಸಿತು. ಪ್ರಖರವಾದ ಬೆಳಕನ್ನು ನೋಡಲು ತೊಂದರೆಯಾಗತೊಡಗಿತು. ಇಂಥ ಸ್ಥಿತಿಯಲ್ಲಾತ ಕಣ್ಣಿನ ವೈದ್ಯರಲ್ಲಿ ಬಂದ. ವಿವರವಾಗಿ ಆತನ ಕಣ್ಣನ್ನು ಪರೀಕ್ಷಿಸಿದಾಗ ಆತನಿಗೆ ಆಗಿದ್ದು ಸಾಮಾನ್ಯದ 'ಕೆಂಗಣ್ಣು' ಅಲ್ಲ ಎಂದು ಗೊತ್ತಾಯಿತು. ವಿವಿಧ ಪರೀಕ್ಷೆಗಳನ್ನು ಮಾಡಿದಾಗ ಅದು ತಾರಕೆ ಸುತ್ತಿನುರಿತ ಕಾಯಿಲೆ ಎಂಬುದು ದೃಢವಾಯಿತು.

ಃ೪ ವರ್ಷ ಪ್ರಾಯದ ಬೀರನಿಗೆ ತನ್ನ ಒಂದು ಕಣ್ಣಿನಲ್ಲಿ ಏನೋ ತೊಂದರೆಯಾಗುತ್ತದೆ ಎನಿಸಿತು. ಆದರೆ ಅವನ ಎಡಗಣ್ಣು ಕೆಂಪಾಗಿರಲಿಲ್ಲ, ಅದರಲ್ಲಿ ನೀರು ಬರುತ್ತಿರಲಿಲ್ಲ, ಬೆಳಕನ್ನು ನೋಡಲು ತೊಂದರೆಯೂ ಆಗುತ್ತಿರಲಿಲ್ಲ. ಆದರೆ ಎಡಗಣ್ಣನ್ನು ಅತ್ತಿತ್ತ ಚಲಿಸಿದಾಗ ಸಣ್ಣ ಸಣ್ಣ ಕಪ್ಪು ಚುಕ್ಕೆಗಳು ಓಡಾಡಿದಂತೆ ಭಾಸವಾಗತೊಡಗಿತು. ಮತ್ತು ಸೂಕ್ಷ್ಮವಾಗಿ ಪರೀಕ್ಷಿಸಿದಾಗ ಎಡಗಣ್ಣಿನ ದೃಷ್ಟಿ ಸ್ವಲ್ಪ ಮಂದವಾಗಿದ್ದು ಗೊತ್ತಾಯಿತು. ಈ ಎರಡು ಲಕ್ಷಣಗಳನ್ನು ಹೊರತುಪಡಿಸಿದರೆ ಆತನಿಗೆ ಬೇರೆ ಯಾವ ತೊಂದರೆಯೂ ಇರಲಿಲ್ಲ. ಆದರೆ ಎರಡು ವರ್ಷಗಳ ಹಿಂದೆ ವಿಪರೀತ ಕೆಮ್ಮು ಬರುತ್ತಿದ್ದು, ಅದು ಕ್ಷಯ ರೋಗವೆಂದು ನಿಷ್ಕರ್ಷಿಸಲ್ಪಟ್ಟು ಅದಕ್ಕಾತ ಸೂಕ್ತ ಚಿಕಿತ್ಸೆ ತೆಗೆದುಕೊಂಡಿದ್ದ. ನೇತ್ರ ವೈದ್ಯರು ವಿವರವಾಗಿ ಪರೀಕ್ಷಿಸಿದಾಗ ಆತನಿಗೆ ಕಣ್ಣಿನ 'ಹಿಂಭಾಗದ ತಾರಕೆ ಸುತ್ತಿನುರಿತ' ಆಗಿದೆ ಎಂದು ಗೊತ್ತಾಯಿತು.

ಹೀಗೆ ವಿಭಿನ್ನ ರೀತಿಯಲ್ಲಿ ಕಾಣಿಸಿಕೊಳ್ಳುವ 'ತಾರಕೆ ಸುತ್ತಿನುರಿತ' ಕಣ್ಣಿನ ಒಂದು ಗಂಭೀರ ಕಾಯಿಲೆ. ಏಕೆಂದರೆ ಇದು ಕಣ್ಣಿನ ಇತರ ಕಾಯಿಲೆಗಳಾದ ಕಣ್ಣುಬಿಟ್ಟೆ ಮತ್ತು ಗ್ಲೊಕೋಮಾ ಕಾಯಿಲೆಗಳ ರೀತಿಯಲ್ಲಿ ಕಾಣಿಸಿಕೊಂಡು ರೋಗಿ ನೇತ್ರ ವೈದ್ಯನಲ್ಲಿ ಬಂದು ಕಾಯಿಲೆ ಪತ್ತೆ ಆಗುವ ಹೊತ್ತಿಗೆ ಬಹಳಷ್ಟು ಹಾನಿಯನ್ನು ಉಂಟುಮಾಡಿರುತ್ತದೆ. ಎಷ್ಟೋ ವೇಳೆ ಕಾಯಿಲೆ ತೀರಾ ಮುಂದುವರಿದ ಹಂತದಲ್ಲಿದ್ದಾಗ ರೋಗಿ ನೇತ್ರ ವೈದ್ಯರಲ್ಲಿ ಬಂದರೆ ಕಾಯಿಲೆಯನ್ನು ಸೂಕ್ತ ರೀತಿಯಲ್ಲಿ ಪತ್ತೆ ಹಚ್ಚಿದರೂ ಮತ್ತು ಸರಿಯಾದ ಚಿಕಿತ್ಸೆ ಕೊಟ್ಟರೂ ಕಾಯಿಲೆಯನ್ನು ಸಂಪೂರ್ಣವಾಗಿ ಗುಣಪಡಿಸುವುದು ಕಷ್ಟ.

ಒಬ್ಬ ವ್ಯಕ್ತಿಯ ಕಣ್ಣು ಕಪ್ಪು, ಮತ್ತೊಬ್ಬರ ಕಣ್ಣು ಕೆಂಪು, ಇನ್ನೊಬ್ಬನದು ಬಿಳಿ ಎಂದು ಜನರು ಕಣ್ಣಿನ ಬಣ್ಣವನ್ನು ಆ ವ್ಯಕ್ತಿ ಹೊಂದಿದ 'ತಾರಕೆ' ಅಥವಾ 'ಕರಿಯಾಲಿ'ಯ ಬಣ್ಣದ ಮೇಲೆ ವರ್ಣಿಸುತ್ತಾರೆ. ತಾರಕೆ ಅಥವಾ ಕರಿಯಾಲಿ ಕಣ್ಣಿನ ಪಾರದರ್ಶಕ ಪಟಲ ಕಾರ್ನಿಯದ ಹಿಂಭಾಗದಲ್ಲಿ ಒಂದು ರೀತಿಯ ಪರದೆಯ ಹಾಗಿರುತ್ತದೆ. ಇದರ ಮಧ್ಯಭಾಗದಲ್ಲಿ ದುಂಡಗಿನ ಸಣ್ಣ ರಂಧ್ರವಿರುತ್ತದೆ. ಹೊರಗಿನಿಂದ ಒಳಗೆ ಬೆಳಕು ಸಾಗಿಸುವ ಈ ರಂಧ್ರವನ್ನೇ ನಾವು ಕಣ್ಣಿನ ಪಾಪೆ ಎಂದು ಕರೆಯುತ್ತೇವೆ. ಆರೋಗ್ಯವಂತ ವ್ಯಕ್ತಿಯಲ್ಲಿ ಬೆಳಕಿನ ವಿವಿಧ ತೀವ್ರತೆಗಳನ್ನು ಅನುಸರಿಸಿ ಅವಶ್ಯವಿರುವಷ್ಟು ಬೆಳಕನ್ನು ಮಾತ್ರ ಒಳಗೆ ಸಾಗಿಸಲು ಅನುಕೂಲವಾಗುವಂತೆ ಹಿಗ್ಗುವ ಮತ್ತು ಕುಗ್ಗುವ ಗುಣ ಈ ಪಾಪೆಗೆ ಇರುತ್ತದೆ. ಈ ಹಿಗ್ಗುವ ಮತ್ತು ಕುಗ್ಗುವ ಕೆಲಸ ಮಾಡುವ ಅಂಗಾಂಶವೇ ತಾರಕೆ ಅಥವಾ ಕರಿಯಾಲಿ. ತಾರಕೆಯ ಮುಂಭಾಗದ ಕಾಯಿಲೆಗಳಲ್ಲಿ ವಿವಿಧ ರೀತಿಯಲ್ಲಿ ತಾರಕೆಯ ಸೋಂಕಿಗೆ ಒಳಗಾಗಿ ತನ್ನ ಆಕುಂಚನ-ಪ್ರಸರಣದ ಗುಣವನ್ನು ಕಳೆದುಕೊಂಡು ವಿವಿಧ ಪ್ರಮಾಣದ ಅಂಧತ್ವಕ್ಕೆ ಕಾರಣವಾಗುತ್ತದೆ. ಕಾಯಿಲೆ ತೀವ್ರವಾದಾಗ ತಾರಕೆಯು ಸಂಪೂರ್ಣವಾಗಿ ಕುಗ್ಗಿ, ಕಣ್ಣಿನ ಪಾಪೆ ಕಾಣಿಸಿದಂತೆ ಅದರಲ್ಲಿ ಕಾಯಿಲೆಯಿಂದ ಉಂಟಾದ ವಿವಿಧ ರೀತಿಯ ಒಸರುಗಳು (exudates) ತುಂಬಿಕೊಳ್ಳುತ್ತವೆ.

ಆರಂಭಿಕ ಹಂತದಲ್ಲಿ ತೀಕ್ಷ್ಣ ಬೆಳಕು ಅಥವಾ ಬಿಸಿಲನ್ನು ನೋಡಲು ತೊಂದರೆ ಎಂದು ಆರಂಭವಾಗುತ್ತದೆ. ನಂತರ ಕೆಲವೊಮ್ಮೆ ಕಣ್ಣು ಕೆಂಪಾಗುತ್ತದೆ. ಕಣ್ಣಿನಲ್ಲಿ ನೀರು ಬರುತ್ತದೆ.

ಕಣ್ಣು ನಿಧಾನವಾಗಿ ಮಂಜಾಗಲು ತೊಡಗುತ್ತದೆ. ಆರಂಭದಲ್ಲಿ ಕೇವಲ ಒಂದು ಕಣ್ಣಿನಲ್ಲಿ ಮಾತ್ರ ಕಾಣಿಸಿಕೊಳ್ಳುವ ಈ ಲಕ್ಷಣಗಳು ನಿಧಾನವಾಗಿ ಮತ್ತೊಂದು ಕಣ್ಣಿನಲ್ಲಿಯೂ ಕಾಣಿಸಿಕೊಳ್ಳಬಹುದು. ಈ ಹಂತದಲ್ಲಿ ಸೂಕ್ಷ್ಮ ದರ್ಶಕದಿಂದ ಪರೀಕ್ಷಿಸಿದಾಗ ಕಣ್ಣಿನ ಪಾರದರ್ಶಕ ಪಟಲದ ಹಿಂಭಾಗದಲ್ಲಿ ಸಣ್ಣ ಸಣ್ಣ ತುಣುಕುಗಳು ಕಾಣಿಸಿಕೊಳ್ಳುತ್ತವೆ. ಕಣ್ಣಿನ ಪಾಪೆಯ ಭಾಗದಲ್ಲಿ ಒಸರುಗಳು ಸೇರಿಕೊಂಡು ತಾರಕೆಯ ಬೆಳಕಿಗೆ ಸ್ಪಂದಿಸುವ ಗುಣ ನಷ್ಟವಾಗಿ ತಾರಕೆಯ ರೋಗಕ್ಕೆ ತುತ್ತಾಗಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಕೆಲವೊಮ್ಮೆ ಪಾರದರ್ಶಕ ಪಟಲದ ಹಿಂಭಾಗದಲ್ಲಿ 'ಬಿಳಿಯ ಕೀವು' (hypopyon) ಕಟ್ಟಿಕೊಂಡು ಕೆಳಭಾಗದಲ್ಲಿ ಶೇಖರಗೊಂಡಿರುತ್ತದೆ. ಈ ಹಂತದಲ್ಲಿ ಆ ಕಣ್ಣಿನ ದೃಷ್ಟಿ ಗಮನಾರ್ಹವಾಗಿ ಕಡಿಮೆಯಾಗಿರುತ್ತದೆ. ಕೆಲವೊಮ್ಮೆ ಕಣ್ಣಿನ ಅಕ್ಷಿಪಟಲದ ಮಧ್ಯಭಾಗದಲ್ಲಿ (macula) ಆಗುವ ತೊಂದರೆಯಿಂದ ದೃಷ್ಟಿಪತನ ಗಮನಾರ್ಹವಾಗಿರುತ್ತದೆ.

ಮೇಲಿನ ಲಕ್ಷಣಗಳು ಮುಂಭಾಗದ ತಾರಕೆ ಸುತ್ತಿನುರಿತದಲ್ಲಿದ್ದರೆ ಹಿಂಭಾಗದ ತಾರಕೆ ಸುತ್ತಿನುರಿತದಲ್ಲಿ ರೋಗ ಲಕ್ಷಣಗಳು ಇದಕ್ಕಿಂತ ಕಡಿಮೆಯಿರುತ್ತವೆ. ಮುಖ್ಯವಾಗಿ ಯಾವುದೋ ಒಂದು ಕಣ್ಣಿನಲ್ಲಿ ದೃಷ್ಟಿ ಕಡಿಮೆಯಾಗುತ್ತ ಬರುತ್ತದೆ. ಕೆಲವರಲ್ಲಿ ಕಣ್ಣನ್ನು ಬದಿಗೆ ಹೊರಳಿಸಿದಾಗ ದೃಷ್ಟಿಯ ಕ್ಷೇತ್ರದಲ್ಲಿ ಕಪ್ಪುಚುಕ್ಕೆಗಳು ಓಡಾಡುತ್ತಿರುವಂತೆ ಕಾಣುತ್ತದೆ. ಕೆಲವರು ಕಣ್ಣಿನ ಎದುರಿಗೆ ಪರದೆ ಕಟ್ಟಿದ ಹಾಗಾಗಿದೆ ಎನ್ನುತ್ತಾರೆ.

ಈ ಎರಡರಲ್ಲಿ ಯಾವ ರೀತಿಯ ಲಕ್ಷಣ ಕಾಣಿಸಿಕೊಂಡರೂ, ನೇತ್ರ ವೈದ್ಯರು ಕಾಯಿಲೆಯ ಮೂಲ ಕಾರಣ ಹುಡುಕಬೇಕಾಗುತ್ತದೆ. ವಿವಿಧ ರಕ್ತ ಪರೀಕ್ಷೆ, ಮೂತ್ರ ಪರೀಕ್ಷೆ ಕಫ ಬರುತ್ತಿದ್ದರೆ ಅದರ ಪರೀಕ್ಷೆ ಹೀಗೆ ಹಲವು ಪರೀಕ್ಷೆಗಳನ್ನು ಕೈಗೊಂಡರೂ ರೋಗದ ಸರಿಯಾದ ಕಾರಣವನ್ನು ಕಂಡುಹಿಡಿಯುವಲ್ಲಿ ವೈದ್ಯ ವಿಫಲನಾಗುವ ಸಂದರ್ಭಗಳೇ ಜಾಸ್ತಿ. ಕೆಲವೊಮ್ಮೆ ದೈಹಿಕ ಕಾಯಿಲೆಗಳಾದ ಸಿಫಿಲಿಸ್ (ಪರಂಗಿ ರೋಗ), ಗೊನೋರಿಯಾ, ಕ್ಷಯ, ಕುಷ್ಠ ರೋಗಗಳು ತಾರಕೆ ಸುತ್ತಿನುರಿತ ಕಾಯಿಲೆಗೆ ಕಾರಣವಾಗುವ ಸಂದರ್ಭಗಳಿವೆ. ಅಂತಹ ಸಂದರ್ಭಗಳಲ್ಲಿ ಕಾಯಿಲೆಯನ್ನು ಪತ್ತೆ ಹಚ್ಚುವುದು ಸುಲಭ. ಚಿಕಿತ್ಸೆಯೂ ಸಮಾಧಾನಕರವಾಗಿರುತ್ತದೆ. ಆದರೆ ಈ ಮೇಲಿನ ಕಾಯಿಲೆಗಳಾವುವೂ ರೋಗಿಯ ತಾರಕೆ ಸುತ್ತಿನುರಿತಕ್ಕೆ ಕಾರಣವಾಗಿರದಿದ್ದಾಗ ಚಿಕಿತ್ಸೆ ಕಷ್ಟ. ಆಗ ವೈದ್ಯ ರೋಗಿಯ ದೇಹದಲ್ಲಿ ಎಲ್ಲೋ ಸೋಂಕಿನ ಅಂಶವಿದ್ದು ಅದು ಈ ಲಕ್ಷಣಗಳಿಗೆ ಕಾರಣವೆಂದು ಪರಿಗಣಿಸಿ ದೈಹಿಕ ಸೋಂಕಿಗೆ ಚಿಕಿತ್ಸೆ ಮಾಡಬೇಕಾಗುತ್ತದೆ.

ಕೆಲವೊಮ್ಮೆ ದೈಹಿಕವಾಗಿ ಯಾವ ರೀತಿಯ ಸೋಂಕು ಇಲ್ಲದಿದ್ದರೂ ಹಿಂದೆ ಆದ ಯಾವುದೋ ಸೋಂಕಿನ ಅಲರ್ಜಿಯೂ ಈ ಕಾಯಿಲೆಗೆ ಕಾರಣವಾಗಿರುವ ಸಂಭವ ಜಾಸ್ತಿ. ಆಗ ಸಹಿತ ಚಿಕಿತ್ಸೆಯನ್ನು ದೈಹಿಕ ಸೋಂಕಿನ ರೀತಿಯಲ್ಲಿಯೇ ಮಾಡಬೇಕಾಗುತ್ತದೆ.

ಪ್ರಾರಂಭಿಕ ಹಂತದಲ್ಲಿ ಸೂಕ್ತ ಚಿಕಿತ್ಸೆಗೆ ತೊಡಗಿದರೆ ಫಲಿತಾಂಶ ಉತ್ತಮ. ಕಣ್ಣಿಗೆ ಸ್ಟಿರಾಯ್ಡ್ ಹನಿಗಳು, ಅಟ್ರೊಪೀನ್ ಔಷಧ ಮತ್ತು ಕೆಲವೊಮ್ಮೆ ಆ್ಯಂಟಿಬಯಾಟಿಕ್ ಔಷಧಿಗಳನ್ನು ಹೆಚ್ಚಿನ ಅವಧಿಯವರೆಗೆ ಕೊಡಬೇಕಾಗುತ್ತದೆ. ಈ ಕಾಯಿಲೆಯ ಚಿಕಿತ್ಸೆಯಲ್ಲಿ ಗಮನಿಸಬೇಕಾದ ಅಂಶವೆಂದರೆ- ಚಿಕಿತ್ಸೆಯ ಫಲಿತಾಂಶ ಬಹಳ ನಿಧಾನ. ಇದನ್ನು ಎಷ್ಟೋ ವೇಳೆ ನೇತ್ರ ವೈದ್ಯ ರೋಗಿಗೆ ಮನದಟ್ಟು ಮಾಡಿದರೂ ಹಲವೊಮ್ಮೆ ರೋಗಿ ಕಾಯಿಲೆಯ ನಿಧಾನಗತಿಯ ಬಗ್ಗೆ ಸಂಶಯ ಹೊಂದಿ ವೈದ್ಯರನ್ನು ಬದಲಾಯಿಸಿ ಬೇರೆ ವೈದ್ಯರಲ್ಲಿ ತೋರಿಸುತ್ತಾನೆ. ಏನಿದ್ದರೂ ಬರುವ ಫಲಿತಾಂಶ ಒಂದೇ. ಮತ್ತೊಂದು ಅಂಶವೆಂದರೆ ರೋಗ ಒಂದು ಹಂತಕ್ಕೆ ಬಂದಾಗ ಕಾಯಿಲೆ ಗುಣವಾಯಿತು ಎಂದು ರೋಗಿ ಔಷಧವನ್ನು ನಿಲ್ಲಿಸುವ ಸಾಧ್ಯತೆ. ಆಗ ಕಾಯಿಲೆ ಪುನಃ ಉಲ್ಬಣಗೊಂಡು ರೋಗಿ ವೈದ್ಯನಲ್ಲಿ ಬಂದಾಗ ಮತ್ತೊಮ್ಮೆ

ಹೆಚ್ಚಿನ ಪ್ರಮಾಣದ ಸ್ಟೀರಾಯ್ಡ್ ಔಷಧಿಯನ್ನು ಕೊಡುವುದಲ್ಲದೆ, ಕೆಲವೊಮ್ಮೆ ಕಣ್ಣಿಗೆ ಇಂಜೆಕ್ಷನ್ ರೂಪದಲ್ಲಿ ಈ ಔಷಧಿಯನ್ನು ಕೊಡಬೇಕಾದ ಅನಿವಾರ್ಯತೆ ಉಂಟಾಗುತ್ತದೆ.

ಈ ಕಾಯಿಲೆಯಲ್ಲಿ ಚಿಕಿತ್ಸೆ ಸರಿಯಾಗಿ ಆಗದಿದ್ದಾಗ ಅಥವಾ ಕೆಲವೊಮ್ಮೆ ಚಿಕಿತ್ಸೆ ಸರಿಯಿದ್ದರೂ ಕಾಯಿಲೆಯು ತೀವ್ರ ಪ್ರಮಾಣದಲ್ಲಿದ್ದಾಗ ಇದರ ಮುಂದಿನ ಪರಿಣಾಮಗಳು ತೀರ ಗಂಭೀರ. ತಾರಕೆಯು ವಿವಿಧ ರೀತಿಯಲ್ಲಿ ಕುಗ್ಗಿ ಪಾರದರ್ಶಕ ಮಸೂರಕ್ಕೂ ಕಾಯಿಲೆ ಆವರಿಸಿ ಮಸೂರವನ್ನು ಅಪಾರದರ್ಶಕವನ್ನಾಗಿ ಮಾಡಿ ತಾರಕೆ ಸುತ್ತಿ ನುರಿತದಿಂದ ಕಣ್ಣಿನ ಪೊರೆ (complicated cataract) ಬರುವಂತೆ ಮಾಡುವುದಲ್ಲದೆ ಕಾಯಿಲೆ ಇನ್ನೂ ಮುಂದುವರಿದರೆ ಕಣ್ಣಿನ ಒಳಗಿನ ಅಂಗಾಂಶಗಳನ್ನೆಲ್ಲ ನಿಷ್ಕ್ರಿಯಗೊಳಿಸಿ ಇಡೀ ಕಣ್ಣನ್ನು ಅಂಧತ್ವಕ್ಕೆ ತಳ್ಳಿ ಕಣ್ಣು ಸಣ್ಣದಾಗುತ್ತ ಹೋಗುತ್ತದೆ. ಇಂತಹ ಮುಂದುವರಿದ ಹಂತದಲ್ಲಿ ಚಿಕಿತ್ಸೆ ಫಲಕಾರಿಯಾಗುವುದಿಲ್ಲ. ಹಾಗಾಗಿ ಈ ಕಾಯಿಲೆಯ ಪತ್ತೆ ಎಷ್ಟು ಬೇಗ ಆಗುತ್ತದೆ ಮತ್ತು ಚಿಕಿತ್ಸೆ ಎಷ್ಟು ತೀವ್ರವಾಗಿರುತ್ತದೆ ಎಂಬುದು ಭವಿಷ್ಯದ ಫಲಿತಾಂಶದ ದೃಷ್ಟಿಯಿಂದ ತೀರಾ ಮುಖ್ಯ.

## ಕಣ್ಣಿನ ಅಪಘಾತಗಳು

ಹೊರಗಿನ ವಾತಾವರಣಕ್ಕೆ ಸುಲಭವಾಗಿ ತನ್ನನ್ನು ಒಡ್ಡಿಕೊಂಡಿರುವ ಕಣ್ಣು ಹಲವು ಹತ್ತು ಅಪಘಾತಗಳಿಗೆ ಒಳಗಾಗಬಲ್ಲದು.

ಗಾಯ ಅಥವಾ ಅಪಘಾತಗಳಿಂದ ಕಣ್ಣನ್ನು ರಕ್ಷಿಸಲು ರೆಪ್ಪೆಗಳಿವೆ. ಆದರೆ ಈ ರಕ್ಷಣಾ ವ್ಯವಸ್ಥೆಯನ್ನು ಛಿದ್ರಗೊಳಿಸಿ ಕಣ್ಣಿಗೆ ಗಾಯ ಅಥವಾ ಅಪಘಾತಗಳು ಆಗುವ ಸಂದರ್ಭಗಳು ಹಲವಾರು. ಚೂಪಾದ ಮರದ ಅಥವಾ ವಿವಿಧ ಲೋಹಗಳ ವಸ್ತುಗಳು ಕಣ್ಣಿಗೆ ಚುಚ್ಚಿ ಹಾನಿ ಉಂಟುಮಾಡಬಲ್ಲವು. ಕಲ್ಲು ಒಡೆಯುವ ಕೆಲಸಗಾರರು ಉಪಯೋಗಿಸುವ ಉಳಿಯ ಅಥವಾ ಚಾಣದ ತುಣುಕು ಕಣ್ಣಲ್ಲಿ ಪ್ರವೇಶಿಸಿ ಒಳಗೇ ಇದ್ದು ವಿವಿಧ ರೀತಿಯ ಹಾನಿ ಉಂಟುಮಾ ಡಬಹುದು. ವಿವಿಧ ರಾಸಾಯನಿಕಗಳು ಆಮ್ಲಗಳು ಅಥವಾ ಕ್ಷಾರಗಳು ಕಣ್ಣಲ್ಲಿ ಬಿದ್ದು ಕಣ್ಣನ್ನು ಕ್ಷತಿಗ್ರಸ್ತಗೊಳಿಸಬಲ್ಲವು. ಚೂಪಾದ ವಸ್ತುಗಳೇ ಅಲ್ಲದೆ ಅಗಲ ಅಥವಾ ಚಪ್ಪಟೆಯ ವಸ್ತುಗಳೂ ಕಣ್ಣೊಳಗಿನ ವಿವಿಧ ಅಂಗಾಂಶಗಳಿಗೆ ಹಾನಿಯನ್ನುಂಟುಮಾಡಿ ವಿವಿಧ ರೀತಿಯ ಅಂಧತ್ವವನ್ನು ತರಬಲ್ಲವು.

## ಕಣ್ಣಿನೊಳಗೆ ಸೋಂಕು

ದೇಹದ ಸೂಕ್ಷ್ಮ ಅಂಗವಾದ ಕಣ್ಣು ತನಗಾದ ಅಪಮಾನಕ್ಕೆ ಹೇಗೆ ಪ್ರತಿಕ್ರಿಯಿಸುತ್ತದೆ ಎಂಬುದಕ್ಕೆ ಕಣ್ಣಿನ ಗುಡ್ಡೆ- ಕೀವಿನ ಉಂಡೆಯಾಗುವ ರೀತಿ ಒಂದು ಉತ್ತಮ ಉದಾಹರಣೆ. ಎಂಡಾಫ್ತಾಲ್ಮೈಟಿಸ್ ಎಂದು ಕರೆಯುವ ಈ ವಿಧದಲ್ಲಿ ಅಪಘಾತದಿಂದ ಉಂಟಾಗುವ ನೇರವಾದ ಗಾಯದ ಪರಿಣಾಮವಾಗಿ ಹೊರಗಿನ ವಿವಿಧ ರೀತಿಯ ಸೋಂಕು ಕಣ್ಣಿನೊಳಗೆ ಪಸರಿಸಿ ಕಣ್ಣಿನ ಒಳಗಿನ ವಿವಿಧ ಪದರುಗಳನ್ನು ಆಕಾರಗೆಡಿಸಿ ಕರ್ತವ್ಯರಹಿತವಾಗಿ ಮಾಡುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಅಪಘಾತವಾಗಿ ೨೪ರಿಂದ ೪೮ ಗಂಟೆಗಳ ಒಳಗಾಗಿ ಹಾಗೆ ಸೋಂಕು ಹರಡುವುದರಿಂದ ಈ ಲಕ್ಷಣವನ್ನು ತೀರಾ ಮೊದಲು ಗುರುತಿಸುವುದು ಬಹಳ ಮುಖ್ಯ. ಹೀಗೆ ಗುರುತಿಸಿದಾಗ ಬಹಳ ಹೆಚ್ಚಿನ ಪ್ರಮಾಣದ ಆ್ಯಂಟಿಬಯಾಟಿಕ್ ಮತ್ತು ಸ್ಟೀರಾಯ್ಡ್ ಔಷಧಿಗಳನ್ನು ಕೊಡುವುದರಿಂದ ಹೆಚ್ಚಿನ ಹಾನಿಯನ್ನು ತಪ್ಪಿಸಬಹುದು. ಕೆಲವೊಮ್ಮೆ 'ವಿಟ್ರೆಕ್ಟಮಿ' ಎಂಬ ಆಧುನಿಕ ಶಸ್ತ್ರಕ್ರಿಯೆಯಿಂದ ಒಳಗಿನ ಕೀವನ್ನು ತೆಗೆಯುವ ಸಂದರ್ಭವೂ ಬರುತ್ತದೆ. ಆದರೆ ಈ ಎಲ್ಲ ಚಿಕಿತ್ಸೆಯನ್ನು ಮಾಡಿದರೂ ಕೀವಿಗೆ ಕಾರಣವಾಗುವ ಸೂಕ್ಷ್ಮ ಕ್ರಿಮಿಗಳು ತೀರಾ ಪ್ರಬಲವಾಗಿದ್ದರೆ ಚಿಕಿತ್ಸೆಯು ಫಲಪ್ರದವಾಗದೆ ಕ್ರಮೇಣವಾಗಿ ಅಂಧತ್ವ ಬರುತ್ತದೆ ಎಂಬುದು

ದುರದೃಷ್ಟಕರ.

## ಪಾರದರ್ಶಕ ಛಿದ್ರ

ಈ ರೀತಿಯ ಮೊನಚಾದ ವಸ್ತುಗಳು ಹೆಚ್ಚಿನ ಸಂದರ್ಭಗಳಲ್ಲಿ ಕಣ್ಣಿನ ಹೊರಗಿನ ಪಾರದರ್ಶಕ ಭಾಗವಾದ ಕಾರ್ನಿಯವನ್ನು ಛಿದ್ರಗೊಳಿಸಬಹುದು. ಅಥವಾ ಕಾರ್ನಿಯದ ಬದಿಯ ಭಾಗವಾದ ಬಿಳಿಯ ಬಣ್ಣದ ಕಣ್ಣಿನ ಹೊರಕವಚ ಒಳಪದರ (sclera)ವನ್ನು ಛಿದ್ರಗೊಳಿಸ ಬಹುದು. ಅಂತಹ ಸಂದರ್ಭಗಳಲ್ಲಿ ಕಣ್ಣಿನ ಒಳಗಿನ ಅಂಗಾಂಶವಾದ ತಾರಕೆಯು ಹೀಗೆ ಉಂಟಾದ ಗಾಯದ ಮೂಲಕ ಹೊರಗೆ ಬರುವ ಸಾಧ್ಯತೆ ಬಹಳ. ಹೊರಗೆ ಬಂದ ತಾರಕೆಯನ್ನು ಹಾಗೆಯೇ ಬಿಟ್ಟರೆ ಅದಕ್ಕೆ ಸೋಂಕು ಉಂಟಾಗಿ ಇಡೀ ಕಣ್ಣಿಗೇ ಮಾರಕವಾಗ ಬಹುದು.

ಹಾಗಾಗಿ ಈ ರೀತಿಯ ಅಪಘಾತಗಳಲ್ಲಿ ಕೊಡಿಸಬೇಕಾದ ಚಿಕಿತ್ಸೆ ಎಂದರೆ ಶಸ್ತ್ರಕ್ರಿಯೆ ಮಾಡಿ ಹೊರಬಂದ ತಾರಕೆಯನ್ನು ಕತ್ತರಿಸಿ, ಉಂಟಾದ ಗಾಯವನ್ನು ಸೂಕ್ಷ್ಮವಾದ ನೂಲೆಳೆಗಳಿಂದ ನಾಜೂಕಾಗಿ ಹೊಲಿಯುವುದು. ಉಂಟಾದ ಗಾಯ ಒಳಪದರಕ್ಕೆ ಮಾತ್ರ ಸೀಮಿತವಾಗಿದ್ದು, ತೀರಾ ಸ್ವಲ್ಪ ತಾರಕೆ ಹೊರಗೆ ಬಂದಿದ್ದರೆ, ಚಿಕಿತ್ಸೆಯ ನಂತರ ಈ ರೀತಿಯ ಕಣ್ಣುಗಳಿಗೆ ದೃಷ್ಟಿಯ ವಿಷಯದಲ್ಲಿ ಬಹಳ ಹಾನಿಯಾಗುವುದಿಲ್ಲ. ಆದರೆ ಹೀಗೆ ಅಪಘಾತದಿಂದ ಉಂಟಾದ ಗಾಯ, ಕಾರ್ನಿಯದ ಭಾಗದಲ್ಲಿ ಹೆಚ್ಚಾಗಿದ್ದಾಗ ಮತ್ತು ಹೆಚ್ಚು ಪ್ರಮಾಣದಲ್ಲಿ ತಾರಕೆ ಹೊರಬಂದಾಗ ಚಿಕಿತ್ಸೆಯ ನಂತರದಲ್ಲಿ ದೃಷ್ಟಿ ತೀವ್ರವಾಗಿ ಪತನವಾಗುತ್ತದೆ. ಇದಕ್ಕೆ ಕಾರಣ ಎಂದರೆ ಕಾರ್ನಿಯದ ಪದರ ಅಪಘಾತದ ಸಂದರ್ಭಗಳಲ್ಲಿ ಛಿದ್ರಗೊಂಡಾಗ ಸ್ವಲ್ಪ ಪ್ರಮಾಣದ ನೀರನ್ನು ಹೀರಿಕೊಂಡು ಊದಿಕೊಳ್ಳುತ್ತದೆ. ನಂತರ ಚಿಕಿತ್ಸೆಗಾಗಿ ಶಸ್ತ್ರಕ್ರಿಯೆ ನಡೆಸುವಾಗ ನೂಲೆಳೆಗಳನ್ನು ಛಿದ್ರಗೊಂಡ ಎರಡು ಕೊನೆಗಳಲ್ಲಿ ಮುಚ್ಚಿದಾಗ- ಈ ಊತ ಹೆಚ್ಚಾಗಿ ಪಾರದರ್ಶಕ ಕಾರ್ನಿಯ ಈ ಭಾಗದಲ್ಲಿ ಕಲೆಯಾಗಿ ಮಾರ್ಪಡುತ್ತದೆ. ಆಗ ಬೆಳಕು ಒಳಹೋಗುವ ಭಾಗವಾದ ಕಾರ್ನಿಯದಲ್ಲೇ ಈ ರೀತಿ ಕಲೆ ಉಂಟಾದಾಗ ಆ ಕಣ್ಣು ಮಂದವಾಗುವುದು ಸ್ವಾಭಾವಿಕ.

## ಕಣ್ಣಿನ ಪೊರೆ

ಕಣ್ಣಿನೊಳಗಡೆ ಇರುವ ಮಸೂರಕ್ಕೆ ಅಥವಾ ಅದರ ಕವಚಕ್ಕೆ ಏಟು ಬಿದ್ದರೆ ಕಣ್ಣಿನ ಪೊರೆ ಕಾಣಿಸಿಕೊಳ್ಳುತ್ತದೆ. ಏಟಿನ ತೀವ್ರತೆ ಎಷ್ಟು ಪ್ರಮಾಣದಲ್ಲಿ ಮಸೂರವನ್ನು ಈ ಪೊರೆ ಆಕ್ರಮಿಸಿದೆ ಎಂಬುದರ ಮೇಲೆ ವಿವಿಧ ರೀತಿಯ ಕಣ್ಣಿನ ಪೊರೆ ಉಂಟಾಗುತ್ತದೆ. ಆದರೆ ಯಾವುದೇ ರೀತಿಯಾದರೂ ದೃಷ್ಟಿಯನ್ನು ಇದು ಬಹಳವಾಗಿ ಕುಂಠಿತಗೊಳಿಸುತ್ತದೆ ಎಂಬುದು ಗಮ ನಾರ್ಹ. ಇದರ ಚಿಕಿತ್ಸೆ ಎಂದರೆ ಸೂಕ್ತ ಸಂದರ್ಭದಲ್ಲಿ ಈ ಕಣ್ಣಿನ ಪೊರೆಯನ್ನು ಶಸ್ತ್ರಚಿಕಿತ್ಸೆಯ ಮುಖಾಂತರ ತೆಗೆಯುವುದು. ಕೆಲವೊಮ್ಮೆ ಏಟಿನ ಕಾರಣದಿಂದ ಮಸೂರ ಹಿಂದೆ ಜರುಗಿ ಅಥವಾ ಮುಂದೆ ಬಂದು ವಿವಿಧ ರೀತಿಯ ತೊಂದರೆಯನ್ನುಂಟು ಮಾಡಬಲ್ಲದು. ಅದರಲ್ಲಿ ಮುಖ್ಯವಾದದ್ದೆಂದರೆ ಕಣ್ಣಿನ ಒತ್ತಡವನ್ನು ಹೆಚ್ಚಿಸುವ ಗ್ಲೊಕೊಮಾ ಎಂಬ ಕಣ್ಣಿನ ಕಾಯಿಲೆ.

ಕಣ್ಣಿನ ಅಪಘಾತದ ಇನ್ನೊಂದು ವಿಧವೆಂದರೆ ಅಪಘಾತದ ಸಂದರ್ಭದಲ್ಲಿ ಕಣ್ಣಿನ ಪದರಗಳು ಛಿದ್ರಗೊಂಡಿರುವುದನ್ನು ಅಲ್ಲದೆ, ಕಣ್ಣಿನ ಒಳಗಡೆ ಯಾವುದೋ ಹೊರಗಿನ ವಸ್ತು ಒಳಗೆ ಸೇರುವುದು. ಇಂತಹ ಸಂದರ್ಭಗಳು ಕಬ್ಬಿಣ ಅಥವಾ ಉಕ್ಕಿನ ಕೆಲಸ ಮಾಡುವ ವಿವಿಧ ಕೈಗಾರಿಕೆಗಳ ಕೆಲಸಗಾರರಿಗೆ ಎದುರಾಗಬಹುದು. ಸ್ಫೋಟಕ ವಸ್ತುಗಳನ್ನು ಸ್ಫೋಟಿಸುವ ಗಣಿಗಳಲ್ಲಿ ಅಥವಾ ಕಲ್ಲು ಗಣಿಗಳಲ್ಲಿ ಕೆಲಸ ಮಾಡುವ ಕೂಲಿಗಳಲ್ಲಿ ಇಂತಹ ಪ್ರಸಂಗಗಳು

ಎದುರಾಗಬಹುದು. ಅಥವಾ ಆಟವಾಡುತ್ತಿರುವ ಪುಟಾಣಿಗಳಲ್ಲಿಯೂ ಹೀಗಾಗಬಹುದು. ಈ ರೀತಿ ಕಣ್ಣಿನ ಒಳಪ್ರವೇಶಿಸುವ ವಿವಿಧ ವಸ್ತುಗಳ ಅಳತೆ ಮತ್ತು ವೇಗ ಕಣ್ಣಿಗೆ ಉಂಟುಮಾಡುವ ಹಾನಿಯ ಪ್ರಮಾಣವನ್ನು, ತೀವ್ರತೆಯನ್ನು ನಿರ್ಧರಿಸುತ್ತದೆ. ಸಣ್ಣ ಪದಾರ್ಥಗಳು ಕಡಿಮೆ ವೇಗದಲ್ಲಿ ಕಣ್ಣಿಗೆ ಬಡಿದರೆ ಕಣ್ಣಿನ ಮುಂಭಾಗದ ಪಾರದರ್ಶಕ ಕಾರ್ನಿಯದ ಮೇಲೆ ಕುಳಿತುಕೊಳ್ಳಬಹುದು. ಆಗ ಅವುಗಳನ್ನು ಸುಲಭವಾಗಿ ತೆಗೆಯಬಹುದು ಮತ್ತು ಆಗ ಕಣ್ಣಿಗೆ ಉಂಟಾಗುವ ಹಾನಿಯೂ ಕಡಿಮೆ. ಆದರೆ ಅದೇ ಸಣ್ಣ ಪದಾರ್ಥಗಳು ವಿಪರೀತ ವೇಗದಿಂದ ಬಂದು ಬಡಿಯುವಾಗ, ಸಾಮಾನ್ಯವಾಗಿ ಪದಾರ್ಥಗಳ ಪ್ರವೇಶವನ್ನು ವಿರೋಧಿಸುವ ಕಣ್ಣಿನ ಭಾಗಗಳು ಅಸಹಾಯಕವಾಗುತ್ತವೆ. ಹೀಗೆ ವಿಪರೀತ ವೇಗದಲ್ಲಿ ಚಲಿಸುವ ವಸ್ತು ಗಾತ್ರದಲ್ಲಿ, ಅಳತೆಯಲ್ಲಿ ದೊಡ್ಡದಿದ್ದರೆ ಅದು ಕಣ್ಣಿನ ವಿವಿಧ ಭಾಗಗಳಿಗೆ ಬಹಳ ನಷ್ಟ ಉಂಟುಮಾಡಿ ದೃಷ್ಟಿಗೆ ತೀವ್ರಗತಿಯಲ್ಲಿ ತೊಂದರೆಯೊಡ್ಡಿ, ಮತ್ತೆ ಒದಗಬಹುದಾದ ಸೋಂಕಿನ ಭಯದಿಂದ ಇಡೀ ಕಣ್ಣನ್ನೇ ತೆಗೆಯುವ ಅನಿವಾರ್ಯತೆ ನೇತ್ರ ವೈದ್ಯನಿಗೆ ಉಂಟುಮಾಡಬಹುದು. ಒಳಗೆ ಪ್ರವೇಶಿಸಿದ ವಸ್ತು ಕಣ್ಣಿನ ಹಿಂಭಾಗದಿಂದ ಹೊರಬಂದು ನಂತರ ದೊರಕುವ ಮೂಳೆಯಿಂದ ತಡೆಯಲ್ಪಡುವಷ್ಟು ಈ ವೇಗ ತೀವ್ರವಾಗಿರುವುದೂ ಉಂಟು.

ಈ ಎಲ್ಲ ಕಾರಣಗಳಿಂದ ಅಪಘಾತ ಸಂಭವಿಸುವುದಕ್ಕೆ ಮೊದಲೇ ವಿವಿಧ ಕ್ರಮಗಳನ್ನು ಅನುಸರಿಸಿ ಕಣ್ಣಿನ ಅಪಘಾತಗಳನ್ನು ತಡೆಗಟ್ಟಲು ಯತ್ನಿಸುವುದು ಹೆಚ್ಚು ಪರಿಣಾಮಕರ.

ಉದಾಹರಣೆಗೆ ಆಡುವ ಮಕ್ಕಳನ್ನು ಮೊನಚಾದ ವಸ್ತುಗಳಿಂದ ವಿಮುಖಗೊಳಿಸುವುದು, ಸ್ಫೋಟಕ ವಸ್ತುಗಳ ಜೊತೆ ಕೆಲಸ ಮಾಡುವ ಕಾರ್ಮಿಕರಲ್ಲಿ ಕಣ್ಣಿಗೆ ಸೂಕ್ತ ರಕ್ಷಣಾ ಕವಚ ಧರಿಸುವಂತೆ ಮಾಡುವುದು, ಆಮ್ಲ ಮತ್ತು ಕ್ಷಾರಗಳ ಜೊತೆ ಕೆಲಸ ಮಾಡುವವರಿಗೆ ಸೂಕ್ತ ರಕ್ಷಣೆ ಒದಗಿಸುವುದು ಇತ್ಯಾದಿ. ಆದರೆ ಅಪಘಾತವೇ ಆದಾಗ ಆದಷ್ಟು ಬೇಗ ಸೂಕ್ತ ವೈದ್ಯರಿಂದ ಪರೀಕ್ಷಿಸಿ ಕ್ಲುಪ್ತ ಸಮಯದಲ್ಲಿಯೇ ಚಿಕಿತ್ಸೆ ಕೊಡಿಸುವುದು ತೀರ ಅವಶ್ಯ.

ಈ ಎಲ್ಲ ಕಾಯಿಲೆಗಳ ವಿವರಗಳ ನಂತರ ಗಮನಿಸಬೇಕಾದ ಅಂಶವೆಂದರೆ- ದೇಹದ ಬೇರೆ ಭಾಗಗಳ ಕಾಯಿಲೆಗಳಿಗಿಂತ ಸೂಕ್ಷ್ಮ ಅಂಗವಾದ ಕಣ್ಣಿನ ಕಾಯಿಲೆ ಬೇಗ ಪತ್ತೆಹಚ್ಚಲ್ಪಡಬೇಕು. ಇಲ್ಲದಿದ್ದರೆ ರೋಗಿಗೆ ಮುಂದೆ ಯಾವುದೇ ರೀತಿಯಲ್ಲೂ ಗುಣಪಡಿಸಲು ಸಾಧ್ಯವಾಗದ ರೀತಿಯಲ್ಲಿ ಕಾಯಿಲೆ ಮುಂದುವರಿದು, ಶಾಶ್ವತ ಕುರುಡುತನ ಉಂಟಾಗುವ ಸಾಧ್ಯತೆಯಿದೆ. ಹೀಗಾಗಿ ಕಣ್ಣಿನ ಕಾಯಿಲೆಗಳ ಬಗ್ಗೆ ಉಪೇಕ್ಷೆ ಮಾಡುವುದು ಯಾವುದೇ ರೀತಿಯಲ್ಲೂ ಸಲ್ಲದು.

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**
**Registered with the Registrar of Newspaper for India under No. 3633/57.**




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

**ಪ್ರಸಾರಾಂಗ ವ್ಯವಸ್ಥಾಪಕರು**

ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

KASTURI, Kannada Digest Reg No. KRNG-43,
Licence No. L2120 - WPP No. 33 Price - Rs. 6-00